ಮೂವತ್ತಾರನೇ ಪ್ರಕಟನೆ :




# ಸತಿ ವಿರಾಜ್

ಸಾಮಾಜಿಕ ಕಾದಂಬರಿ

*

**ದಿ. ಶರಚ್ಚಂದ್ರ ಚಟ್ಟೋಪಾಧ್ಯಾಯ**

*

ಅನುವಾದಕರು :

**ಮು. ವೆಂಕಟೇಶ**

*

ಸಾಹಿತ್ಯ ಭಂಡಾರ, ಹುಬ್ಬಳ್ಳಿ

# ಪ್ರಕಾಶಕರ ಎರಡು ಮಾತು

ದಿವಂಗತ ಶರಚ್ಚಂದ್ರ ಚಟ್ಟೋಪಾಧ್ಯಾಯರ ಈ ಕಾದಂಬರಿ ಅನುವಾದಿತವಾಗಿ ಮೊದಲ ಸಲ ಪ್ರಕಟವಾದದ್ದು ೧೯೪೫ರಲ್ಲಿ. ಇದರ ಪ್ರತಿಗಳು ಮುಗಿಯಬಂದು, ಫೈಲಿಯಲ್ಲಿ ಅಲ್ಲಲ್ಲಿ ತಿದ್ದಿದ ಹಸ್ತಪ್ರತಿ ಹೊಸ ಆವೃತ್ತಿಗಾಗಿ ಮುದ್ರಣಾಲಯಕ್ಕೆ ಹೋಗುವ ಸ್ಥಿತಿಯಲ್ಲಿದ್ದಾಗ, ಇದೇ ಕಾದಂಬರಿಯ ಇನ್ನೊಂದು ಭಾಷಾಂತರ—'ನಾರೀಮಣಿ' ಎಂಬ ಹೆಸರಿನಿಂದ—ಬೆಂಗಳೂರಿನ ಇನ್ನೊಬ್ಬ ಪ್ರಕಾಶಕರಿಂದ ಪ್ರಕಟವಾಯಿತು. ಆದುದರಿಂದ, ನಮ್ಮ ಈ ಆವೃತ್ತಿಯ ಪ್ರಕಟನೆಯನ್ನು ಈ ವರೆಗೆ ಮುಂದಕ್ಕೆ ತಳ್ಳಬೇಕಾಯಿತು. ಅಂತೂ ಇದು ಈಗ ಪ್ರಕಟವಾಗುತ್ತಿದೆ.

ಕನ್ನಡದಲ್ಲಿ ದಿ. ಶರಚ್ಚಂದ್ರರ ಹತ್ತೆಂಟು ಕಾದಂಬರಿಗಳ ಎರಡೆರಡು ಭಾಷಾಂತರಗಳು—ಕೆಲವೊಮ್ಮೆ ಮೂರು ಭಾಷಾಂತರಗಳು, ಅದೂ ಹಿಂದಿನ ಅನುವಾದಗಳು ಪ್ರಚಾರದಲ್ಲಿರುವಾಗ—ಪ್ರಕಟವಾಗಿವೆ. ಸಾಹಿತ್ಯವು ವಿಸ್ತಾರವಾಗಬೇಕು, ಆಳವೂ ಎತ್ತರವೂ ಆಗಬೇಕು, ವೈವಿಧ್ಯವುಳ್ಳದ್ದಾಗಬೇಕು, ಎಂದು ಬಯಸುವ ಪ್ರತಿಯೊಬ್ಬನೂ ಇತರ ಭಾಷೆಗಳ ಕೃತಿರತ್ನಗಳ ಅನುವಾದವನ್ನು ತನ್ನ ಭಾಷೆಯಲ್ಲಿಯೂ ಸ್ವಾಗತಿಸದಿರಲಾರ.

ಆದರೆ ಓದುಗರ ಸಂಖ್ಯೆಯ ವಿಷಯದಲ್ಲಿ ಯಾವಾಗಲೂ ದಾರಿದ್ರ್ಯವನ್ನನುಭವಿಸುತ್ತಿರುವ ಕನ್ನಡದಂತಹ ಸಾಹಿತ್ಯಕ್ಷೇತ್ರಕ್ಕೆ ಇಂತಹ ಸ್ಪರ್ಧೆಯನ್ನು ಜೀರ್ಣಿಸಿಕೊಳ್ಳುವ ಶಕ್ತಿ ಇದೆಯೆ? ಕನ್ನಡದಲ್ಲಿ ಬೇಕಾದಷ್ಟು ಜನ ಸ್ವತಂತ್ರ ಗ್ರಂಥಕರ್ತರಿದ್ದಾರೆ. ಕೃಷಿ ಮಾಡಬಯಸುವವರಿಗೆ ಕ್ಷೇತ್ರವೂ ವಿಸ್ತಾರವಾದದ್ದಿದೆ. ಅನುವಾದಗಳೇ ಬೇಕಾಗಿದ್ದಲ್ಲಿ ಅದಕ್ಕೆ ಯೋಗ್ಯವಾದ ಶ್ರೇಷ್ಠ ಕೃತಿಗಳೂ ಬೇರೆ ಭಾಷೆಗಳಲ್ಲಿ ಬೇಕಾದಷ್ಟಿವೆ. ಹೀಗಿದ್ದೂ, ಒಬ್ಬರು ಪ್ರವೇಶಿಸಿದ ಒಂದು ವಿಶಿಷ್ಟ ಕ್ಷೇತ್ರಕ್ಕಾಗಿ ಉಳಿದವರೂ ಅಪೇಕ್ಷೆಪಡುವುದೇಕೆ? ವಿನಾಶಕಾರಿಯಾದ ಈ ಸ್ಪರ್ಧೆಯಿಂದ ಯಾರಿಗೆ ಹಿತವಿದೆ?—ಅನುವಾದಕರಿಗಿದೆಯೆ, ಪ್ರಕಾಶಕರಿಗಿದೆಯೆ, ಅಥವಾ ಹೆಸರಿನ ಬದಲಾವಣೆಯ ಮೂಲಕ ಒಂದೇ ಕೃತಿಯ ಎರಡು ಅನುವಾದಗಳನ್ನು ಕೊಂಡು ಮೋಸಹೋದ ಓದುಗನಿ-

ಗಿದೆಯೆ ? ಕನ್ನಡದಲ್ಲಿ ಈ ಪಾಡು ಶರಚ್ಚಂದ್ರರ ಕಾದಂಬರಿಗಳಿಗಷ್ಟೇ ಅಲ್ಲ; ವಿಶ್ವಕವಿ ರವೀಂದ್ರನಾಥ ಠಾಕೂರರ ಕೃತಿಗಳಿಗೂ ಬಂದೊದಗಿದೆ.

ಸಾಂಸ್ಕೃತಿಕ ಚಟುವಟಿಕೆಯ ಈ ವ್ಯವಹಾರದಲ್ಲಿ ಗ್ರಂಥಕರ್ತನಿಗೂ ಪ್ರಕಾಶಕನಿಗೂ ಕೆಲವೊಂದು ಹೊಣೆಗಳಿವೆ. ಅವನು ಸಾಹಿತ್ಯಸೇವೆಯ ದೃಷ್ಟಿಯಿಂದ, ಓದುಗನ ದೃಷ್ಟಿಯಿಂದ, ಈ ಉದ್ಯಮದ ಪಾವಿತ್ರ್ಯ ರಕ್ಷಣೆಯ ದೃಷ್ಟಿಯಿಂದ, ಮತ್ತು ತನ್ನ ದೃಷ್ಟಿಯಿಂದ ಹಲವಾರು ನೈತಿಕ ನಿರ್ಬಂಧಗಳಿಗೊಳಪಟ್ಟು ಮುಂದುವರಿಯಬೇಕಾಗುವುದು. ಪ್ರಕಾಶನ ಕ್ಷೇತ್ರದ ಘನತೆಯ ಮಾತು ಒಂದು ಕಡೆಗಿರಲಿ; ತಮ್ಮ ಯೋಗಕ್ಷೇಮಕ್ಕೂ ಸಹಾಯಕವಾಗದ ಇಂಥ ದಾರಿಯಿಂದ ವಿಮುಖರಾಗುವ ಸದ್ಬುದ್ಧಿಯನ್ನು ದೇವರು ನಮಗೆ ಕೊಡಲಿ.

ಇತಿ

**—ಪ್ರಕಾಶಕ**

# ಸತಿ ವಿರಾಜ್

## ೧

ಸಪ್ತಗ್ರಾಮವು ಬಂಗಾಲದ ಹುಗುಳಿ ಜಿಲ್ಲೆಯ ಒಂದು ಹಳ್ಳಿ. ನೀಲಾಂಬರ ಚಕ್ರವರ್ತಿ, ಪೀತಾಂಬರ ಚಕ್ರವರ್ತಿ ಎಂಬ ಇಬ್ಬರು ಅಣ್ಣ ತಮ್ಮಂದಿರು ಅಲ್ಲಿಯ ನಿವಾಸಿಗಳು. ನೀಲಾಂಬರ ಚಕ್ರವರ್ತಿಯಲ್ಲಿ ಕೆಲವು ವಿಶಿಷ್ಟ ಗುಣಗಳಿದ್ದವು. ಯಾರಾದರೂ ಸತ್ತರೆಂಬ ಸುದ್ದಿ ಕಿವಿಗೆ ಬೀಳುವುದೇ ತಡ, ಮೃತನ ಅಗ್ನಿಸಂಸ್ಕಾರಕ್ಕಾಗಿ ಅವನ ಕುಟುಂಬಕ್ಕೆ ನೆರವಾಗಲು ಅವನು ತಕ್ಷಣ ಸಿದ್ಧನಾಗುತ್ತಿದ್ದ. ಭಜನೆ ಮಾಡುವುದು, ಡೊಳ್ಳು ಬಾರಿಸುವುದು, ಭಂಗಿ ಸೇದುವುದು, ಇವೇ ಅವನ ನಿತ್ಯಕರ್ಮಗಳು. ಈ ಎಲ್ಲಾ ಮಾತುಗಳಲ್ಲಿ ತಾನೇ ಶ್ರೇಷ್ಠನೆಂಬ ಹೆಮ್ಮೆ ಅವನಿಗಿರಲಿಲ್ಲ.. ಅವನ ಎತ್ತರವಾದ ಗೌರವರ್ಣದ ಶರೀರದಲ್ಲಿ ಅಸಾಧಾರಣ ಬಲವಿತ್ತು. ಪರೋಪಕಾರಿಯೆಂದು ಅವನು ಹಳ್ಳಿಯಲ್ಲೆಲ್ಲ ತುಂಬಾ ಹೆಸರಾಗಿದ್ದನು. ಆದರೂ, ಅವನನ್ನು ನಿಂದಿಸುವವರೂ ಇಲ್ಲದಿರಲಿಲ್ಲ. ಅವನು ಹಳ್ಳಿಯ ಪೆದ್ದನೆಂದು ಹಳಿಯುವ ಅನೇಕ ಜನರೂ ಇದ್ದರು.

ನೀಲಾಂಬರನ ತಮ್ಮ ಪೀತಾಂಬರ ತೀರ ಭಿನ್ನಪ್ರಕೃತಿಯ ಮನುಷ್ಯ. ಅವನು ನೀಲಾಂಬರನಂತೆ ಎತ್ತರನೂ ಅಲ್ಲ, ಬಲಿಷ್ಠನೂ ಅಲ್ಲ. ಬಡವಾದ ಕುಳ್ಳು ದೇಹ ಅವನದು. ಸಾವಿನ ಸುದ್ದಿ ಕೇಳಿದರೆ ಮೈಮೇಲೆ ಮುಳ್ಳು ಬಂದಂತಾಗಿ ಅವನ ಕೈಕಾಲುಗಳೇ ಏಳುತ್ತಿದ್ದಿಲ್ಲ. ಅಣ್ಣನಂತೆ ಆತ ಅಲೌಕಿಕ ವ್ಯಕ್ತಿಯೂ ಆಗಿರಲಿಲ್ಲ. ಹಳ್ಳಿಯ ಪೆದ್ದನೆಂದು ಕರೆಸಿಕೊಳ್ಳುವ ಯಾವ ಕೆಲಸವನ್ನೂ ಅವನು ಮರೆತು ಕೂಡ ಮಾಡುತ್ತಿರಲಿಲ್ಲ.

ಬೆಳಿಗ್ಗೆ ಊಟ–ಉಡಿಗೆ ಮುಗಿಸಿ ಕುಂಕುಳಲ್ಲಿ .ಕಾಗದಪತ್ರದ ಗಂಟಿಟ್ಟು ಕೊಂಡು ಪೀತಾಂಬರ ಮನೆಯಿಂದ ಹೊರ ಹೊರಡುತಿದ್ದ. ಹುಗುಳಿ ಕಚೇರಿಯನ್ನು ಸೇರಿದ ನಂತರ ಹತ್ತಿರದ ಆಲದ ಮರದಡಿಯಲ್ಲಿ ತನ್ನ ಆಸನ ಹಾಕುತಿದ್ದ. ಅಲ್ಲಿಯೆ ಕುಳಿತು ದಿನವೆಲ್ಲವೂ ಜನರ ಅರ್ಜಿಗಳನ್ನು ಬರೆದು ಕೊಡು

ತಿದ್ದ. ಇದರಿಂದ ದೊರೆತಷ್ಟು ಹಣವನ್ನು ತೆಗೆದುಕೊಂಡು ಸಂಜೆಗೆ ಮುನ್ನ ಮನೆ ಸೇರುತಿದ್ದ. ಒಡನೆಯೆ, ತಾನು ದಿನವೆಲ್ಲವೂ ಶ್ರಮವಹಿಸಿ ಗಳಿಸಿದ ಹಣವನ್ನು ಪೆಟ್ಟಿಗೆಯಲ್ಲಿರಿಸುತಿದ್ದ. ರಾತ್ರಿ ಮಲಗುವ ಮುನ್ನ ತಾನೇ ಬಾಗಿಲು ಕಿಟಿಕೆಗಳನ್ನು ಮುಚ್ಚಿ ಹೆಂಡತಿಯಿಂದ ಅವುಗಳನ್ನು ಅನೇಕ ಸಲ ನೋಡಿಸಿದ ನಂತರವೆ ನಿದ್ದೆಹೋಗುತಿದ್ದ.

ಇಂದು ನಸುಕಿನಲ್ಲಿ ನೀಲಾಂಬರ ದೇವೀಮಂದಿರದ ಒಂದು ಮೂಲೆಯಲ್ಲಿ ಕುಳಿತು ಹೊಗೆಸೊಪ್ಪು ಸೇದುತಿದ್ದ. ಅಷ್ಟರಲ್ಲಿ ಅವನ ಅವಿವಾಹಿತ ತಂಗಿ ಹರಿಮತಿ ಅಲ್ಲಿಗೆ ಸದ್ದಿಲ್ಲದೆ ಬಂದು ಅವನ ಹಿಂದೆ ಮೊಂಡೆಯೂರಿ ಕುಳಿತು ಅವನ ಬೆನ್ನಿನ ಹಿಂದೆ ಮುಖ ಮರೆಸಿ ಅಳತೊಡಗಿದಳು. ನೀಲಾಂಬರ ಗುಡುಗುಡಿಯನ್ನು ಗೋಡೆಗೆ ಒರಗಿಸಿ ಅಂದಾಜಿನಿಂದ ತನ್ನ ಕೈಯನ್ನು ಹಿಂದಕ್ಕೆ ಚಾಚಿ ತಂಗಿಯ ತಲೆಯ ಮೇಲೆ ಇಟ್ಟ. ಬಳಿಕ ಸ್ನೇಹಪೂರ್ವಕವಾಗಿ– " ನಸುಕಿನಲ್ಲಿಯೇ ಏಕೆ ಅಳುತ್ತಿರುವೆ ತಂಗೀ ? " ಎಂದು ಕೇಳಿದ.

ಹರಿಮತಿ ತನ್ನ ಕಣ್ಣು ಉಜ್ಜಿಕೊಳ್ಳುತ್ತ ಅಣ್ಣನ ಬೆನ್ನನ್ನೆಲ್ಲಾ ತೋಯಿಸುತ್ತ– " ಅತ್ತಿಗೆ ನನ್ನ ಕೆನ್ನೆಗೆ ಹೊಡೆದು ಕುರುಡಿಯೆಂದು ಬಯ್ದಳು " ಎಂದು ದೂರು ಹೇಳಿದಳು.

ನೀಲಾಂಬರ ನಗುತ್ತ– " ಕುರುಡಿ ಎಂದು ಬಯ್ದಳೆ ? ಇಷ್ಟು ಸುಂದರ ಕಣ್ಣುಗಳಿದ್ದೂ ನಿನಗೆ ಕುರುಡಿ ಎಂದು ಬಯ್ಯುವ ಅವಳೇ ಕುರುಡಿಯಾಗಿರಬಹುದು. ಆದರೆ ಅವಳು ನಿನಗೆ ಹೊಡೆದದ್ದೇಕೆ ? " ಎಂದ.

ಹರಿಮತಿ ಅಳುತ್ತಳುತ್ತ– ' ಸುಮ್ಮನೆ ' ಎಂದಳು.

" ಕಾರಣವಿಲ್ಲದೆ ? ಸರಿ, ವಿಚಾರಿಸೋಣ ನಡೆ " ಎಂದು ತಂಗಿಯ ಕೈ ಹಿಡಿದುಕೊಂಡು ಮನೆಗೆ ಬಂದವನೆ " ವಿರಾಜ್ " ಎಂದು ಕೂಗಿದ ನೀಲಾಂಬರ.

ಹಿರಿ ಸೊಸೆಯ ಹೆಸರು ವಿರಾಜ್. ಒಂಬತ್ತನೇ ವಯಸ್ಸಿಗೇ ಅವಳ ಮದುವೆಯಾಯಿತು. ಅವಳು ಈ ಮನೆಯಲ್ಲಿ ಕಾಲಿಟ್ಟಂದಿನಿಂದ ವಿರಾಜ್ ಎಂಬ ಹೆಸರಿನಿಂದಲೇ ಪ್ರಸಿದ್ಧಳಾಗಿದ್ದಾಳೆ. ಈ ಪ್ರಸಂಗ ನಡೆದಾಗ ಅವಳ ವಯಸ್ಸು ೧೯-೨೦ ಇರಬಹುದು. ಅತ್ತೆಯು ಕಾಲವಾದ ನಂತರ ಅವಳೇ ಮನೆಯ ಯಜಮಾನಿ.

ಸೊಸೆ ವಿರಾಜಳಂತಹ ಸುಂದರ ಸ್ತ್ರೀ ಸಾಮಾನ್ಯವಾಗಿ ಅಪರೂಪವೆಂದೇ

ಹೇಳಬಹುದು. ಸಪ್ತಗ್ರಾಮ, ಅದೇಕೆ, ಸುತ್ತುಮುತ್ತಲಿನ ಅನೇಕ ಗ್ರಾಮ ಗಳಲ್ಲಿ, ಅಷ್ಟು ಸುಂದರಿಯಾದ ಸ್ತ್ರೀ ಇರಲೇ ಇಲ್ಲ. ನಾಲ್ಕೈದು ವರುಷಗಳ ಹಿಂದೆ ಅವಳಿಗೆ ಒಂದು ಗಂಡು ಮಗು ಹುಟ್ಟಿತ್ತು; ಆದರೆ ಹೆರಿಗೆಯ ಕೋಣೆ ಯಲ್ಲಿಯೆ ಅವಳ ಮಡಿಲನ್ನು ಬರಿದುಮಾಡಿ ಈ ಲೋಕದಿಂದ ತೆರಳಿತು. ಆ ಮೇಲೆ ಅವಳಿಗೆ ಮಕ್ಕಳಾಗಲೆ ಇಲ್ಲ. ನೀಲಾಂಬರನು ಕೂಗಿದಾಗ ಅಡುಗೆ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಅವಳು ಗಂಡನ ಕರೆ ಕೇಳಿ ಹೊರಬಂದಳು. ಅಣ್ಣ ತಂಗಿಯರು ಒಟ್ಟಿಗೆ ಇದ್ದುದನ್ನು ನೋಡಿದೊಡನೆ ಅವಳು ಕೆಂಡದಂತಾಗಿ ಒಗರು ದನಿಯಿಂದ– "ಕತ್ತೆ, ನೀನು ದೂರು ಹೇಳಲು ಹೋದದ್ದೊ?" ಎಂದು ಸಿಡುಕಿದಳು.

ನೀಲಾಂಬರ ಒಡನುಡಿದ— "ದೂರು ಏಕೆ ಹೇಳಕೂಡದು? ನೀನು ಅವಳನ್ನು ಕುರುಡಿಯೆಂದು ಬಯ್ದುದ್ದರಿಂದ ಅವಳಿಗೆ ಯಾವ ತೊಂದರೆಯೂ ಇಲ್ಲ. ಏಕೆಂದರೆ ಆ ಮಾತು ಸತ್ಯವಲ್ಲ. ಅಲ್ಲದೆ ಅಂತಹ ಸುಳ್ಳು ಮಾತು ಆಡಿದುದಕ್ಕೆ ನಿನಗೇ ಪಾಪತಟ್ಟುವುದು. ಅದಿರಲಿ, ಅವಳಿಗೆ ನೀನು ಹೊಡೆ ದದ್ದೇಕೆ?"

"ಇಷ್ಟು ದೊಡ್ಡವಳಾದರೂ ಅವಳಿಗೆ ಸ್ವಲ್ಪವೂ ಬುದ್ಧಿ ಇಲ್ಲ. ಹಾಸಿಗೆ ಯಿಂದೆದ್ದವಳು ಮುಖವನ್ನೂ ತೊಳೆಯಲಿಲ್ಲ, ಬಟ್ಟೆಯನ್ನೂ ಬದಲಿಸಲಿಲ್ಲ. ನೇರವಾಗಿ ಹಟ್ಟಿಗೆ ಬಂದವಳೇ ಕರುವನ್ನು ಬಿಚ್ಚಿ ಬಾಯ್ತೆರೆದು ನೋಡುತ್ತ ನಿಂತಿದ್ದಾಳೆ. ಇಂದು ಒಂದು ಹನಿ ಕೂಡ ಹಾಲು ಸಿಗಲಿಲ್ಲ. ಇವಳ ಚರ್ಮ ಸುಲಿದುಬಿಡಬೇಕು" ಎಂದು ಆರ್ಭಟಿಸಿದಳು ವಿರಾಜ್.

ನೀಲಾಂಬರನೆಂದ– "ಹಾಗಲ್ಲ ನೋಡು, ಹಟ್ಟಿಗೆ ನೀನು ಹೋಗುವ ಬದಲು ಒಕ್ಕಲುಗಿತ್ತಿಯನ್ನು ಕಳಿಸಬೇಕಿತ್ತು. ಇರಲಿ, ನೀನು ಕರುವನ್ನೇಕೆ ಬಿಚ್ಚಿದೆ ಮಗು? ಆ ಕೆಲಸ ನಿನ್ನದಲ್ಲವಲ್ಲ?"

ಅಣ್ಣನ ಹಿಂದೆ ನಿಂತ ಹರಿಮತಿ ಮೆತ್ತಗೆ–"ಹಾಲು ಕರೆದಾಗಿದೆಯೆಂದು ನಾನು ತಿಳಿದಿದ್ದೆ" ಎಂದಳು.

"ಇನ್ನೆಂದೂ ಹೀಗೆ ಮಾಡಬೇಡ" ಎಂದು ನುಡಿದ ವಿರಾಜಳು ಪುನಃ ಅಡುಗೆಮನೆಗೆ ಹೋಗಬೇಕೆನ್ನುವಾಗಲೇ ನೀಲಾಂಬರನು ನಗುತ್ತ– "ನೀನೂ ಇದೇ ವಯಸ್ಸಿನಲ್ಲಿ ಗೂಡಿನ ಬಾಗಿಲು ತೆರೆದು ಅಮ್ಮನ ಹಕ್ಕಿಯನ್ನು ಹಾರ ಬಿಟ್ಟೆ. ಪಂಜರದ ಹಕ್ಕಿ ಹಾರಲಾರದೆಂದು ಆಗ ನೀನು ತಿಳಿದಿದ್ದೆ. ನಿನಗೆ

ನೆನಪಿದೆಯಲ್ಲವೆ ಆ ಸಂಗತಿ ? ” ಎಂದ.

ವಿರಾಜಳು ಹೊರಳಿನಿಂತು ಮುಗುಳುನಗೆ ಬೀರುತ್ತ– “ ನೆನಪಂತೂ ಇದೆ. ಆದರೆ ಆಗ ನಾನು ಇವಳಷ್ಟು ದೊಡ್ಡವಳಾಗಿರಲಿಲ್ಲ. ಇನ್ನೂ ಚಿಕ್ಕವಳಿದ್ದೆ” ಎಂದು ಅಲ್ಲಿಂದ ಹೊರಟು ತನ್ನ ಕೆಲಸಕ್ಕೆ ತೊಡಗಿದಳು.

“ ನಡೆ ಅಣ್ಣಾ, ತೋಟಕ್ಕೆ ಹೋಗಿ ಮಾವಿನ ಗಿಡದಲ್ಲಿ ಹಣ್ಣುಗಳಾಗಿವೆಯೊ ಇಲ್ಲವೊ ನೋಡೋಣ ” ಎಂದಳು ಹರಿಮತಿ.

“ ಆಗಲಿ, ಹೋಗೋಣ ನಡೆ.”

ಯದುಚಾಕರ್ ಮನೆಯೊಳಗೆ ಹೋಗಿ–“ ನಾರಾಯಣ ಬಾಬಾ ಹೊರಗೆ ಕುಳಿತುಕೊಂಡಿದ್ದಾರೆ ” ಎಂದು ನೀಲಾಂಬರನಿಗೆ ಕೂಗಿ ಹೇಳಿದ.

ಇದನ್ನು ಕೇಳಿ ನೀಲಾಂಬರ ಇಳಿದೇಹೋದ. ಅವನು ಬೀಳುದನಿಯಲ್ಲಿ– “ ಅವರು ಈಗಲೇ ಬಂದು ಕುಳಿತುಬಿಟ್ಟರೇ ? ” ಎಂದ.

ಈ ಸಂಗತಿ ಕಿವಿಗೆ ಬೀಳುತ್ತಲೆ ವಿರಾಜಳು ತ್ವರೆಯಾಗಿ ಅಡುಗೆಮನೆಯಿಂದ ಬಂದು ಏರುದನಿಯಿಂದ– “ ಚಿಕ್ಕಪ್ಪನಿಗೆ ತಮ್ಮ ಮನೆಗೆ ಹೋಗಲು ಹೇಳಿ” ಎಂದು ಗಂಡನ ಮುಖವನ್ನೆ ದಿಟ್ಟಿಸುತ್ತ–“ ಬೆಳಗಾಗುವ ಮೊದಲೇ ಈ ಜನ ಹೀಗೆ ಕಾಡಿಸತೊಡಗಿದರೆ ನಾನು ಹಣೆ ಚಚ್ಚಿಕೊಂಡು ಸತ್ತುಹೋಗುವುದೇ ಸರಿ. ಇತ್ತೀಚೆ ಇದೆಲ್ಲ ಏನು ನಡೆದಿದೆ ? ” ಎಂದಳು.

ನೀಲಾಂಬರನು ಉತ್ತರವೀಯದೆ ತಂಗಿಯ ಕೈ ಹಿಡಿದುಕೊಂಡು ಮೌನವಾಗಿ ತೋಟಕ್ಕೆ ನಡೆದ.

ತೋಟದ ಒಂದು ಬದಿಯಿಂದ ಸರಸ್ವತೀ ನದಿ ಹರಿಯುತಿತ್ತು. ಅದರ ಕ್ಷೀಣಧಾರೆ, ಪರಲೋಕಯಾತ್ರೆಗೆ ಪೂರ್ಣ ಸಿದ್ಧನಾಗಿ ಕುಳಿತ ವ್ಯಕ್ತಿಯ ಶ್ವಾಸೋಚ್ಛ್ವಾಸದಂತೆ ಮಂದವಾಗಿ ಹರಿಯುತಿತ್ತು. ನದಿ ಪಾಚಿಯಿಂದ ತುಂಬಿಹೋಗಿತ್ತು. ಹಳ್ಳಿಗರು ನೀರು ತುಂಬಲು ನದಿಯಲ್ಲಿ ಆಗೆದ ಒರತೆಗಳಲ್ಲಿ ಮಾತ್ರ ಪಾಚಿಯಿರಲಿಲ್ಲ. ಅವುಗಳ ಬಳಿಯಲ್ಲೇ ಹರಿಯುತ್ತಿದ್ದ ಒಸರುಗಳಲ್ಲಿಯೂ ಪಾಚಿಯಿರಲಿಲ್ಲ. ಆ ಒಸರು ಯಾವಾಗಲೂ ನೀರುತುಂಬಿ ಹರಿಯುತಿದ್ದುವು. ಅವು ಅಷ್ಟೊಂದು ಆಳವಾಗಿಯೂ ಇರಲಿಲ್ಲ. ಅವುಗಳ ಅಡಿಯಲ್ಲಿ ಬಿದ್ದಿದ್ದ ಸಿಂಪು, ಬೆಣಚುಗಲ್ಲುಗಳು, ಸೂರ್ಯಪ್ರಕಾಶದಲ್ಲಿ ನೂರಾರು ರತ್ನಮಣಿಗಳಂತೆ ಥಳ ಥಳ ಹೊಳೆಯುತ್ತ ಕಣ್ಣಿಗೆ ರಮಣೀಯವಾಗಿ ತೋರುತಿದ್ದವು. ನದಿಯ ದಂಡೆಯ ಮೇಲೊಂದು ಕರಿಬಂಡೆಯಿತ್ತು. ಹತ್ತಿರವೇ ಒಂದು

ಸಮಾಧಿಸ್ತೂಪವೂ ಇತ್ತು. ಈ ಕಲ್ಲುಬಂಡೆ ಆ ಸಮಾಧಿಸ್ತೂಪದ ಪ್ರಾಕಾರದ ಒಂದು ಭಾಗ. ಬಹು ಹಿಂದೆ ಯಾವುದೋ ಕಾಲದಲ್ಲಿ ಮಳೆಯ ಪ್ರಚಂಡ ಪ್ರವಾಹಕ್ಕೆ ಆ ಪ್ರಾಕಾರದಿಂದ ಕೊಚ್ಚಿಹೋಗಿ ನೀರಿನ ಸೆಳೆತದಿಂದ ಕುಸಿಯುತ್ತ ಕುಸಿಯುತ್ತ ಅಲ್ಲಿ ಬಂದು ಬಿದ್ದಿತ್ತು ಅದು. ನೀಲಾಂಬರನ ಮನೆಯ ಹೆಂಗುಸರು ಮೃತಾತ್ಮನ ಶಾಂತಿಗಾಗಿ ನಿತ್ಯ ಸಾಯಂಕಾಲ ಆ ಬಂಡೆಯ ಬದಿಗೆ ನೀಲಾಂಜನ ವನ್ನಿಡುತ್ತಿದ್ದರು. ತಂಗಿಯ ಕೈ ಹಿಡಿದುಕೊಂಡ ನೀಲಾಂಬರ ಅಲ್ಲಿಗೆ ಬಂದು, ಅದೇ ಬಂಡೆಯ ಮೇಲೆ ಕುಳಿತ. ನದಿಯ ಇಬ್ಬದಿಗೂ ಮಾವಿನ ದೊಡ್ಡ ದೊಡ್ಡ ತೋಪುಗಳೂ ಬಿದಿರುಮೆಳೆಯ ಗುಂಪುಗಳೂ ಇದ್ದವು; ಒಂದೆರಡು ಅರಳೆಯ ಮರಗಳೂ ಆಲದ ಮರಗಳೂ ಇದ್ದವು. ಆ ಮರಗಳು ಬಹು ಪ್ರಾಚೀನ ಕಾಲದವು. ಅವುಗಳ ಕೊಂಬೆಗಳು ನದಿಯ ಮುಖದ ವರೆಗೂ ಬಾಗಿದ್ದವು. ಆ ಕೊಂಬೆಗಳ ಮೇಲೆ ಎಷ್ಟೋ ವರುಷಗಳಿಂದ ಎಷ್ಟೋ ಪಕ್ಷಿಗಳು ತಮ್ಮ ಗೂಡು ಗಳನ್ನು ಕಟ್ಟಿವೆ, ಎಷ್ಟೋ ಮರಿಗಳನ್ನು ಪಾಲಿಸಿ ಬೆಳೆಸಿವೆ, ಎಷ್ಟೋ ಹಣ್ಣು ಹಂಪಲು ತಿಂದಿವೆ, ಕಲರವವಾಡಿವೆ. ಇಂತಹ ಒಂದು ಮರದ ತಂಪುನೆಳಲಿ ನಲ್ಲಿ ಅಣ್ಣ-ತಂಗಿಯರು ಸ್ವಲ್ಪ ಸಮಯ ಮೌನವಾಗಿ ಕಳೆದರು.

ಹರಿಮತಿ ಒಮ್ಮೆಗೇ ಅಣ್ಣನ ಬಳಿ ಮತ್ತಿಷ್ಟು ಸರಿದು–"ಹಾದಣ್ಣಾ, ಅತ್ತಿಗೆ ನಿನ್ನನ್ನು ಸನ್ಯಾಸಿಯೆಂದು ಕರೆಯುವುದೇಕೆ?" ಎಂದು ಕೇಳಿದಳು.

ನೀಲಾಂಬರನು ತನ್ನ ಕೊರಳ ತುಳಸೀಮಾಲೆಯನ್ನು ತೋರಿಸಿ ನಗುತ್ತ– "ನಾನು ಸನ್ಯಾಸಿ. ಆದುದರಿಂದಲೆ ಹಾಗೆ ಕರೆಯುತ್ತಾಳೆ" ಎಂದ.

ಹರಿಮತಿ ಅಣ್ಣನ ಈ ಮಾತನ್ನು ನಂಬಲಾರದೆ ಎಂದಳು– "ನೀನು ಸನ್ಯಾಸಿ ಹೇಗೆ? ಸಾಧು ಸನ್ಯಾಸಿಗಳಂತೂ ಬಿಕ್ಕೆ ಬೇಡುತ್ತ ಅಲೆಯುತ್ತಾರೆ. ಹೌದು, ಅವರು ಬಿಕ್ಕೆ ಬೇಡುವುದೇಕಣ್ಣಾ?"

"ಅವರ ಬಳಿ ಏನೂ ಇರುವುದಿಲ್ಲ. ಆದ್ದರಿಂದಲೇ ಬಿಕ್ಕೆ ಬೇಡುತ್ತಾರೆ ತಂಗಿ."

ಹರಿಮತಿ ಅಣ್ಣನ ಮುಖವನ್ನೆ ದಿಟ್ಟಿಸುತ್ತ ಕೇಳಿದಳು–"ಆ ಜನರ ಬಳಿ ಏನೂ ಇರುವುದಿಲ್ಲವೆ? ಕೆರೆ, ತೋಟ-ಪಟ್ಟಿ, ಧಾನ್ಯ-ದವಸ ಯಾವುದೂ ಇಲ್ಲವೆ?"

ತಂಗಿಯ ತಲೆಗೂದಲುಗಳಲ್ಲಿ ಸ್ನೇಹಪೂರ್ವಕವಾಗಿ ಬೆರಳುಗಳನ್ನಾಡಿ ಸುತ್ತ ನೀಲಾಂಬರನೆಂದ–"ಇಲ್ಲಮ್ಮ. ಅವರ ಬಳಿ ಏನೂ ಇಲ್ಲ. ಅಲ್ಲದೆ,

ಸಾಧು–ಸನ್ಯಾಸಿಗಳು ತಮ್ಮ ಬಳಿ ಯಾವ ವಸ್ತುಗಳನ್ನೂ ಇಟ್ಟುಕೊಳ್ಳ ಕೂಡದು."

" ಹಾಗಾದರೆ ಎಲ್ಲರೂ ಅವರಿಗೆ ಅಲ್ಪ ಸ್ವಲ್ಪ ಏಕೆ ಕೊಡಕೂಡದು ? "

ನೀಲಾಂಬರನೆಂದ–" ಅಯ್ಯೋ ಹುಚ್ಚಿ ! ಸ್ವತಃ ನಿನ್ನ ಅಣ್ಣ ಸಾಧು–ಸನ್ಯಾಸಿಗಳಿಗೆ ಎಂದಾದರೂ ಏನಾದರೂ ಕೊಟ್ಟಿದ್ದನ್ನು ನೋಡಿದ್ದೆಯಾ ? "

" ಹಾಗಾದರೆ ಏಕೆ ಕೊಟ್ಟಿಲ್ಲ ಅಣ್ಣಾ? ನಮ್ಮ ಬಳಿ ಇಷ್ಟೊಂದಿದೆಯಲ್ಲ? "

ನೀಲಾಂಬರನು ಮುಗುಳುನಗುತ್ತ–" ಆದರೂ ನಿನ್ನಣ್ಣ ಏನೂ ಕೊಡಲಾರ. ಒಬ್ಬ ರಾಜನೊಂದಿಗೆ ನಿನ್ನ ಮದುವೆಯಾಗಿ, ನೀನು ರಾಣಿಯಾದಾಗ ಸಾಧುಸಂತರಿಗೆ ಸಾಕಷ್ಟು ಅನ್ನ, ಬಟ್ಟೆ-ಬರೆ ಕೊಡುವೆಯಂತೆ ತಂಗೀ!" ಎಂದ.

ಹರಿಮತಿ ತಿಳಿವಳಿಕೆಯಿಲ್ಲದ ಚಿಕ್ಕ ಹುಡುಗಿ. ಆದರೂ ಅಣ್ಣನ ಈ ಮಾತಿಗೆ ನಾಚಿಕೊಂಡು ಅವನ ಮಡಿಲಲ್ಲಿ ಮುಖ ಹುದುಗಿಸಿ " ಹೋಗಣ್ಣಾ" ಎಂದಳು.

ನೀಲಾಂಬರ ತನ್ನ ಎರಡೂ ಕೈಗಳಿಂದ ಅವಳಮಸ್ತಕವಿಡಿದು ಮುದ್ದಿಟ್ಟ. ತಂದೆ ತಾಯಿಗಳ ಮಡಿಲಿನಿಂದ ದೂರಳಾದ ತನ್ನ ಈ ತಂಗಿಯನ್ನು ಅವನು ತುಂಬಾ ಪ್ರೀತಿಸುತ್ತಿದ್ದ. ಇಂದಿಗೆ ಏಳು ವರ್ಷಗಳ ಹಿಂದೆ ಹರಿಮತಿಯ ವಿಧವೆಯಾದ ತಾಯಿ, ಅವಳನ್ನು ತನ್ನ ಹಿರಿಯ ಮಗನಿಗೂ ಸೊಸೆಗೂ ಒಪ್ಪಿಸಿ ಈ ಸಂಸಾರದಿಂದ ಪರಲುಹೆರಿದುಕೊಂಡಾಗ ಹರಿಮತಿ ಬರಿಯ ಮೂರು ವರುಷದವಳು. ಅಂದಿನಿಂದ ನೀಲಾಂಬರನೇ ಅವಳನ್ನು ಸಾಕುತ್ತ ಸಲಹುತ್ತ ಬಂದಿದ್ದಾನೆ. ಅವನು ಹಳ್ಳಿಯ ಎಲ್ಲ ರೋಗಿಗಳ ಸೇವೆ ಮಾಡುತ್ತಿದ್ದ. ಶವದ ಅಗ್ನಿಸಂಸ್ಕಾರದಲ್ಲಿ ಮೃತರ ಮನೆಯವರಿಗೆ ನೆರವಾಗುತ್ತಿದ್ದ ; ನಿತ್ಯವೂ ಭಜನೆ ಮಾಡುತ್ತಿದ್ದ; ಮನದಣಿಯುವಂತೆ ಭಂಗಿ ಸೇದುತ್ತಿದ್ದ. ಆದರೂ ತನ್ನ ತಾಯಿಯ ಅಂತಿಮ ಆದೇಶವನ್ನು ಆತ ಒಂದು ಕ್ಷಣವೂ ಭಂಗಿಸಲಿಲ್ಲ. ಹರಿಮತಿಯನ್ನು ಅವನು ಅತ್ಯಂತ ಸ್ನೇಹದಿಂದ ತೊಡೆಯ ಮೇಲೆ ಲಾಲಿಸಿ ಆಡಿಸಿ ಇಷ್ಟು ದೊಡ್ಡವಳನ್ನಾಗಿ ಮಾಡಿದ್ದಾನೆ. ಇಷ್ಟು ಸಲುಗೆ ಇದ್ದುದರಿಂದಲೆ ಹರಿಮತಿ ತಾಯ ಮಡಿಲಿಗೆ ಸಮಾನವಾದ ಅಣ್ಣನ ಮಡಿಲಲ್ಲಿ ನಿಸ್ಸಂಕೋಚ ಭಾವದಿಂದ ಮುಖ ಹದುಗಿಸಿ ಸುಮ್ಮನೆ ಬಿದ್ದಿದ್ದಳು.

" ಪುಟ್ಟೀ, ಅಮ್ಮನವರು ಕರೆಯುತಿದ್ದಾರೆ. ಬಾ, ಹಾಲು ಕುಡಿದು ಹೋಗು " ಎಂದು ಹಳೆಯ ಒಕ್ಕಲುಗಿತ್ತಿ ಮರೆಯಲ್ಲಿ ನಿಂತು ಕೂಗಿದಳು.

ಹರಿಮತಿ ಮೊಗನೆತ್ತಿ ಅನುನಯಪೂರ್ಣ ಸ್ವರದಿಂದ–"ಅಣ್ಣಾ, ನೀನು ಸ್ವಲ್ಪ ಹೇಳು ಅವಳಿಗೆ. ನಾನು ಈಗ ಹಾಲು ಕುಡಿಯುವುದಿಲ್ಲ" ಎಂದಳು.

"ಏಕೆ ಕುಡಿಯುವುದಿಲ್ಲ ಮಗು ?"

"ನನಗೀಗ ಹಸಿವಾಗಿಲ್ಲ."

ನೀಲಾಂಬರನೆಂದ– "ನಿನ್ನ ಈ ಮಾತಿನ ಮೇಲೆ ನನಗೆ ವಿಶ್ವಾಸವಿದೆ ಯಾದರೂ, ನಿನ್ನ ಕೆನ್ನೆಗೆ ಬಾರಿಸುವವಳು ಈ ಮಾತನ್ನು ಖಂಡಿತವಾಗಿ ನಂಬುವುದಿಲ್ಲ."

ಮರೆಯಲ್ಲಿ ನಿಂತಿದ್ದ ದಾಸಿ ಪುನಃ–"ಪುಟ್ಟಿ ?" ಎಂದು ಕೂಗಿದಳು.

ನೀಲಾಂಬರನು ಒತ್ತಾಯದಿಂದ ಹರಿಮತಿಯನ್ನು ಎದ್ದುನಿಲ್ಲಿಸಿ– "ಹೋಗು, ಬಟ್ಟೆ ಬದಲಿಸಿ ಹಾಲು ಕುಡಿದು ಬಾ. ನಾನು ಇಲ್ಲಿಯೆ ಕುಳಿತಿರುತ್ತೇನೆ" ಎಂದ.

ಹರಿಮತಿ ಮುಖದ ಮೇಲೆ ಅಪ್ರಸನ್ನತೆಯನ್ನು ತೋರುತ್ತ ಹೊರಟು ಹೋದಳು.

ಯಾವ ದಿನ ಈ ಘಟನೆಯಾಯಿತೊ ಅಂದೇ ಮಧ್ಯಾಹ್ನ ವಿರಾಜಳು ಗಂಡನಿಗೆ ಉಣಬಡಿಸಿ ತಟ್ಟೆಯ ಬಳಿ ಬಂದು ಕುಳಿತು–"ಅಲ್ಲಾ, ಇನ್ನು ನಿತ್ಯ ನಿಮ್ಮ ಊಟಕ್ಕೆ ಯಾವ ಬಗೆಯ ಅಡುಗೆ ಮಾಡಬೇಕು ? ಇದು ತಿನ್ನು ವುದಿಲ್ಲ, ಅದು ಬೇಡ, ಎಂದು ನೀವು ಹೇಳುವಿರಿ. ನಿಮಗೆ ಎಲ್ಲವೂ ಅಪಥ್ಯ ವಾಗಿವೆ. ಕೊನೆಗೆ ಮೀನು ತಿನ್ನುವುದನ್ನೂ ಬಿಟ್ಟುಬಿಟ್ಟಿರಿ" ಎಂದಳು.

ನೀಲಾಂಬರನು ಊಟಕ್ಕೆ ಕುಳಿತುಕೊಳ್ಳುತ್ತ– "ಅಲ್ಲವೆ, ನೀನು ಎಷ್ಟು ಒಳ್ಳೆಒಳ್ಳೆಯ ತರಕಾರಿ ಮಾಡಿರುತ್ತಿ–ಅದು ಸಾಲದೆ ?" ಎಂದ.

"ಏನು ಒಳ್ಳೆಯ ತರಕಾರಿ ! ಇಂತಹ ಒಣಕಲು ಪಲ್ಲೆಯೊಂದಿಗೆ ಗಂಡು ಸರು ಎಂದಾದರೂ ಊಟಮಾಡಲು ಸಾಧ್ಯವೆ ? ಬೇಕಾದ ವಸ್ತುಗಳನ್ನು ಕೊಂಡು ತರಲು ಇದು ಪಟ್ಟಣವಲ್ಲ. ಇದು ಹೇಳಿ ಕೇಳಿ ಹಳ್ಳಿ. ಇಲ್ಲಿ ಇದ್ದು-ಬಿದ್ದ ಅನುಕೂಲವೆಂದರೆ ಕೆರೆಯ ಮೀನು ಮಾತ್ರ. ಇತ್ತಿತ್ತಲಾಗಿ ನೀವು ಮೀನು ತಿನ್ನುವುದನ್ನೂ ಬಿಟ್ಟುಬಿಟ್ಟಿರಿ. ಪುಟ್ಟೀ ! ಎಲ್ಲಿ ಹೋದೆಯೇ ? ಬಾ ಸ್ವಲ್ಪ ಗಾಳಿಹಾಕು– ಊಹುಂ, ಅದೆಂದಿಗೂ ಆಗದು. ಇಂದು ತಟ್ಟೆಯಲ್ಲಿ ಒಂದ ಗುಳು ಅನ್ನ ಉಳಿದುದಾದರೆ ನಿಮ್ಮ ಪಾದಗಳ ಮೇಲೆ ಬಿದ್ದು ಪ್ರಾಣಬಿಡು ತ್ತೇನೆ."

ನೀಲಾಂಬರ ತುಟಿಬಿಚ್ಚದೆ ಸೂಸುನಗೆ ಬೀರುತ್ತ ಊಟಮಾಡ ತೊಡಗಿದ.

ವಿರಾಜಳು ಸಿಡಿಮಿಡಿಗೊಂಡು–"ಯಾಕೆ ನಗುತ್ತಿದ್ದೀರಿ ನೀವು ? ನನ್ನ ದೇಹದಲ್ಲಿ ಬೆಂಕಿಯಿಟ್ಟಂತಾಗಿದೆ. ದಿನಗಳೆದಂತೆ ನಿಮ್ಮ ಆಹಾರ ಕಡಿಮೆಯಾಗ ತೊಡಗಿದೆಯೆಂಬ ಬಗ್ಗೆ ನಿಮಗೆ ಅರಿವಿದೆಯೆ? ನಿಮ್ಮ ಮೈಯೆಲುಬುಗಳೆಲ್ಲ ವನ್ನೂ ಎಣಿಸಬಹುದಾಗಿದೆ. ಇಷ್ಟಾದರೂ ಆ ಕಡೆಗೆ ನಿಮ್ಮ ಗಮನವಿದೆಯೆ? ನಿಮ್ಮ ದೇಹ ಹೇಗಾಗಿದೆ ಸ್ವಲ್ಪ ನೋಡಿಕೊಳ್ಳಿ" ಎಂದಳು.

ನೀಲಾಂಬರನೆಂದ–"ಹಾಂ. ನನ್ನ ದೇಹಸ್ಥಿತಿ ನನಗೆ ಚನ್ನಾಗಿ ಗೊತ್ತು, ಇದೆಲ್ಲ ನಿನ್ನ ಭ್ರಮೆ."

ವಿರಾಜಳು ನುಡಿದಳು–"ಭ್ರಮೆಯೆ ? ನೀವು ಯಾವುದೇ ದಿನ, ಎಣಿಸಿ ಒಂದು ಅನ್ನದ ಅಗುಳು ಕಡಿಮೆ ತಿಂದರೂ ನಾನು ತೋರಿಸಬಲ್ಲೆ. ಅಲ್ಲದೆ. ನಿಮ್ಮ ದೇಹದ ಯಾವ ಭಾಗವೂ ಎಳ್ಳ ಮೊನೆಯಷ್ಟು ಸೊರಗಿದರೂ ಎಲ್ಲೆಲ್ಲಿ ಎಷ್ಟೆಷ್ಟು ಸೊರಗಿದೆಯೆಂದು ಆ ಭಾಗದಲ್ಲಿ ಬೆರಳಿಟ್ಟು ತೋರಿಸಬಲ್ಲೆ. ಪ್ರತಿ ಯೊಂದು ವಿಷಯದಲ್ಲಿ ನಾನು ಅದೆಷ್ಟು ದೃಷ್ಟಿಯಿಟ್ಟಿದ್ದೇನೆಂದು ನೀವೇನು ಬಲ್ಲಿರಿ?–ಹೋಗು ಮಗೂ, ಬೀಸಣಿಕೆ ಅಲ್ಲಿ ಇಟ್ಟು ನಿನ್ನ ಅಣ್ಣನವರಿಗೆ ಹಾಲು ತಾ."

ಹರಿಮತಿ ಒಂದು ಬದಿಗೆ ನಿಂತು ಗಾಳಿ ಬೀಸಲು ತೊಡಗಿದ್ದಳು. ಅತ್ತಿಗೆಯ ಆಣತಿಯಂತೆ ಅವಳು ಬೀಸಣಿಕೆ ಕೆಳಗಿಟ್ಟು ಹಾಲು ತರಲು ಹೋದಳು.

ಆಗ ವಿರಾಜಳೆಂದಳು–"ಧರ್ಮ ಕರ್ಮಗಳನ್ನು ಮಾಡಲು ಇನ್ನೂ ಎಷ್ಟೋ ಆಯುಷ್ಯ ಇದೆ. ಇಂದು ಆ ಮನೆಯ ಅತ್ತೆ ಬಂದಿದ್ದರು. ನಿಮ್ಮ ಪಾಡನ್ನು ನೋಡಿ, ಈ ಚಿಕ್ಕ ವಯಸ್ಸಿನಲ್ಲಿಯೆ ಮೀನು ತಿನ್ನುವುದನ್ನು ಬಿಟ್ಟರೆ ಕಣ್ಣಿನ ಕಾಂತಿ ಕಡಿಮೆಯಾಗುವುದೆಂದೂ ದೇಹ ದುರ್ಬಲವಾಗುವುದೆಂದೂ ಹೇಳಿದರು. ಇಲ್ಲ ಇಲ್ಲ, ಹಾಗೆಂದಿಗೂ ಆಗಗೊಡಲಾರೆ. ಕೊನೆಗೆ ಏನಾದರೂ ಅನಿಷ್ಟ ಸಂಭವಿಸಿದರೆ? ನೀವು ಮೀನು ತಿನ್ನುವುದನ್ನು ಬಿಡುವುದಕ್ಕೆ ನಾನು ಎಂದಿಗೂ ಒಪ್ಪಲಾರೆ."

ನೀಲಾಂಬರ ನಕ್ಕುಬಿಟ್ಟು–"ನನ್ನ ಪರವಾಗಿ ನೀನೇ ರಾಶಿ ರಾಶಿ ಮೀನು ತಿನ್ನುತ್ತಿರು. ನೀನು ತಿನ್ನುವುದರಿಂದ ನನ್ನ ದೇಹಕ್ಕೆ ಲಾಭವಾಗುವುದು" ಎಂದ.

ವಿರಾಜ ಸಿಟ್ಟುಬೆಂಕಿಯಾದಳು–"ಹೊಲೆಮಾದಿಗರಂತೆ ಪುನಃ ಬಾಯಿ ಬಡೆಯಲು ಪ್ರಾರಂಭಿಸಿದಿರಾ ನೀವು ?" ಎಂದು ಸಿಡಿದಳು.

ಸ್ವಲ್ಪ ತಣ್ಣಗಾಗಿ ನೀಲಾಂಬರ ಪುನಃ ಹೇಳತೊಡಗಿದ–"ನೆನಪಿಲ್ಲವೆ ? ಚಿಕ್ಕಂದಿನ ರೂಢಿ ಹುಗಿದರೂ ಹೋಗದು. ನಾನು ಅದೆಷ್ಟು ಸಲ ನಿನ್ನ ಕಿವಿ ಹಿಂಡಿದ್ದೇನೆ ! ನೆನಪಿದೆಯೆ ನಿನಗೆ ?"

ವಿರಾಜಳು ಮುಖ ಹೊರಳಿಸಿ ನಗುತ್ತ ಹೇಳಿದಳು–"ಅದೇಕೆ ನೆನಪಿಲ್ಲ ? ನಾನು ನಿಮಗಿಂತ ಚಿಕ್ಕವಳಾದ್ದರಿಂದ ನನ್ನನ್ನೆಷ್ಟು ಗೋಳು ಹುಯ್ಕೊಳ್ಳು ತ್ತಿದ್ದಿರಿ ! ಮಾವನವರ, ಅತ್ತೆಯವರ ಕಣ್ಣಿಗೆ ಬೀಳದಂತೆ ಅದೆಷ್ಟು ಸಲ ನೀವು ನನ್ನಿಂದ ಚಿಲುಮೆಯನ್ನು ತುಂಬಿಸಿಕೊಂಡಿದ್ದೀರಿ ! ನೀವೇನು ಸಾಮಾನ್ಯ ಮನುಷ್ಯರೆ !"

ನೀಲಾಂಬರ ಬಿದ್ದು ಬಿದ್ದು ನಗತೊಡಗಿದ. ನಗೆ ಸ್ವಲ್ಪ ಕಡಿಮೆಯಾದ ಮೇಲೆ– "ಹಾಗಾದರೆ ಇಂದಿಗೂ ಆ ವಿಷಯವೆಲ್ಲ ನಿನಗೆ ಚನ್ನಾಗಿ ಜ್ಞಾಪಕ ವಿದೆ ? ಆದರೆ ಅಂದಿನಿಂದಲೆ ನಾನು ನಿನ್ನನ್ನು ಪ್ರೀತಿಸತೊಡಗಿದೆ" ಎಂದ.

ತನ್ನ ನಗೆಯನ್ನು ತಡೆದು ವಿರಾಜಳೆಂದಳು– "ನಾನು ಅದೆಲ್ಲ ಬಲ್ಲೆ. ಈಗ ನಿಮ್ಮ ಬಡಬಡಿಕೆ ನಿಲ್ಲಿಸಿ. ಪುಟ್ಟಿ ಬರುತ್ತಿದ್ದಾಳೆ."

ಹರಿಮತಿ ಹಾಲಿನ ಪಾತ್ರೆಯನ್ನು ಅಣ್ಣನ ತಟ್ಟೆಯ ಬಳಿ ಇಟ್ಟು ಪುನಃ ಗಾಳಿ ಹಾಕತೊಡಗಿದಳು. ವಿರಾಜಳು ಎದ್ದು ಕೈತೊಳೆದು ಗಂಡನ ಬಳಿ ಪುನಃ ಬಂದು ಕುಳಿತು– "ಬೀಸಣಿಕೆ ತಾ ಮಗೂ, ನೀನು ಆಟವಾಡಲು ಹೋಗು" ಎಂದಳು.

ಹರಿಮತಿ ಹೋದನಂತರ ಗಾಳಿ ಬೀಸುತ್ತ ಬೀಸುತ್ತ ಅವಳು–"ನಿಜ ಹೇಳು ತ್ತೇನೆ. ಇಷ್ಟು ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡುವುದು ಒಳಿತಲ್ಲ" ಎಂದಳು.

"ಅದೇಕೆ ? ಕನ್ಯೆಯ ಮದುವೆ ಚಿಕ್ಕ ವಯಸ್ಸಿನಲ್ಲಿ ಮಾಡುವುದೇ ಯೋಗ್ಯವೆಂದು ನನ್ನ ಅಭಿಪ್ರಾಯ" ಎಂದ ನೀಲಾಂಬರ.

ವಿರಾಜಳು ತಲೆಯಲ್ಲಾಡಿಸುತ್ತ– "ಅಲ್ಲ, ಅದು ಯೋಗ್ಯವಲ್ಲ. ನನ್ನ ಮಾತು ಬೇರೆ. ಅದಕ್ಕೆ ಕಾರಣವಿಷ್ಟೇ: ನಾನು ನಿಮ್ಮಂತಹರ ಕೊರಳಿಗೆ ಬಿದ್ದೆ. ಅಲ್ಲದೆ, ನನಗೆ ಪೀಡಕಳೂ ಉಪದ್ರವಿಯೂ ಆದ ನಾದಿನಿಯಾಗಲಿ ಸವತಿಯಾ ಗಲಿ ಇಲ್ಲ. ಹತ್ತು ವರುಷದವಳಿದ್ದಾಗಲೆ ನಾನು ಇಲ್ಲಿ ಯಜಮಾನಿಯಾಗಿದ್ದೇನೆ.

ಆದರೆ ಬೇರೆ ಹತ್ತು ಜನರಿರುವ ಮನೆತನಗಳ ಸ್ಥಿತಿಯನ್ನು ನೋಡುವುದಿಲ್ಲವೆ? ಚಿಕ್ಕವಯಸ್ಸಿನಲ್ಲೇ ಪ್ರಾರಂಭವಾದ ದೂರು-ಬೈಗಳು, ಹೊಡೆತ-ಬಡೆತ, ದೊಡ್ಡವರಾದ ಮೇಲೂ ನಿಲ್ಲುವುದಿಲ್ಲ. ಕೊನೆಯ ಮಟ್ಟಿಗೆ ಬೈಗಳಂತೂ ಇದ್ದೇ ಇರುತ್ತವೆ. ಆದುದರಿಂದ ನಾನು ಪುಟ್ಟಿಯ ಮದುವೆಯ ಪ್ರಸ್ತಾಪವನ್ನು ಎತ್ತುವುದು ಕೂಡ ಇಲ್ಲ. ಇಲ್ಲದಿದ್ದರೆ ಅವಳ ಮದುವೆಯ ಸುದ್ದಿ ಈಗಾಗಲೇ ಎಲ್ಲೆಲ್ಲಿಯೂ ಹರಡುತ್ತಿತ್ತು. ಮೊನ್ನೆ 'ರಾಜೇಶ್ವರಿ ಸ್ಥಳ'ದ ಘೋಷಾಲ್ ಮನೆತನದ ಪುರೋಹಿತನ ಹೆಂಡತಿ ಇವಳ ಮದುವೆಯ ಪ್ರಸ್ತಾಪಕ್ಕಾಗಿ ಬಂದಿದ್ದಳು. ಪುಟ್ಟಿಯನ್ನು ತಮ್ಮ ಮನೆಯ ಸೊಸೆಯನ್ನಾಗಿ ಮಾಡಿಕೊಳ್ಳಲು ಘೋಷಾಲ್ ಮಹೋದಯರಿಗೆ ಹಿರಿಯಾಸೆಯೆಂದು ಅವಳು ಹೇಳುತ್ತಿದ್ದಳು. ಅದಕ್ಕಾಗಿ ಅವರು ಸಾಕಷ್ಟು ಹಣ ವೆಚ್ಚ ಮಾಡಲೂ ಸಿದ್ಧರಿದ್ದಾರಂತೆ. ನಾವು ಘೋಷಾಲ್ ಮಹೋದಯರ ಮಗನಿಗೆ ಪುಟ್ಟಿಯನ್ನು ಕೊಡಲು ಒಪ್ಪಿದರೆ ಸೊಸೆಗೆ ಬೇಕಾದಷ್ಟು ಆಭರಣ ಹಾಕುವರೆಂದೂ, ಅಲ್ಲವೆ ನಮಗೆ ಒಂದು ಸಾವಿರ ರೂಪಾಯಿ ಕೊಡುವರೆಂದೂ ಅವಳು ಹೇಳಿದಳು. 'ಆದರೆ ಇನ್ನೆರಡು ವರುಷ ನಾನು ಅವಳ ಲಗ್ನ ಮಾಡುವುದಿಲ್ಲ'ವೆಂದು ಅವಳಿಗೆ ಸ್ಪಷ್ಟವಾಗಿ ಹೇಳಿದೆ."

ನೀಲಾಂಬರ ಮೊಗವೆತ್ತಿ ಚಕಿತದೃಷ್ಟಿಯಿಂದ ಹೆಂಡತಿಯ ಕಡೆಗೆ ನೋಡಿ "ಏನು, ನೀನು ಕನ್ಯಾದಕ್ಷಿಣೆ ತೆಗೆದುಕೊಂಡು ಪುಟ್ಟಿಯ ಮದುವೆ ಮಾಡುವವಳೆ? ಕನ್ಯಾವಿಕ್ರಯ ಮಾಡುವ ಇಚ್ಛೆಯಿದೆಯೇ ನಿನಗೆ?" ಎಂದ.

ವಿರಾಜಳು ಸಿಡಿದು–"ಏಕೆ ಕೂಡದು? ನನಗೆ ಗಂಡು ಮಗ ಹುಟ್ಟಿದ್ದರೆ ಅವನಿಗಾಗಿ ಹಣ ತೆತ್ತು ಹೆಣ್ಣು ತರುವುದು ತಪ್ಪುತ್ತಿತ್ತೆ? ನನಗಾಗಿ ನೀವು ಮೂರು ನೂರು ರೂಪಾಯಿ ಕೊಡಲಿಲ್ಲವೆ? ನಿಮ್ಮ ತಮ್ಮನ ಮದುವೆಗಾಗಿ ಐದು ನೂರು ರೂಪಾಯಿ ಕೊಡಬೇಕಾಗಲಿಲ್ಲವೆ? ಎಂದಮೇಲೆ ಪುಟ್ಟಿಯ ಮದುವೆಯಲ್ಲಿ ನಾನೇಕೆ ಹಣ ಪಡೆಯಬಾರದು? ಈ ವಿಷಯದಲ್ಲಿ ನೀವು ಮಾತನಾಡುವ ಅವಶ್ಯಕತೆಯಿಲ್ಲ. ನಮ್ಮ ಪದ್ಧತಿಯನ್ನು ನಾನು ಅನುಸರಿಸುವವಳೇ" ಎಂದಳು.

ಹೆಂಡತಿಯ ಈ ಮಾತು ಕೇಳಿ ನೀಲಾಂಬರ ಮತ್ತಿಷ್ಟು ಅಚ್ಚರಿಗೊಂಡ ಅವನು ಅಸಂತುಷ್ಟನಾಗಿ–"ನಮ್ಮಲ್ಲಿ ಕನ್ಯಾವಿಕ್ರಯದ ಪದ್ಧತಿಯಿದೆಯೆಂದು ನಿನಗೆ ಯಾರು ಹೇಳಿದರು? ನಮ್ಮ ಕುಲದಲ್ಲಿ ಕನ್ಯಾಪಕ್ಷದವರಿಗೆ ಸ್ವಲ್ಪ ಹಣ

ಕೊಡುವ ಪರಿಪಾಠವುಂಟು. ಆದರೆ ವರಪಕ್ಷದವರಿಂದ ನಾವು ಒಂದು ಕಾಸೂ ಪಡೆಯುವುದಿಲ್ಲ. ನನ್ನ ಯಥಾಶಕ್ತಿ ಹತ್ತು ರೂಪಾಯಿಯಾದರೂ ಕೊಟ್ಟು ನಾನು ಪುಟ್ಟಿಯ ಮದುವೆ ಮಾಡುತ್ತೇನೆ, ಅವಳ ಧರ್ಮ ವಿವಾಹವನ್ನೇ ಮಾಡುತ್ತೇನೆ" ಎಂದ.

ಗಂಡನ ಮುಖ ಕಣ್ಣುಗಳ ಭಾವವನ್ನು ನೋಡಿ ವಿರಾಜಳಿಗೆ ನಗು ಬಂದಿತು. ಅವಳು-"ಆಗಲಿ, ಹಾಗೆಯೇ ಆಗಲಿ. ಈಗಂತೂ ಮೊದಲು ಊಟಮಾಡಿ. ಮನಸ್ಸನ್ನು ನೋಯಿಸಿಕೊಂಡು ಅರೆಹೊಟ್ಟೆಯಿಂದ ಏಳಬೇಡಿ" ಎಂದಳು.

ನೀಲಾಂಬರ ನಕ್ಕು ಕೇಳಿದ—"ನಾನು ಹಾಗೆ ಅರೆಹೊಟ್ಟೆಯಿಂದ ಎದ್ದುದುಂಟೆ?"

ವಿರಾಜ ಒಪ್ಪಿದಳು-"ಇಲ್ಲ, ಇಲ್ಲ. ಒಂದು ದಿನವೂ ಇಲ್ಲ. ಈ ಅಪವಾದ ಹೇರಲು ನಿಮ್ಮ ವೈರಿಗೂ ಸಾಧ್ಯವಿಲ್ಲ. ಇದಕ್ಕಾಗಿ ಅದೆಷ್ಟು ದಿನ ನಾನು ಉಪವಾಸದಿಂದ ಇರಬೇಕಾಯಿತೆಂದು ಓರಗಿತ್ತಿಯೇ ಬಲ್ಲಳು-ಇದೇನು? ಊಟ ಮುಗಿಸಿಬಿಟ್ಟಿರಾ ನೀವು?"

ವಿರಾಜಳು ವ್ಯಗ್ರಳಾಗಿ ಬೀಸಣಿಗೆ ಚೆಲ್ಲಿಬಿಟ್ಟಳು. ಹಾಲಿನ ಪಾತ್ರೆಯನ್ನು ಗಟ್ಟಿಯಾಗಿ ಹಿಡಿದು-"ನನ್ನಾಣೆ ನಿಮಗೆ. ಈಗಲೆ ಏಳಬೇಡಿ,-ಏ ಪುಟ್ಟೀ, ಓಡಿಹೋಗಿ ಚಿಕ್ಕ ಅತ್ತಿಗೆಯಿಂದ ಎರಡು ಸಂದೇಶ * ಕೇಳಿ ತಾ. ಇಲ್ಲ, ಇಲ್ಲ. ತಲೆ ಅಲ್ಲಾಡಿಸಿದರೆ ನಡೆಯುವುದಿಲ್ಲ. ನಿಮ್ಮ ಹೊಟ್ಟೆ ತುಂಬಲೇ ಇಲ್ಲ. ಅಮ್ಮಯ್ಯ! ನಿಜ ಹೇಳುತ್ತೇನೆ ನೋಡಿ—ಹಾಗಾದರೆ ನಾನೂ ಉಪವಾಸ ಇದ್ದುಬಿಡುತ್ತೇನೆ. ರಾತ್ರಿ ಒಂದು ಗಂಟೆಯ ವರೆಗೆ ನಿದ್ದೆಗೆಟ್ಟು ಸಂದೇಶ* ಮಾಡಿದ್ದೇನೆ" ಎಂದಳು.

ಚಿಕ್ಕ ತಟ್ಟೆಯೊಂದರಲ್ಲಿ ಸಂದೇಶವು ಸಜ್ಜಾಗಿ ಇಟ್ಟಿತ್ತು. ಹರಿಮತಿ ಆ ತಟ್ಟೆಯನ್ನೇ ಎತ್ತಿ ತಂದು ಅಣ್ಣನ ಎದುರಿಗೆ ಇಟ್ಟಳು.

ನೀಲಾಂಬರ ನಕ್ಕುಬಿಟ್ಟು—"ಆಗಲಿ; ನೀನೆ ಹೇಳು, ಈ ಹೊತ್ತಿನಲ್ಲಿ ಇಷ್ಟೊಂದು ಸಂದೇಶ ನಾನು ತಿನ್ನಲು ಸಾಧ್ಯವೆ?" ಎಂದ.

ತಟ್ಟೆಯಲ್ಲಿ ಅದೆಷ್ಟು ಸಿಹಿ ತಿಂಡಿಯಿದೆಯೆಂದು ನೋಡಿ ವಿರಾಜ ಮುಖ ಕೆಳಗೆಮಾಡಿ ಹೇಳಿದಳು: "ತಟ್ಟೆಯ ಕಡೆಗೆ ಗಮನ ಕೊಡಬೇಡಿ. ಮಾತು

* ಬಂಗಾಲದೊಳಗಿನ ಒಂದು ಸಿಹಿತಿಂಡಿ

ಆಡುತ್ತ ಆಡುತ್ತ ಒಂದೊಂದೇ ಬಾಯಲ್ಲಿ ಹಾಕಿ. ಎಂದರೆ ಅದೆಲ್ಲ ಮುಗಿಸ ಬಹುದು."

"ಎಂದರೆ ತಿನ್ನಲೇ ಬೇಕೆ, ಏನೇ?"

"ಹಾಂ-ಮೀನನ್ನಾದರೂ ತಿನ್ನಬೇಕು; ಇಲ್ಲದಿದ್ದರೆ ಈ ತಿಂಡಿಯನ್ನಾದರೂ ಸ್ವಲ್ಪ ಹೆಚ್ಚಾಗಿ ತಿನ್ನಬೇಕು."

ನೀಲಾಂಬರ ತಟ್ಟೆಯನ್ನು ಬಳಿಗೆ ಎಳೆದುಕೊಂಡು-"ಒತ್ತಾಯದಿಂದ ತಿನ್ನಿಸುವ ಈ ಹಿಂಸೆಗಾಗಿ ಓಡಿಹೋಗಿ ಕಾಡು ಸೇರಲಾ ಎನ್ನುವಷ್ಟು ಗಾಬರಿಯಾಗಿದೆ" ಎಂದ.

"ಅಣ್ಣಾ ನನಗೂ........" ಎಂದು ತಡವರಿಸಿದಳು ಹರಿಮತಿ.

ಅವಳನ್ನು ಗದರುತ್ತ ವಿರಾಜಳೆಂದಳು-"ಸುಮ್ಮನಿರೆ ಬೋಕಾಣಿ. ನನ್ನನ್ನು ಕಾಡದಿದ್ದರೆ ನಿನ್ನ ಜೀವಕ್ಕೆ ನೆಮ್ಮದಿ ಎನಿಸುವುದಿಲ್ಲ. ಮಾತುಮಾತಿಗೆ ಏನಾದರೊಂದು ದೂರು ಇದ್ದೇ ಇದೆ. ಅತ್ತೆಯ ಮನೆಗೆ ಹೋದಾಗ ಹೇಗೆ ಮಾಡುವೆಯೋ ದೇವರೇ ಬಲ್ಲ!"

## ೨

ಈ ಘಟನೆಯಾಗಿ ಒಂದೂವರೆ ತಿಂಗಳು ಸಂದಿದೆ. ನೀಲಾಂಬರನಿಗೆ ಬಹಳ ಜ್ವರಬಂದುದರಿಂದ ಈ ಐದು ದಿನಗಳಿಂದ ಅವನ ಆರೋಗ್ಯ ಕೆಟ್ಟುಹೋಗಿತ್ತು. ಇಂದು ಅವನಿಗೆ ಜ್ವರವಿರಲಿಲ್ಲ. ಬೆಳಿಗ್ಗೆ ಅವನಿಗೆ ಮನಸ್ಸಿಗೆ ಸ್ವಲ್ಪ ಹಿತವೆನಿಸುತ್ತಿತ್ತು. ಸ್ವತಃ ವಿರಾಜಳೆ ಗಂಡನ ಮಾಸಿದ ಪಂಚೆ ಬಿಚ್ಚಿ ಒಗೆದ ಪಂಚೆ ಉಡಿಸಿದಳು. ಬಳಿಕ ಹಾಸಿಗೆಯನ್ನು ಕೊಡಹಿ ಹಾಸಿ, ಅವನನ್ನು ಮಲಗಿಸಿ ನಿತ್ಯದ ಮನೆಗೆಲಸಕ್ಕೆ ಹೋದಳು. ಹೊರಗೆ ತೆಂಗುಮರವೊಂದಿತ್ತು. ನೀಲಾಂಬರ ಕಿಟಕಿಯಿಂದ ಅದರೆಡೆ ನೋಡುತ್ತ ಸುಮ್ಮನೆ ಒರಗಿದ್ದ. ತಂಗಿ ಹರಿಮತಿ ಹತ್ತಿರವೇ ಕುಳಿತು ಬೀಸಣಿಕೆಯಿಂದ ಗಾಳಿಹಾಕುತ್ತಿದ್ದಳು. ಸ್ವಲ್ಪ ಹೊತ್ತಿನ ನಂತರ ವಿರಾಜಳು ಮೈ ತೊಳೆದುಕೊಂಡು ರೇಶಿಮೆ ಸೀರೆಯುಟ್ಟುಕೊಂಡು ಒಳಗೆ ಬಂದಳು. ಅವಳ ಒದ್ದೆಗೂದಲು ಬೆನ್ನಿನ ಮೇಲೆ ಇಳಿಬಿದ್ದಿದ್ದವು. ಅವಳ ಮುಖದಿಂದ ಹೊರಹೊಮ್ಮುತ್ತಿದ್ದ ತೇಜಸ್ಸಿನಿಂದ ಕೋಣೆಯೆಲ್ಲವೂ ಉಜ್ವಲವಾದಂತೆ

ತೋರಿತು. ಹೆಂಡತಿಯ ಕಡೆಗೆ ನೋಡಿ—"ಇದೇನು ವಿಶೇಷ?" ಎಂದ ನೀಲಾಂಬರ.

"ನಾನು ಹೋಗಿ ಬಾಬಾ ಪಂಚಾನಂದರ ಪೂಜಾಸಾಮಗ್ರಿ ಕಳುಹಿಸಿ ಬರಲಿ?" ಎಂದು ವಿರಾಜಳು ಗಂಡನ ತಲೆಯ ಬಳಿ ಮಂಡಿಯೂರಿ ಕುಳಿತು ಕೈಯಿಂದ ಅವನ ಜ್ವರದ ತಾಪವನ್ನು ಪರೀಕ್ಷಿಸಿ—"ಇಲ್ಲ, ಜ್ವರವೇನೂ ಇಲ್ಲ. ದೇವರೇ ಬಲ್ಲ! ಈ ವರುಷ ಜಗದಂಬೆಯ ಇಚ್ಛೆ ಏನಿದೆಯೊ? ಇತ್ತೀಚೆ ಎಲ್ಲಿ ನೋಡಿದಲ್ಲಿ ಹಾಹಾಕಾರವೇ ಹಾಹಾಕಾರ! ಇಂದು ಬೆಳಿಗ್ಗೆ ಕೇಳಿದೆ—ನಮ್ಮ ಮೋತೀ ಮೆಹತರನ ಮಗನಿಗೆ ಸಿಡುಬು ಎದ್ದಿದೆಯಂತೆ. ಅಡಿಯಿಂದ ಮುಡಿಯ ವರೆಗೆ ಸಾಸಿವೆಯಷ್ಟು ಸ್ಥಳವನ್ನೂ ಬಿಟ್ಟಿಲ್ಲವಂತೆ" ಎಂದಳು.

ನೀಲಾಂಬರ ವ್ಯಗ್ರನಾಗಿ—"ಮೋತಿಯ ಯಾವ ಹುಡುಗನಿಗೆ ಸಿಡುಬು ಎದ್ದಿದೆ?" ಎಂದು ಕೇಳಿದ.

"ಹಿರಿಯ ಹುಡುಗನಿಗೆ. ತಾಯಿ ದುರ್ಗಮ್ಮ! ನಮ್ಮ ಈ ಗ್ರಾಮವನ್ನು ಶಾಂತವಾಗಿರಿಸಮ್ಮ! ಅಯ್ಯೋ, ಆ ಮಗುವೇ ಆ ಬಡ ಕುಟುಂಬದ ವೆಚ್ಚ ನೋಡಿಕೊಳ್ಳುತ್ತಿದ್ದ. ಕಳೆದ ಶನಿವಾರ, ಇನ್ನೂ ಕೊಂಚ ರಾತ್ರಿ ಇದ್ದಾಗಲೇ ನಿದ್ದೆಯಿಂದೆಚ್ಚತ್ತೆ. ಒಮ್ಮೆಲೆ ನನ್ನ ಕೈ ನಿಮ್ಮ ಮೈಮೇಲೆ ಬಿದ್ದಿತು. ನಿಮ್ಮ ದೇಹವೆಲ್ಲವೂ ಬೆಂಕಿಯಂತೆ ಸುಡುತ್ತಿತ್ತು. ಭಯದಿಂದ ನನ್ನ ಹೃದಯದ ರಕ್ತವೇ ಹೆಪ್ಪುಗಟ್ಟಿದಂತಾಯಿತು. ಎದ್ದು ಕುಳಿತು ಎಷ್ಟೋ ಹೊತ್ತಿನ ವರೆಗೆ ಅತ್ತೆ. ಕೊನೆಗೆ—'ತಾಯಿ ದುರ್ಗಮ್ಮ, ಇವರಿಗೆ ಗುಣಪಡಿಸಮ್ಮ. ಅನಂತರವೇ ನಿನ್ನ ಪೂಜೆಮಾಡಿ ಊಟ ಉಡಿಗೆ ಮಾಡುತ್ತೇನೆ. ಇಲ್ಲದಿದ್ದರೆ ಉಪವಾಸ ವಿದ್ದು ಪ್ರಾಣಬಿಡುತ್ತೇನೆ' ಎಂದು ಹರಕೆ ಹೊತ್ತೆ."

ಈ ಮಾತು ಬಾಯಿಯಿಂದ ಹೊರಬೀಳುತ್ತಿರುವಾಗ ಅವಳ ಕಣ್ಣು ತೊಯ್ದು ಒಂದೆರಡು ಕಂಬನಿ ಉದುರಿದವು.

ಆಶ್ಚರ್ಯಚಕಿತನಾಗಿ ನೀಲಾಂಬರನೆಂದ—"ಹಾಗಾದರೆ ಇಷ್ಟು ದಿನಗಳಿಂದ ನೀನು ಉಪವಾಸ ಇದ್ದೆಯಾ?"

ಹರಿಮತಿ ಹೇಳಿದಳು—"ಹೌದಣ್ಣಾ, ಅತ್ತಿಗೆ ಏನೂ ತಿನ್ನುತ್ತಿಲ್ಲ. ಅಂದು ಸಂಜೆಗೆ ಒಂದು ಹಿಡಿ ಅವಲಕ್ಕಿ ಮುಕ್ಕಿ ಒಂದು ಲೋಟ ನೀರು ಮಾತ್ರ ಕುಡಿದಿದ್ದಾಳೆ ಅಂದಿನಿಂದ ಹಾಗೆಯೇ ಇದ್ದಾಳೆ. ಯಾರ ಮಾತೂ ಕಿವಿಗೆ ಹಾಕಿಕೊಳ್ಳುತ್ತಿಲ್ಲ."

ಹರಿಮತಿಯ ಈ ಮಾತು ಕೇಳಿ ನೀಲಾಂಬರ ಅತ್ಯಂತ ಖೇದಗೊಂಡು–" ಇದೆಲ್ಲವೂ ಹುಚ್ಚುತನವಲ್ಲವೆ ? " ಎಂದ.

ಸೆರಗಿನಿಂದ ಕಂಬನಿಗಳನ್ನು ಒರೆಸಿಕೊಂಡು ವಿರಾಜಳೆಂದಳು–" ಹೌದು, ನಿಜವಾಗಿಯೂ ಹುಚ್ಚುತನ. ಆದರೆ ನೀವು ಹೆಣ್ಣಾಗಿ ಹುಟ್ಟಿದ್ದರೆ ಗಂಡನೆಂದರೆ ಎಂತಹ ವಸ್ತುವೆಂಬುದನ್ನು ಅರಿಯುತ್ತಿದ್ದಿರಿ. ಇತ್ತೀಚೆ ಸುತ್ತಲೂ ಎಂಥ ಕೆಟ್ಟ ಗಾಳಿ ಬಿಟ್ಟಿದೆಯೊ? ಇಂಥ ಸಮಯದಲ್ಲಿ ಗಂಡನಿಗೆ ಜ್ವರ ಬಂದರೆ ಹೆಂಡತಿಯ ಎದೆಯಲ್ಲಿ ಎಂಥ ವೇದನೆ ಆಗುವುದೆಂಬುದನ್ನು ನೀವು ಆಗ ಅರಿತುಕೊಳ್ಳುತಿದ್ದಿರಿ.''

ಹೀಗೆಂದು ಎದ್ದುಹೋಗುತ್ತಲಿದ್ದ ವಿರಾಜಳು ಒಮ್ಮೆಲೆ ನಿಂತು ಹೇಳಿದಳು–" ಪುಟ್ಟೀ, ದಾಸಿ ಪೂಜೆಯ ತಟ್ಟೆ ತೆಗೆದುಕೊಂಡು ಹೋಗುತ್ತಾಳೆ. ಬೇಗ ಮೈತೊಳೆದುಕೊಂಡು ನೀನೂ ಅವಳೊಂದಿಗೆ ಹೋಗು."

ಹರಿಮತಿ ಅತ್ಯಂತ ಹರುಷದಿಂದ ಎದ್ದು ನಿಂತು—" ಆಗಲಿ ಅತ್ತಿಗೆ ! " ಎಂದಳು.

" ಹಾಗಾದರೆ ಬೇಗ ಹೊರಡು. ತಡಮಾಡಬೇಡ. ನಿನ್ನ ಅಣ್ಣನಿಗೆ ಬೇಗನೆ ಗುಣವಾಗುವಂತೆ ಬಾಬಾ ಪಂಚಾನಂದರಿಂದ ಒಳ್ಳೆಯ ಆಶೀರ್ವಾದ ಪಡೆದುಕೊಂಡು ಬಾ."

ಹರಿಮತಿ ಮಿಂಯಲು ಓಡುತ್ತ ಹೋದಳು. ಆಗ ನೀಲಾಂಬರನೆಂದ:–ಇಂಥ ಕೆಲಸವನ್ನು ಅವಳು ಅತ್ಯಂತ ಹೆಮ್ಮೆಯಿಂದ ಮಾಡುವಳು. ಬಹುಶಃ ಅವಳಷ್ಟು ಉತ್ಸಾಹ ನಿನಗೂ ಬಾರದು."

ವಿರಾಜಳು ಮುಗುಳುನಗೆ ಬೀರುತ್ತ ಕೊರಳು ಕೊಂಕಿಸುತ್ತ ನುಡಿದಳು–" ನೀವು ಹಾಗೇನೂ ಭಾವಿಸಬೇಡಿ. ಸಹೋದರರೆ ಆಗಲಿ, ತಾಯಿ ತಂದೆಗಳೆ ಆಗಲಿ, ಪ್ರೀತಿಯುವರೇನೊ ನಿಜ; ಆದರೆ ಹೆಂಗುಸಿಗೆ ಗಂಡನಿಗಿಂತ ಯಾರೂ ಹೆಚ್ಚಿನವರಲ್ಲ ! ಸೋದರರ ಅಥವಾ ತಾಯಿತಂದೆಗಳ ವಿಯೋಗವಾದಾಗ ಅವರಿಗೆ ದುಃಖವಾಗುವುದರಲ್ಲಿ ಸಂದೇಹವಿಲ್ಲ. ಆದರೆ ಗಂಡನ ವಿಯೋಗದಿಂದ ಸರ್ವಸ್ವವೂ ಹೋಗುವುದು. ನನ್ನನ್ನೇ ನೋಡಿ–ಐದೈದು ದಿನಗಳಿಂದ ಏನೂ ತಿನ್ನದೆ ಹಾಗೆಯೆ ಇದ್ದೇನೆ ! ನನ್ನೆದೆಯಲ್ಲಿ ಮನೆಮಾಡಿದ ಕಸಿವಿಸಿಯ ಅಡಿಯಲ್ಲಿ ಹಸಿವೆ ನೀರಡಿಕೆಗಳೆಲ್ಲವೂ ಅದುಮಿ ಹಿಡಿಯಲ್ಪಟ್ಟಿವೆ. ಉಪವಾಸದಿಂದಿದ್ದೇನೆಂದು ನನಗೆ ಸ್ವಲ್ಪವೂ ಎನಿಸುತ್ತಿಲ್ಲ. ಆದರೆ ಅಂಥ ತಂಗಿಯರಾರಿ

ದ್ದಾರೆ ನಿಮಗ್ಗೆ, ಸ್ವಲ್ಪ ತೋರಿಸಿ ನೋಡೋಣ! ನಾನಾದರೂ ಕಂಣಿಂದ ಸ್ವಲ್ಪ........"

ನೀಲಾಂಬರನು ಅವಳನ್ನು ಅರ್ಧಕ್ಕೆ ತಡೆದು ಚಂಚಲಚಿತ್ತನಾಗಿ "ಮುಂದೆ ?" ಎಂದ.

ವಿರಾಜಳು ಮುಂದುವರಿದಳು–"ಹಾಗಾದರೆ ಅದೇಕೆ ಹಾಗೆ ಹೇಳುವಿರಿ? ನಾನು ಹುಚ್ಚುಚ್ಚಾದರೂ ಮಾಡಿದೆನೊ ಹೇಗೆ ಎಂಬುದನ್ನು ನಾನು ಬಲ್ಲೆ; ಅಲ್ಲದೆ ಈ ಲೋಕದಲ್ಲಿ ಮುಖತೋರಿಸಲು ಯೋಗ್ಯಳನ್ನಾಗಿ ಮಾಡಿದ ಆ ಭಗವಂತ ಬಲ್ಲ. ನಾನಂತೂ ಆ ಅವಸ್ಥೆಯಲ್ಲಿ ಒಂದು ಕ್ಷಣ ಸಹ ಬದುಕಲಾರೆ. ಸೌಭಾಗ್ಯತಿಲಕ ಪೂಸಿಬಿಡುವ ಮುನ್ನವೆ ಹಣೆಯನ್ನು ಕಲ್ಲಿಗೆ ಚಚ್ಚಿಕೊಂಡು ಹೋಳುಮಾಡುತ್ತೇನೆ. ಶುಭಕಾರ್ಯದಲ್ಲಿ, ಯಾತ್ರೆಮಾಡುವಾಗ, ಯಾರೂ ಮುಖನೋಡದಂತಹ, ಪುಣ್ಯಕಾರ್ಯಕ್ಕಾಗಿ ಯಾರಿಂದಲೂ ಆಮಂತ್ರಣ ಪಡೆಯದಂತಹ ಜೀವನ ಎಂದಾದರೂ ಜೀವನವೆ? ವಿಧವೆಯಾಗಿ ಜನರ ಮುಂದೆ ಅಲೆದಾಡುವ ದುರ್ಭಾಗ್ಯ ದೇವರು ಕೊಡದಿರಲಿ. ಪೂರ್ವಕಾಲದಲ್ಲಿ ವಿಧವೆಯರನ್ನು ಚಿತೆಯ ಮೇಲಿರಿಸಿ ಸುಟ್ಟುಬಿಡುವ ಪದ್ಧತಿ ಒಳ್ಳೆಯದಿತ್ತು. ಆಗಿನ ಪುರುಷರಿಗೆ ಸ್ತ್ರೀಯರ ದುಃಖ ತಾಪಗಳ ಅರಿವಿತ್ತು. ಆದರೆ ಈಗಿನ ಪುರುಷರ ಜಾತಿಯಲ್ಲಿ ಅದೆಲ್ಲವೂ ನಿಃಶೇಷ."

ನೀಲಾಂಬರನೆಂದ–"ಹಾಗೇನಿಲ್ಲ. ಈಗ ದೇಶದ ಪುರುಷರಿಗೆ ನೀನೇ ತಿಳಿಸಿ ಹೇಳಬಹುದಲ್ಲ ?"

ವಿರಾಜಳು ನುಡಿದಳು –"ಓಹೋ ತಿಳಿಸಿ ಹೇಳಬಲ್ಲೆ. ಕೇವಲ ನಾನೊಬ್ಬಳೇ ಅಲ್ಲ. ನಿಮ್ಮನ್ನು ಪಡೆದು, ಬಳಿಕ ನಿಮ್ಮನ್ನು ಕಳೆದುಕೊಂಡ ಯಾವ ಹೆಂಗುಸಿಗೂ ಈ ವಿಷಯದ ಬಗೆಗೆ ಅಧಿಕಾರವಾಣಿಯಿಂದ ಮಾತನಾಡುವ ಶಕ್ತಿ ಬರುವುದು. ಹೋಗಲಿ ಬಿಡಿ. ನಾನಿದೇನು ಬಡಬಡಿಸಲು ಆರಂಭಿಸಿಬಿಟ್ಟೆ ?" ಎಂದು ನಕ್ಕುಬಿಟ್ಟಳು. ತರುವಾಯ ನಸು ಬಾಗಿ ಪುನಃ ಗಂಡನ ದೇಹತಾಪವನ್ನು ನೋಡಿದಳು. ಗಂಡನ ಹಣೆ-ಎದೆಗಳ ಮೇಲೆ ಕೈಯಿಟ್ಟು ಜ್ವರವಿಲ್ಲವೆಂದು ಖಚಿತವಾದ ಮೇಲೆ–"ನಿಮಗೆ ದೇಹದಲ್ಲಿ ಎಲ್ಲಿಯೂ ನೋವು ಎನಿಸುತ್ತಿಲ್ಲವೆ ?" ಎಂದು ವಿಚಾರಿಸಿದಳು.

ನೀಲಾಂಬರ ತಲೆಯಲ್ಲಾಡಿಸುತ್ತ–"ಇಲ್ಲ" ಎಂದ.

"ಹಾಗಾದರೆ ಚಿಂತೆಗೆ ಕಾರಣವಿಲ್ಲ–ಇಂದು ನನಗೆ ಹಸಿವು ಎನಿಸುತ್ತಿದೆ.

ಹೋಗಿ, ಸ್ವಲ್ಪ ಅಡುಗೆಯ ವ್ಯವಸ್ಥೆ ಮಾಡುತ್ತೇನೆ. ನಾನು ನಿಜ ಹೇಳುತ್ತೇನೆ– ಇಂದು ಯಾರಾದರೂ ನನ್ನ ಕೈಯನ್ನು ಕೊಚ್ಚಿದರೂ ಬಹುಶಃ ನನಗೆ ಕೋಪ ಕೂಡ ಬರಲಿಕ್ಕಿಲ್ಲ."

ಯದುನೌಕರನು ಹೊರಗಿನಿಂದಲೆ ಕೂಗಿದ– "ತಾಯಿೞ, ವೈದ್ಯರನ್ನು ಕರೆ ತರಬೇಕೆ ?"

"ಬೇಡ ಬೇಡ. ಇಂದು ಅಗತ್ಯವಿಲ್ಲ" ಎಂದ ನೀಲಾಂಬರ.

ನೀಲಾಂಬರನ ಈ ಮಾತಿನಿಂದ ಯದುವಿಗೆ ಸಮಾಧಾನವಾಗಲಿಲ್ಲ; ಗೃಹಿಣಿಯ ಅನುಮತಿಗಾಗಿ ಅಲ್ಲಿಯೇ ನಿಂತುಕೊಂಡ. ಅದನ್ನರಿತು ವಿರಾಜಳು ಅಪ್ಪಣೆಕೊಟ್ಟಳು– "ಇದು ನೋಡು, ನೀನು ಹೋಗಿ ಅವರನ್ನು ಕರೆತಾ. ಒಮ್ಮೆ ಬಂದು ಚನ್ನಾಗಿ ನೋಡಿ ಹೋಗಲಿ."

ಮೂರು ದಿನಗಳ ತರುವಾಯ ನೀಲಾಂಬರನ ಸ್ಥಿತಿ ಪೂರ್ಣ ಸುಧಾರಿಸಿತು. ಅಂದು ಅವನು ದೇವೀ ಮಂದಿರದಲ್ಲಿ ಕುಳಿತಿದ್ದ. ಅವನು ಕುಳಿತುಕೊಂಡದ್ದನ್ನು ನೋಡಿ ಮೋತೀ ಮೆಹತರನು ಅವನ ಹತ್ತಿರ ಬಂದ. ಬಂದವನೆ ಅಳುತ್ತಲೆ ಹೇಳಿದ– "ಅಣ್ಣಾ, ಒಂದು ಸಲ ನೀವು ಬಂದು ನೋಡದೆಹೋದರೆ ನನ್ನ ಮಗ ಉಳಿಯಲಾರ. ಒಮ್ಮೆಯಾದರೂ ನಿಮ್ಮ ಚರಣಧೂಳಿ ಕೊಡಹುವ ಕೃಪೆಮಾಡಿ ದೊರೆ! ಎಂದರೆ ಮಾತ್ರ ಅವನು ಬದುಕುವ ಆಸೆ ಇದೆ."

ಮೋತಿ ಇನ್ನೂ ಏನೇನೋ ಹೇಳುವುದರಲ್ಲಿದ್ದ. ಆದರೆ ಅವನಿಗೆ ಹೆಚ್ಚಿಗೆ ಹೇಳಲು ಬಾಯೇ ಬರಲಿಲ್ಲ. ಕಂಬನಿಗಳ ಆವೇಗದಿಂದ ಅವನ ಗಂಟಲು ಕಟ್ಟಿಕೊಂಡಿತು.

"ಏನು ಮೋತೀ ದುರ್ಗಮ್ಮ ಹುಡುಗನ ಮೈತುಂಬ ಎದ್ದಿದ್ದಾಳೆಯೆ?"

ಕಣ್ಣುಗಳನ್ನೊರೆಸಿಕೊಳ್ಳುತ್ತಲೆ ಮೋತಿ– "ಅದನ್ನು ಕೇಳಬೇಡಿ ಅಣ್ಣಾ! ದೇವಿ ಎಳ್ಳುಕಾಳಿನಷ್ಟು ಸ್ಥಳವನ್ನೂ ಬಿಟ್ಟಿಲ್ಲ. ಕೀಳುಜಾತಿಯವನು ನಾನು– ಅಜ್ಞಾನಿ. ಇಂಥ ಪರಿಸ್ಥಿತಿಯಲ್ಲಿ, ಏನು ಮಾಡಬೇಕೋ ತೋಚಲೊಲ್ಲದು. ಒಂದು ಸಲ ಕೃಪೆದೋರು ದೊರೆಯೆ!" ಎಂದು ಹೇಳಿ ಅಂಗಲಾಚಿಕೊಂಡು ನೀಲಾಂಬರನ ಕಾಲುಗಳೆರಡನ್ನೂ ಗಟ್ಟಿಯಾಗಿ ಹಿಡಿದುಕೊಂಡ.

ನೀಲಾಂಬರನು ಮೆಲ್ಲನೆ ಕಾಲುಗಳನ್ನು ಬಿಡಿಸಿಕೊಂಡು ಕೋಮಲ ದನಿಯಿಂದ– "ಮನೆಗೆ ಹೋಗು ಮೋತೀ. ಹೆದರುವ ಕಾರಣವೇನೂ ಇಲ್ಲ. ನಾನು ಆ ಮೇಲೆ ಬರುತ್ತೇನೆ" ಎಂದ. ಮೋತಿಯು ಕರುಣಾರ್ದ್ರಭಾವದಿಂದ ಅಳು

ತ್ತಿದ್ದುದನ್ನು ನೋಡಿ ತನ್ನ ಅನಾರೋಗ್ಯದ ವಿಷಯವೆತ್ತಲು ನೀಲಾಂಬರ ನಿಂದಾಗಲಿಲ್ಲ.

ಹುಡುಗನನ್ನು ಒಂದು ಸಲ ನೋಡುವಂತೆ ಮೋತಿಯು ನೀಲಾಂಬರ ನನ್ನು ಅಷ್ಟು ಆಗ್ರಹಪಡಿಸಲು ಒಂದು ವಿಶೇಷ ಕಾರಣವಿತ್ತು. ನೀಲಾಂಬರ ನಾನಾ ತರದ ರೋಗಿಗಳ ಸೇವೆಮಾಡಿ ಅನೇಕ ರೋಗಗಳ ವಿಷಯವಾಗಿ ಒಳ್ಳೆಯ ಅನುಭವವನ್ನೂ ಜ್ಞಾನವನ್ನೂ ಪಡೆದಿದ್ದ. ಆದ್ದರಿಂದ ಸುತ್ತುಮುತ್ತ ಲಿನ ಗ್ರಾಮಗಳಲ್ಲಿ ಯಾರಿಗಾದರೂ ತುಂಬ ಜ್ವರಬಂದಾಗ ರೋಗಿಯ ಮನೆ ಯವರು ಆ ರೋಗಿಯನ್ನು ನೀಲಾಂಬರನಿಂದ ಒಂದು ಸಲವಾದರೂ ಪರೀಕ್ಷಿಸ ದಿರುತ್ತಿರಲಿಲ್ಲ. ನೀಲಾಂಬರನು ಆಶ್ವಾಸನವೀಯುವ ವರೆಗೆ ಸ್ವತಃ ರೋಗಿ ಗಾಗಲಿ ಆವನ ಮನೆಯವರಿಗಾಗಲಿ ಸಮಾಧಾನವಾಗುತ್ತಿದ್ದಿಲ್ಲ. ಈ ಮಾತು ನೀಲಾಂಬರನಿಗೂ ಗೊತ್ತಿಲ್ಲದಿರಲಿಲ್ಲ. ತನ್ನ ಹಳ್ಳಿಯ ಅಶಿಕ್ಷಿತ ಜನರಿಗೆ ತನ್ನ ಪಾದಧೂಳಿಯ ಮೇಲೆ, ತಾನು ಕೈಯೆತ್ತಿ ಕೊಟ್ಟ ತೀರ್ಥದ ಮೇಲೆ ಇದ್ದಷ್ಟು ವಿಶ್ವಾಸ ವೈದ್ಯ-ಡಾಕ್ಟರುಗಳ ಔಷಧಿಯ ಮೇಲಿಲ್ಲವೆಂದು ಆತನೂ ಬಲ್ಲ. ತನ್ನಲ್ಲಿ ಆಂತರಿಕ ಶ್ರದ್ಧೆಯಿಟ್ಟ ಜನರು ತನ್ನ ಅನುಭವದ ಲಾಭ ಪಡೆದು ಕೊಳ್ಳುವ ವಿಷಯದಲ್ಲಿ ನೀಲಾಂಬರ ಯಾರನ್ನೂ ಯಾವ ಕಾಲಕ್ಕೂ ನಿರಾಶೆ ಪಡಿಸಿದವನಲ್ಲ. ಯಾರು ಕರೆದರೂ ಅವರಲ್ಲಿ ನಗುಮುಖದಿಂದ ಓಡುತ್ತಿದ್ದ.

ಹೋಗುವ ಮುನ್ನ ಮೋತಿಯು ಪುನಃ ಅತ್ತ. ನೀಲಾಂಬರನ ಪಾದ ಧೂಳಿ ಕೊಡಹಬೇಕೆಂದು ಅವನಿಗೆ ಪ್ರಾರ್ಥಿಸಿಕೊಂಡು ಕಣ್ಣುಗಳನ್ನೊರೆಸುತ್ತ ಮೋತಿ ಅಲ್ಲಿಂದ ಹೊರಟುಹೋದ. ಅವನು ಹೊರಟುಹೋದ ಬಳಿಕ ನೀಲಾಂ- ಬರ ಉದ್ವಿಗ್ನನಾಗಿ ಮನದಲ್ಲೇ ಯೋಚಿಸತೊಡಗಿದ– "ನನ್ನ ಮೈಯ ಲ್ಲೇನೋ ಇನ್ನೂ ಬಹಳ ಅಶಕ್ತತೆ ಇದೆ. ಆದರೂ ಪರವಿಲ್ಲ ನಾನು ಮೋತಿಯ ಮನೆಗೆ ಹೋಗಲೇ ಬೇಕು." ನೀಲಾಂಬರನಿಗೆ ಚಿಂತೆ ಎಂಬುದೇನಾದರೂ ಇದ್ದರೆ, ಮನೆಬಿಟ್ಟು ಹೊರಗೆ ಹೇಗೆ ಹೋಗುವುದು ಎಂಬುದೇ. ಅವನು ವಿರಾಜಳಿಗೆ ಬಹಳ ಹೆದರುತ್ತಿದ್ದ. ಮೋತಿಯ ಮನೆಗೆ ಹೋಗಬೇಕಾಗಿದೆ ಯೆಂದು ಅವಳೆದುರು ಹೇಳುವ ಧೈರ್ಯ ಬರಲಿಲ್ಲ ಅವನಿಗೆ.

ಈ ಚಿಂತೆಯಲ್ಲಿ ಮುಳುಗಿರುವಾಗ, ನೀಲಾಂಬರನಿಗೆ ಅಂಗಳದಿಂದ ಹರಿ ಮತಿಯ ಕಂಠಸ್ವರ ಕೇಳಿತು. ಅವಳು ಕೂಗಿ ಹೇಳಿದಳು : "ಅಣ್ಣಾ, ನೀನು ಒಳಗೆ ಬಂದು ಕೊಂಚ ಒರಗಬೇಕೆಂದು ಅತ್ತಿಗೆ ಹೇಳುತ್ತಿದ್ದಾಳೆ."

ನೀಲಾಂಬರ ಉತ್ತರ ಕೊಡಲೇ ಇಲ್ಲ. ಒಂದು ನಿಮಿಷದ ಮೇಲೆ ಸ್ವತಃ ಹರಿಮತಿ ಅಲ್ಲಿಗೆ ಬಂದು- "ಏನಣ್ಣಾ, ನಾನು ಕೂಗಿದ್ದು ಕೇಳಲಿಲ್ಲವೆ ?" ಎಂದಳು.

"ಇಲ್ಲ" ಎಂದ ನೀಲಾಂಬರ ತಲೆಯಲ್ಲಾಡಿಸುತ್ತ.

ಆಗ ಹರಿಮತಿ-"ಊಟ ಮಾಡಿದ ಬಳಿಕ ಈ ವರೆಗೂ ಒರಗಿಕೊಳ್ಳಲಿಲ್ಲ ನೀನು. ಹಾಗೆಯೇ ಕುಳಿತಿರುವೆ. 'ಕುಳಿತುಕೊಳ್ಳುವುದು ಬೇಡ. ಒಳಗೆ ಮಲಗಿಕೊಳ್ಳಲಿ' ಎಂದು ಅತ್ತಿಗೆ ಹೇಳುತಿದ್ದಾಳೆ" ಎಂದಳು.

ನೀಲಾಂಬರ ಮೆತ್ತಗೆ ಕೇಳಿದ-"ಅವಳೇನು ಮಾಡುತ್ತಿದ್ದಾಳೆ ಪುಟ್ಟೀ?"

"ಊಟಕ್ಕೆ ಕುಳಿತಿದ್ದಾಳೆ."

ತಂಗಿಯನ್ನು ಪ್ರೇಮದಿಂದ ನೇವರಿಸುತ್ತ—"ನೀನು ಒಳ್ಳೆಯ ಹುಡುಗಿ. ಸಾಕ್ಷಾತ್ ಲಕ್ಷ್ಮಿಯ ಅವತಾರ ನೋಡು. ನನ್ನ ಮಾತನ್ನು ನೀನು ಒಂದು ಸಲವೂ ಅಸಡ್ಡೆಮಾಡಿಲ್ಲ. ತಂಗೀ, ನನ್ನ ಒಂದು ಕೆಲಸ ಮಾಡುವೆಯಾ ?" ಎಂದ ನೀಲಾಂಬರ.

"ಹೂಂ, ಮಾಡುತ್ತೇನೆ" – ಹರಿಮತಿ ತಲೆಯಲ್ಲಾಡಿಸುತ್ತ ಎಂದಳು.

ನೀಲಾಂಬರ ತನ್ನ ದನಿಯನ್ನು ಮತ್ತಷ್ಟು ಕೋಮಲವಾಗಿಸಿ-"ಹೋಗು ಮಗು. ಮೆಲ್ಲಗೆ ನನ್ನ ಶಾಲು, ಕೊಡೆ ತೆಗೆದುಕೊಂಡು ಬಾ" ಎಂದ.

"ಶಾಲು ಮತ್ತು ಕೊಡೆಯೆ ?"

"ಹುಂ" ಎಂದ ನೀಲಾಂಬರ.

ಹುಬ್ಬುಗಳನ್ನು ಹಣೆಗೇರಿಸುತ್ತ ಹರಿಮತಿಯೆಂದಳು- "ಅಮ್ಮಯ್ಯಾ ! ಅತ್ತಿಗೆ ಈ ಕಡೆಗೆ ಮುಖಮಾಡಿಕೊಂಡೇ ಊಟಕ್ಕೆ ಕುಳಿತಿದ್ದಾಳೆ !"

ಕೊನೆಯ ಪ್ರಯತ್ನ ಮಾಡುತ್ತ ನೀಲಾಂಬರನೆಂದ-"ಹೇಗೆ, ನೀನು ತರಬಹುದೆ ?"

ಹರಿಮತಿಯು ತುಟಿ ಬಿಚ್ಚಿ, ತಲೆಯಲ್ಲಾಡಿಸಿ ನುಡಿದಳು- "ಬೇಡ ಅಣ್ಣಾ, ಅತ್ತಿಗೆ ಖಂಡಿತ ನೋಡಿಬಿಡುತ್ತಾಳೆ. ನೀನು ಸುಮ್ಮನೆ ಹೋಗಿ ಮಲಗು"

ಆಗ ಬಹುಶಃ ಎರಡು ಗಂಟೆ ಆಗಿರಬಹುದು. ಹೊರಗೆ ಸೂರ್ಯನ ಕಿರಣಗಳು ಪ್ರಚಂಡವಾದ ಬೆಂಕಿಮಳೆ ಸುರಿಸುತ್ತಿದ್ದವು. ಅವುಗಳನ್ನು ನೋಡಿ ಬರಿ ತಲೆಯಿಂದ ಹೊರಬೀಳುವ ಯೋಚನೆಯನ್ನು ಕೂಡ ನೀಲಾಂಬರ ಮಾಡ

ಹಾದ. ಅವನು ಹತಾಶನಾಗಿ ತಂಗಿಯ ಜೊತೆಗೆ ಒಳಗೆ ಹೋಗಿ ಒರಗಿದ. ಹರಿಮತಿ ಸ್ವಲ್ಪ ಸಮಯ ಯದ್ವಾತದ್ವಾ ಬಡಬಡಿಸುತ್ತಾ ನಿದ್ದೆಹೋದಳು. ಇತ್ತ ನೀಲಾಂಬರ ಒರಗಿದ್ದಲ್ಲಿಯೇ ಗಂಭೀರನಾಗಿ ಆಲೋಚಿಸುತ್ತಿದ್ದ: 'ವಿರಾಜಳೆದುರು ಮೋತಿಯ ಹುಡುಗನ ಬೇನೆಯ ಪ್ರಸ್ತಾಪ ಯಾವ ರೀತಿ ಎತ್ತಿದರೆ ಅವಳ ಎದೆಯಲ್ಲಿ ಕರುಣೆಯ ಉದ್ರೇಕವುಂಟಾದೀತು ?' ಎಂದು.

ಹಗಲು ಬಹುಶಃ ಮುಗಿಯ ಬಂದಿತ್ತು. ವಿರಾಜಳು ಸಿಮೆಂಟಿನ ಕೋಣೆಯಲ್ಲಿ ನುಣುಪು ಕಲ್ಲಿನ ಮೇಲೆ ವಕ್ಷಸ್ಥಲಕ್ಕೆ ದಿಂಬು ಒರಗಿಸಿ ಬೋರಲಾಗಿ ಸೋದರತ್ತೆ ಮಾವಂದಿರಿಗೆ ಕಾಗದ ಬರೆಯುತ್ತಿದ್ದಳು. ಅದರಲ್ಲಿಯೆ ತನ್ಮಯಳಾಗಿದ್ದ ಅವಳಿಗೆ ಸುತ್ತಲಿನ ಅರಿವೇ ಇರಲಿಲ್ಲ. ಅವಳು ಬಲು ದೊಡ್ಡ ಪತ್ರ ಬರೆಯುತ್ತಿದ್ದಳು. ಆಗಲೇ ಪೂರ್ಣ ನಾಲ್ಕು ಪುಟಗಳು ಬರೆದಾಗಿದ್ದರೂ ಕಾಗದದ ಉಪಸಂಹಾರವಾಗಿರಲಿಲ್ಲ. ಹಳ್ಳಿಯಲ್ಲಿ ದುರ್ಗಮ್ಮನ ಪ್ರಕೋಪವೆಷ್ಟು ಪ್ರಚಂಡವಿದೆ !– ಇಡಿಯ ಗ್ರಾಮದಲ್ಲಿ ತನ್ನೊಬ್ಬಳ ಮನೆಯೊಂದನ್ನೇ ಅವಳು ಇನ್ನೂ ನೋಂಕದಿರಲು ಕಾರಣವೇನು ?–ತನ್ನ ಸೌಭಾಗ್ಯ ತಿಲಕದ ಹಾಗೂ ಕೈಬಳೆಗಳ ರಕ್ಷಣೆ ಹೇಗೆ ಆಗಿದೆ?– ಎಂಬುವನ್ನೆಲ್ಲಾ ಅವಳು ಸವಿಸ್ತಾರವಾಗಿ ಬರೆಯುತ್ತಿದ್ದಳು. ವಿಷಯವು ಬರೆದಂತೆ ಬೆಳೆಯತೊಡಗಿದ್ದರಿಂದ ಮುಕ್ತಾಯಗೊಳಿಸಲು ಅವಳಿಗೆ ಸ್ವಲ್ಪ ಕಠಿಣವೆನಿಸತೊಡಗಿತು. ಅಷ್ಟರಲ್ಲಿ ಒರಗಿದ್ದಲ್ಲಿಂದಲೇ ನೀಲಾಂಬರನೆಂದ– "ಹೌದು ವಿರಾಜ್, ನನ್ನ ಮಾತೊಂದು ನಡೆಸಿಕೊಡುವೆಯಾ ?"

ಮಸಿಕುಡಿಕೆಯಲ್ಲಿ ಲೆಕ್ಕಣಿಕೆಯೆದ್ದುತ್ತಿದ್ದುದನ್ನು ಹಾಗೆಯೇ ಬಿಟ್ಟು ವಿರಾಜಳು ಮೊಗವೆತ್ತಿ–"ಯಾವ ಮಾತು ?" ಎಂದಳು.

"ನೀನು ನಡೆಸಿಕೊಡಲು ಒಪ್ಪಿದರೆ ಹೇಳುತ್ತೇನೆ."

ವಿರಾಜಳೆಂದಳು : "ಒಪ್ಪುವಂತಹದಿದ್ದರೆ ಒಪ್ಪೇ ಒಪ್ಪುವಾ. ಹೇಳಿ, ಯಾವ ಮಾತದು ?"

ಕ್ಷಣ ಹೊತ್ತು ಯೋಚಿಸಿದ ಬಳಿಕ ನೀಲಾಂಬರನೆಂದ– "ಹೇಳುವುದರಲ್ಲಿ ಏನೂ ಲಾಭವಿಲ್ಲ ವಿರಾಜ್. ನೀನು ನನ್ನ ಮಾತು ನಡೆಸುವುದಿಲ್ಲ."

ವಿರಾಜಳು ಹೆಚ್ಚಿನ ಗೋಜಿಗೆ ಹೋಗಲಿಲ್ಲ. ಅವಳು ಲೆಕ್ಕಣಿಕೆ ಎತ್ತಿ ಕಾಗದ ಮುಗಿಸುವುದಕ್ಕಾಗಿ ಪುನಃ ಬಾಗಿದಳು. ಆದರೆ ಬರೆಯಲು ಮನಸ್ಸು ಬರಲಿಲ್ಲ. ಒಳಗೊಳಗೆ ಅವಳ ಕುತೂಹಲ ಹೆಚ್ಚುತ್ತಲೇ ಹೋಯಿತು. ಆದ್ದ

ರಿಂದ ಎದ್ದು ನೀಟಾಗಿ ಕುಳಿತು–" ಒಳ್ಳೇದು ಹೇಳಿ, ನಿಮ್ಮ ಮಾತು ನಡೆಸಿ ಕೊಡುತ್ತೇನೆ " ಎಂದಳು.

ನೀಲಾಂಬರ ನಸುನಗುತ್ತ ಸ್ವಲ್ಪ ಅನುಮಾನಗೊಂಡು ಅತ್ತಿತ್ತ ನೋಡಿ ಹೇಳಿದ–"ಮಧ್ಯಾಹ್ನ ಮೋತೀ ಮೆಹೆತರನು ಬಂದಿದ್ದ. ಬಂದವನೆ ನನ್ನ ಕಾಲುಗಳೆರಡನ್ನೂ ಗಟ್ಟಿಯಾಗಿ ಹಿಡಿದ. ಹಿಡಿದ ಕಾಲುಗಳನ್ನು ಬಿಡಲು ಒಪ್ಪಲೇ ಇಲ್ಲ. ಒಂದು ಸಲ ನನ್ನ ಪಾದಧೂಳಿ ಬೀಳದೆ ತನ್ನ ಮಗ ಬದುಕುವು ದಿಲ್ಲವೆಂದು ಅವನಿಗೂ ಅವನ ಮನೆಯವರೆಲ್ಲರಿಗೂ ವಿಶ್ವಾಸ. ಆದುದರಿಂದ ಸ್ವಲ್ಪ ಹೊತ್ತಿನ ಮಟ್ಟಿಗೆ ನಾನು ಅಲ್ಲಿ ಹೋಗಬೇಕಾಗಿದೆ."

ವಿರಾಜಳು ಪತಿಯ ಮುಖವನ್ನು ದಿಟ್ಟಿಸುತ್ತ ಸ್ತಬ್ಧಳಾಗಿ ಕುಳಿತಳು. ಸ್ವಲ್ಪ ಸಮಯದ ಬಳಿಕ–" ಈ ದುರ್ಬಲ ದೇಹವನ್ನು ಹೊತ್ತುಕೊಂಡು ಹೋಗುವಿರಾ ನೀವು ? " ಎಂದಳು.

"ಏನು ಮಾಡಲಿ ವಿರಾಜ್? ನಾನು ಅವನಿಗೆ ಮಾತುಕೊಟ್ಟಿದ್ದೇನೆ. ಅದ ಕ್ಕಾಗಿ ನಾನು ಸ್ವಲ್ಪ ಹೊತ್ತು ಮಾತ್ರ ಅಲ್ಲಿ ಹೋಗಲೇಬೇಕು."

" ವಚನವನ್ನೇಕೆ ಕೊಟ್ಟಿರಿ ? "

ನೀಲಾಂಬರ ಸುಮ್ಮನೆ ಕುಳಿತ. ವಿರಾಜಳು ಸಿಡಿಮೊಗದಿಂದ –" ನಿಮ್ಮ ಪ್ರಾಣ ಕೇವಲ ನಿಮ್ಮದೆಂದೇ ತಿಳಿದಿರುವಿರಾ ? ಅದನ್ನು ಕುರಿತು ಯೋಚಿಸಲು ಮತ್ತಾರಿಗೂ ಯಾವ ಅಧಿಕಾರವೂ ಇಲ್ಲವೆ ? ನಿಮ್ಮ ಮನಸ್ಸಿಗೆ ಬಂದಂತೆ ನೀವು ಮಾಡುವುದೆ ? " ಎಂದಳು.

ಈ ವಿಷಯವನ್ನೆ ತೇಲಿಸುವ ಯೋಚನೆಯಿಂದ ನೀಲಾಂಬರ ನಗಲು ಯತ್ನಿಸಿದ. ಆದರೆ ಹೆಂಡತಿಯ ಮುಖ ನೋಡಿದ ಕೂಡಲೆ ನಗೆ ಬತ್ತೀ ಹೋಯಿತು. ಅವನು ಅತಿ ಪ್ರಯಾಸದಿಂದ ಇಷ್ಟೇ ಹೇಳಿದ: "ಅವನ ಅಳು ನೋಡಿ........"

ವಿರಾಜಳು ನಡುವೆಯೆ ಅವನ ಮಾತನ್ನು ಹಾರಿಸಿ ಗರ್ಜಿಸಿದಳು— "ಒಳಿತಾಯಿತು ! ಅವನ ಅಳುವನ್ನೇನೋ ನೀವು ನೋಡಿದಿರಿ ! ಆದರೆ ಈ ಪ್ರಪಂಚದಲ್ಲಿ ನನ್ನ ಅಳುವನ್ನು ನೋಡುವವರು ಯಾರಾದರೂ ಇದ್ದಾರೆಯೆ ? " ಅದೇ ರಭಸದಲ್ಲಿ ಅವೇ ಆಗ ಬರೆದಿಟ್ಟ ನಾಲ್ಕು ಪುಟದ ಓಲೆಯನ್ನೆತ್ತಿ ಹರಿದು ಚೂರು ಚೂರು ಮಾಡಿ ಮತ್ತಿಂತೆಂದಳು : " ಅಬ್ಬಾ ! ಗಂಡುಸರ ಮನೋ ವೃತ್ತಿಯೆ ! ನಾಲ್ಕು ಹಗಲು ನಾಲ್ಕು ರಾತ್ರಿ ಏನೂ ತಿನ್ನದೆ ಕೊಂಚವೂ ನಿದ್ದೆ

ಹೋಗದೆ ದೂಡಿವೆ. ಆದರ ಫಲವನ್ನು ಈಗ ಕೈಗೇ ಕೊಡುತ್ತಿದ್ದಾರೆ ಇವರು! ನೋಡಿದಲ್ಲಿ ರೋಗ-ರುಜಿನ, ನೋಡಿದಲ್ಲಿ ಸಿಡುಬು. ಮತ್ತೆ ಹೊರಟಿದ್ದಾರೆ ಇವರು, ಇಂಥ ದುರ್ಬಲದೇಹ ಹೊತ್ತುಕೊಂಡು ರೋಗಿಯನ್ನು ಕಾಣಲು! ಹೋಗಿ; ನನಗೂ ದೇವರಿದ್ದೇ ಇದ್ದಾನೆ" ಎಂದು ಪುನಃ ಎದೆಯ ಅಡಿಗೆ ದಿಂಬನ್ನಿಟ್ಟುಕೊಂಡು ಬೋರಲು ಒರಗಿದಳು.

ನೀಲಾಂಬರನ ತುಟಿಯ ಮೇಲೆ ಅತಿ ಸೂಕ್ಷ್ಮ, ಅತ್ಯಂತ ಕ್ಷೀಣ, ಹಾಸ್ಯ ರೇಖೆಯೊಂದು ಮೂಡಿತು. ಅವನು ಮೆಲ್ಲಗೆ ನುಡಿದ: "ವಿರಾಜ್, ನೀನು ಮಾತು ಮಾತಿಗೆ ದೇವರ ಹೆಸರು ತೆಗೆಯುವೆಯಲ್ಲ, ಅವನ ಮೇಲೆ ನಿನಗೂ ವಿಶ್ವಾಸವಿದೆಯೇ?"

ವಿರಾಜಳು ಚಟ್ಟನೆ ಎದ್ದು ಕುಳಿತು ಕೋಪದಿಂದ–"ಇಲ್ಲ. ಭಗವಂತನ ಮೇಲೆ ನಿಮಗಷ್ಟೆ ವಿಶ್ವಾಸ, ನಮಗೇನೂ ಇಲ್ಲ. ನಾವು ಭಜನೆ ಮಾಡುವುದಿಲ್ಲ, ತುಳಸೀ ಮಾಲೆ ಸುತ್ತಿಕೊಳ್ಳುವುದಿಲ್ಲ, ಹೆಣಗಳನ್ನು ಸುಡುತ್ತ ಅಲೆಯುವುದಿಲ್ಲ. ಆದುದರಿಂದಲೆ ನಮಗೆ ಭಗವಂತನ ಮೇಲೆ ವಿಶ್ವಾಸವಿಲ್ಲ. ಅವನ ಮೇಲೆ ನಿಮಗೆ ಮಾತ್ರವೇ ವಿಶ್ವಾಸ" ಎಂದು ಮೂದಲಿಸಿದಳು.

ಹೆಂಡತಿಯ ಈ ಅಸಂತುಷ್ಟಿಯನ್ನು ಕಂಡು ನೀಲಾಂಬರ ನಕ್ಕುಬಿಟ್ಟ. ಆತನೆಂದ– "ಕೋಪಗೊಳ್ಳಬೇಡ ವಿರಾಜ್. ನಿಜವಾಗಿಯೂ ವಸ್ತುಸ್ಥಿತಿ ಹಾಗೆಯೆ ಇದೆ. ಈ ಮಾತು ನಿನಗೆ ಮಾತ್ರವಲ್ಲ– ಸ್ತ್ರೀಜಾತಿಗೆಲ್ಲ ಅನ್ವಯಿಸುತ್ತದೆ. ಭಗವಂತನ ಮೇಲೆ ಪೂರ್ಣವಿಶ್ವಾಸವಿಟ್ಟು ತಣ್ಣಗೆ ಕುಳಿತುಕೊಳ್ಳುವಷ್ಟು ಶಾರೀರಿಕ ಬಲ ಸ್ತ್ರೀಯರಲ್ಲಿಲ್ಲ. ಎಂದ ಮೇಲೆ ನಿನ್ನದಾದರೂ ಏನು ದೋಷ?"

ನೀಲಾಂಬರನ ಈ ಮಾತು ಕೇಳಿ ವಿರಾಜಳ ಕೋಪ ಮತ್ತಿಷ್ಟು ಹೆಚ್ಚಿತು. ಅವಳು ಆವೇಶದಿಂದ ನುಡಿದಳು: "ಇಲ್ಲ. ದೋಷವೆಲ್ಲಿಯದು? ನಿಜವಾಗಿ ಆ ದೋಷವೇ ಸ್ತ್ರೀಯರ ಸದ್ಗುಣ. ಆದರೆ ಭಗವಂತನಲ್ಲಿ ವಿಶ್ವಾಸವಿಡುವುದಕ್ಕೆ ಶಾರೀರಿಕ ಬಲದ ಅವಶ್ಯಕತೆಯೆ ಇದ್ದರೆ ಹುಲಿ ಚಿರತೆಗಳ ದೇಹದಲ್ಲಿ ಇನ್ನೂ ಹೆಚ್ಚಿನ ಶಾರೀರಿಕ ಬಲವಿಲ್ಲವೆ? ಇದಲ್ಲದೆ ಸ್ತ್ರೀಯರಲ್ಲಿ ಬಲವಿರಲಿ, ಇಲ್ಲದಿರಲಿ — ಈ ಅಶಕ್ತ ದೇಹವನ್ನು ಹೊತ್ತುಕೊಂಡು ಹೋಗಲು ನಿಮ್ಮನ್ನು ನಾನು ಖಂಡಿತ ಬಿಡುವುದಿಲ್ಲ. ನೀವು ಎಷ್ಟೇ ವಾದವಿವಾದ ಮಾಡಿ; ಎಷ್ಟೇ ಯುಕ್ತಿಗಳನ್ನು ಹೂಡಿ. ಅದಕ್ಕೆ ನಾನು ಸೊಪ್ಪುಹಾಕುವುದಿಲ್ಲ!!

ನೀಲಾಂಬರ ಹೆಚ್ಚಿಗೆ ಮಾತನಾಡದೆ ಸುಮ್ಮನೆ ಒರಗಿದ. ವಿರಾಜಳು ಗಳಿಗೆ ಹೊತ್ತು ಮೌನವಾಗಿದ್ದು-"ಸಂಜೆಯಾಗುತ್ತ ಬಂತು. ಹೋಗೋಣ, ಏನಾದ ರಷ್ಟು ಕೆಲಸವನ್ನಾದರೂ ಮಾಡೋಣ" ಎನ್ನುತ್ತ ಎದ್ದು ಹೋದಳು. ಒಂದು ಗಂಟೆಯ ನಂತರ ದೀಪ ಹಚ್ಚಿ ಕೋಣೆಯಲ್ಲಿ ಇಡಲು ಬಂದಾಗ ತನ್ನ ಸ್ವಾಮಿ ಹಾಸಿಗೆಯ ಮೇಲೆ ಇಲ್ಲದುದನ್ನು ಕಂಡಳು. ಆವಳು ತ್ವರೆಯಾಗಿ ಹೆಜ್ಜೆ ಹಾಕುತ್ತ ಹೊರಬಂದು-"ಪುಟ್ಟೀ, ನಿನ್ನಣ್ಣ ಎಲ್ಲಿಗೆ ಹೋದರೇ? ಹೋಗು, ಹೊರಗೆ ನೋಡಿಕೊಂಡು ಬಾ" ಎಂದು ಕೂಗಿ ಹೇಳಿದಳು.

ಹರಿಮತಿ ಓಡುತ್ತ ಹೋದಳು. ಐದು ನಿಮಿಷಗಳ ನಂತರ ತೇಗುತ್ತ ತೇಗುತ್ತ-"ಎಲ್ಲಿಯೂ ಕಾಣಲಿಲ್ಲ. ನದಿಯ ವರೆಗೂ ಹೋಗಿಬಂದೆ" ಎಂದಳು.

ವಿರಾಜಳು ತಲೆಯಲ್ಲಾಡಿಸುತ್ತ-'ಹೂಂ' ಎಂದು ಅಡಿಗೆಮನೆಯ ಬಾಗಿಲು ಬಳಿ ತೆಪ್ಪಗೆ ಕುಳಿತಳು.

## ೩

ಮೂರು ವರ್ಷಗಳ ನಂತರದ ಮಾತಿದು. ಹರಿಮತಿ ಎರಡು ತಿಂಗಳು ಮೊದಲೆ ಮಾವನ ಮನೆಗೆ ಹೋಗಿದ್ದಳು. ತಮ್ಮನಾದ ಪೀತಾಂಬರ ಬೇರೆಯಾಗಿದ್ದ. ಆತ ಮನೆಯನ್ನು ವಿಭಾಗಿಸಿ ತನ್ನ ಮನೆಗೊಂದು ಬೇರೆ ಬಾಗಿಲು ಮಾಡಿಸಿದ್ದ. ಹೊರಗೆ ದೇವೀ ಮಂದಿರದ ಅಂಗಳದಲ್ಲಿ ಸಂಜೆಯ ನೆಳಲು ಸ್ಪಷ್ಟವಾಗಿ ಕಾಣುತಿತ್ತು. ಅದೇ ಆಗ, ನೀಲಾಂಬರ ಒಂದು ಹರುಕು ಚಾಪೆಯ ಮೇಲೆ ಕುಳಿತಿದ್ದ. ವಿರಾಜಳು ಮೆಲ್ಲನೆ ಅವನ ಹತ್ತಿರ ಬಂದು ನಿಂತಳು. ನೀಲಾಂಬರನು ದೃಷ್ಟಿ ಮೇಲಕ್ಕೆತ್ತಿ ಅವಳನ್ನು ನೋಡುತ್ತ-"ಒಮ್ಮೆಲೆ ಹೊರಗೇಕೆ ಬಂದು ನಿಂತೆ?" ಎಂದ

ವಿರಾಜಳು ಒಂದು ಮಗ್ಗಲು ಕುಳಿತು-"ನಾನು ಒಂದು ವಿಷಯ ಕೇಳಬಹುದೆ?" ಎಂದಳು.

'ಏನದು?'

"ಯಾವ ವಸ್ತು ತಿನ್ನುವುದರಿಂದ ಸಾವು ಬರುವುದೋ ಅದರ ಹೆಸರನ್ನಷ್ಟು ನನಗೆ ತಿಳಿಸುವಿರಾ?"

ನೀಲಾಂಬರ ಸುಮ್ಮನಿದ್ದ.

ವಿರಾಜಳು ಪುತ್ತಿರಿಂತೆಂದಳು: "ಒಂದೇ, ನನಗೆ ಸಾಯುವ ಉಪಾಯ ವನ್ನಾದರೂ ಹೇಳಿಕೊಡಿ. ಇಲ್ಲವೆ, ನೀವು ದಿನದಿನಕ್ಕೆ ಈ ರೀತಿ ಸೊರಗುತ್ತಿರುವ ಕಾರಣವನ್ನಾದರೂ ಸ್ಪಷ್ಟವಾಗಿ ತಿಳಿಸಿ."

"ನಾನು ದಿನದಿನಕ್ಕೆ ಸೊರಗುತಿದ್ದೇನೆಂದು ನಿನಗಾರು ಹೇಳಿದರು ?"

ವಿರಾಜಳು ದೃಷ್ಟಿ ಮೇಲೆತ್ತಿ ಕ್ಷಣಹೊತ್ತು ಪತಿಯನ್ನು ನೋಡುತ್ತ ಹೇಳಿ ದಳು—"ನೀವೂ ಚನ್ನಾಗಿ ನುಡಿದಿರಿ. ಯಾರಾದರೂ ತಿಳಿಹೇಳಿದಾಗ ಮಾತ್ರ ನನಗೆ ಗೊತ್ತಾಗುತ್ತದೆಂದು ನೀವು ನಿಜವಾಗಿಯೂ ಭಾವಿಸಿದ್ದೀರಾ ?"

ನೀಲಾಂಬರ ನಸುನಕ್ಕ. ತನ್ನ ಮಾತನ್ನು ತಿದ್ದಿಕೊಳ್ಳುತ್ತ—"ಹಾಗಲ್ಲವೆ ! ನನ್ನ ಮಾತಿನ ಅರ್ಥ ಹಾಗಲ್ಲ. ನೀನು ಒಂದು ಇದ್ದದ್ದನ್ನು ಇನ್ನೊಂದು ತಿಳಿದುಕೊಳ್ಳುವೆಯಲ್ಲ? ನನ್ನ ಪ್ರಶ್ನೆ ಇಷ್ಟೆ: ಈ ವಿಷಯವಾಗಿ ಯಾರಾದರೂ ನಿನಗೆ ಹೇಳಿದರೊ ಅಥವಾ ನೀನೇ ಹಾಗೆ ಭಾವಿಸಿದೆಯೊ ?"ಎಂದ.

ವಿರಾಜಳಿಗೆ ಈ ಪ್ರಶ್ನೆಗೆ ಉತ್ತರವೀಯುವ ಅಗತ್ಯ ಕಾಣಲಿಲ್ಲ. ಅವ-ಳೆಂದಳು: "ಪುಟ್ಟಿಯನ್ನು ಅಲ್ಲಿ ಕೊಡುವುದು ಬೇಡವೆಂದು ಎಷ್ಟು ಹೊಡೆದು ಕೊಂಡೆ ! ಆದರೆ ನನ್ನ ಮಾತನ್ನು ನೀವು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಕೈಯ ಲ್ಲಿದ್ದ ಹಣವೂ ಹೋಯಿತು, ಮೈಮೇಲಿನ ಆಭರಣಗಳೂ ಹೋದವು. ಇದ್ದ ಸಣ್ಣ ಜವುಗುಭೂಮಿ ಆ ಯದುವಿಗಾಗಿ ಲಿಲಾವಾಯಿತು. ಸಾಲದ್ದಕ್ಕೆ ಎರಡು ವರ್ಷಗಳಿಂದ ಬರ ಬೇರೆ. ಸ್ವಲ್ಪ ಹೇಳಿ ನೋಡೋಣ, ಪುಟ್ಟಿಯ ಗಂಡನ ಓದಿನ ವೆಚ್ಚದ ವ್ಯವಸ್ಥೆ ತಿಂಗಳು ತಿಂಗಳೂ ನೀವು ಹೇಗೆ ಮಾಡುವಿರಿ ಎಂದು ? ಹಣ ಕಳುಹಿಸುವಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ ಪುಟ್ಟಿ ಅನಿಸಿಕೊಳ್ಳಬೇಕಾದ ಮಾತು ಅಂಥಿಂಥವಲ್ಲ. ಅಲ್ಲದೆ ಆ ಹುಡುಗಿಯ ಸ್ವಭಾವವೂ ವಿಚಿತ್ರವೇ. ಸಣ್ಣ ಮಾತಿಗೂ ಅವಳ ಮನಸ್ಸು ನೊಂದುಕೊಳ್ಳುವುದು. ಆವಳಿಗೆ ತಾಳ್ಮೆ ಎಂಬುದೇ ಇಲ್ಲ. ಯಾರಾದರೂ ನಿಮ್ಮನ್ನು ಕೊಂಚ ನಿಂದಿಸಿದರೂ ಸಾಕು—ಅವಳು ಅದ ನ್ನೆಂದಿಗೂ ತಡೆದುಕೊಳ್ಳಲಾರಳು. ಇಂಥ ಪರಿಸ್ಥಿತಿಯಲ್ಲಿ ಏನು ಬಿಕ್ಕಟು ಉಂಟಾಗುವುದೋ ದೇವರು ಬಲ್ಲ ! ಈ ವಿಪತ್ತಿನಿಂದ ಅವನೇ ನಮ್ಮನ್ನು ಪಾರ ಮಾಡಬೇಕು. ಆದರೆ ನೀವೇಕೆ ಇಂಥ ಕೆಲಸ ಮಾಡಿದಿರಿ ?"

ನೀಲಾಂಬರ ಏನೂ ಉತ್ತರ ಕೊಡಲಿಲ್ಲ.

ವಿರಾಜಳೇ ಮಾತು ಮುಂದುವರಿಸಿದಳು: "ಅಲದೆ ಅವಳ ಕಲ್ಯಾಣ

ಕ್ಕಾಗಿ ನೀವು ಮಾಡಿದ ಈ ರಗಳೆಯಿಂದ ದಿನ ರಾತ್ರಿಯೆನ್ನದೆ ಚಿಂತೆಯಲ್ಲೇ ಮುಳುಗಿರುತ್ತೀರಿ. ಹೀಗೆ ನನ್ನ ಸರ್ವನಾಶ ಮಾಡುತ್ತಿದ್ದೀರಿ. ಕೂಡದು, ಅದೆಂದಿಗೂ ಕೂಡದು. ಹೀಗೆ ಚಿಂತೆ ಹಚ್ಚಿಕೊಂಡು ಕುಳಿತುಕೊಳ್ಳುವ ಬದಲು ನಾಲ್ಕೈದು ಕೂರಿಗೆ ಜಮೀನು ಮಾರಿ ಐದು ನೂರು ರೂಪಾಯಿ ಗಳನ್ನು ಕೂಡಿಸಿ ಪುಟ್ಟಿಯ ಮಾವನ ಮನೆಗೆ ಹೋಗಿರಿ. ಆ ರೂಪಾಯಿ ಅವರ ಕೈಯಲ್ಲಿತ್ತು ಅವರಿಗೆ ದಂಡಪತ್ ಪ್ರಣಾಮ ಸಲ್ಲಿಸಿ–'ಸ್ವಾಮಿ, ಈ ಹಣ ಪಡೆದು ನನ್ನನ್ನು ಮುಕ್ತನನ್ನಾಗಿ ಮಾಡಿ. ನಾನು ಬಡವ. ನನಗೆ ಹೆಚ್ಚಿಗೆ ಕೊಡುವ ಶಕ್ತಿ ಇಲ್ಲ' ಎಂದು ಸ್ಪಷ್ಟವಾಗಿ ಹೇಳಿಬಿಡಿ. ಅಂತೂ ಒಮ್ಮೆ ಋಣ ದಿಂದ ಮುಕ್ತರಾಗಿರಿ. ಮುಂದೆ ಅವಳ ಹಣೆಬರಹವಲ್ಲಿದ್ದಂತೆ ಆಗುವುದು."

ನೀಲಾಂಬರ ವಿರಾಜಳ ಈ ಮಾತಿಗೂ ಉತ್ತರಕೊಡಲಿಲ್ಲ. ವಿರಾಜಳು ನೀಲಾಂಬರನ ಮುಖವನ್ನು ದಿಟ್ಟಿಸುತ್ತ ನಿಂತಳು. ಸ್ವಲ್ಪ ಸಮಯದ ನಂತರ "ನೀವು ಹಾಗೆ ಮಾಡಬಲ್ಲಿರಾ?" ಎಂದಳು.

ನಿಡಿದಾದ ಉಸಿರ್ಗರೆದು ನೀಲಾಂಬರನೆಂದ–"ಏಕೆ ಮಾಡಲಾಗುವುದಿಲ್ಲ? ಆದರೆ ಇದ್ದುದನ್ನು ಮಾರಿಬಿಟ್ಟರೆ ಮುಂದೆ ನಮ್ಮ ಜೀವನಕ್ಕೇನು ಗತಿ?"

ವಿರಾಜಳೆಂದಳು–"ಜೀವನ ನಿರ್ವಾಹ ಹೇಗಾದರೂ ಆದೀತು. ಆಸ್ತಿ ಒತ್ತೆಹಾಕಿ ಸಾಲ ತೆಗೆಯುವುದರಿಂದ ಇಬ್ಬಗೆಯ ಹಾನಿ. ಬಡ್ಡಿ ಬೆಳೆಯುತ್ತ ಹೋಗುವುದಲ್ಲದೆ ಸಾಹುಕಾರರ ಕಾಟ ಬೇರೆ. ಆದುದರಿಂದ ಆಸ್ತಿಯನ್ನು ಒತ್ತೆ ಹಾಕುವ ಬದಲು, ಅದನ್ನು ಮಾರಿ ಒಮ್ಮೆ ಈ ತೊಂದರೆಗಳಿಂದ ಬಿಡುಗಡೆ ಯಾಗುವುದು ಲೇಸು. ಚಿಂತೆ ಕಟ್ಟಿಕೊಂಡು ಕೊರಗಲು ನಮಗೇನೂ ಮಕ್ಕಳು ಮರಿಗಳಿಲ್ಲ. ಇರುವುದು ನಾವಿಬ್ಬರೇ. ಇದ್ದುದನ್ನು ತಿಂದು ಹೇಗಾದರೂ ದಿನ ಕಳೆಯೋಣ. ಉದರ ನಿರ್ವಹಣೆಗೂ ಏನೂ ಉಳಿಯದೆ ಹೋದರೆ ನೀವು ಹೇಗೂ ಸಾಧುಗಳಾಗಿದ್ದೀರಿ, ನಾನೂ ಸನ್ಯಾಸಿನಿಯಾಗುತ್ತೇನೆ. ಆ ಮೇಲೆ ಕೆಲವು ದಿನ ಕಾಶಿ, ಕೆಲವು ದಿನ ವೃಂದಾವನ, ಉಳಿದ ದಿನ ಅನ್ಯ ತೀರ್ಥಕ್ಷೇತ್ರ ಗಳಲ್ಲಿ ಅಲೆದು ಜೀವಿಸೋಣ."

ನೀಲಾಂಬರ ಮುಗುಳುನಗುತ್ತ –"ನೀನು ತಾಳಹಾಕುವೆಯಾ ಹೇಗೆ?" ಎಂದು ಗೇಲಿಯಾಡಿದ.

"ಹಾಂ, ಹಾಕುವಾ, ಅದಕ್ಕೇನು? ಒಂದು ವೇಳೆ ಆಗದಿದ್ದರೆ ಹೆಗಲ ಮೇಲೆ ನಿಮ್ಮ ಜೋಳಿಗೆ ಹೊತ್ತುಕೊಂಡಾದರೂ ತಿರುಗುತ್ತೇನೆ. ನೀವು ಭಾವ

ವಶರಾಗಿ ಭಜನೆ ಮಾಡುವಾಗ ಪಶುಪಕ್ಷಿಗಳೂ ಮುಗ್ಧವಾಗಿ ನಿಲ್ಲುವುವು. ಎಂದ ಮೇಲೆ ನಮ್ಮಿಬ್ಬರ ಜೀವನದ ಚಿಂತೆಯೇಕೆ? ನಡೆಯಿರಿ. ಮನೆಗೆ ಹೋಗುವಾ. ಕತ್ತಲಲ್ಲಿ ನಿಮ್ಮ ಮುಖ ಸಹ ಚನ್ನಾಗಿ ಕಾಣಿಸುವುದಿಲ್ಲ."

ಮನೆಗೆ ಬಂದ ಕೂಡಲೇ ವಿರಾಜಳು ಗಂಡನ ಮುಖದ ಹತ್ತಿರವೇ ದೀಪ ವೆತ್ತಿ ಹಿಡಿದು ಕ್ಷಣ ಹೊತ್ತು ಸುಮ್ಮನೆ ನೋಡುತ್ತ ನಿಂತಳು. ಬಳಿಕ ತನ್ನ ನಗುವನ್ನು ಅಡಗಿಸಿ–" ಇಲ್ಲಮ್ಮ, ನನಗೆ ಧೈರ್ಯವಿಲ್ಲ. ಇಂಥ ಸಾಧುಗಳನ್ನು ಹತ್ತೆಂಟು ಸನ್ಯಾಸಿನಿಗಳೆದುರು ಬಿಡಲು ಜೀವವಿರುವ ವರೆಗೂ ನಾನು ಒಪ್ಪ ಲಾರೆ. ಅದಕ್ಕಿಂತ ಒಣಗಿ ಒಣಗಿ ಇಲ್ಲಿ ಸಾಯುವುದೇ ಎಷ್ಟೊ ಪಾಲು ಚನ್ನು" ಎಂದಳು.

ನೀಲಾಂಬರ ನಕ್ಕು ನುಡಿದ –"ಏನೇ, ಅಲ್ಲಿರುವುದು ಸನ್ಯಾಸಿನಿಯರಷ್ಟೇ ಅಲ್ಲ, ಸಾಧುಗಳೂ ಇರುತ್ತಾರೆ."

"ಸಾಧುಗಳೂ ಇರಬಹುದು. ಒಬ್ಬಿಬ್ಬರಲ್ಲ–ನೂರಾರು ಸಾವಿರಾರು ಇರ ಬಹುದು. ಅದರಿಂದ ನನಗೇನು ?"–ಎನ್ನುತ್ತ ವಿರಾಜಳು ಮತ್ತೆ ದೀಪವನ್ನು ಯಥಾಸ್ಥಾನದಲ್ಲಿರಿಸಿದಳು. ಬಳಿಕ ಗಂಡನ ಚರಣಗಳ ಬಳಿ ಕುಳಿತು ಗಂಭೀರ ವಾಣಿಯಿಂದ ಕೇಳಿದಳು–"ಅದಿರಲಿ, ಸತಿಗೂ ಕುಲಟೆಯರಿಗೂ ಏನು ಭೇದ ? ಈ ಲೋಕದಲ್ಲಿ ಸತಿಸಾಧ್ವಿಯರೂ ಇದ್ದಾರೆ, ಕುಲಟೆಕಲಂಕಿನಿಯರೂ ಇದ್ದಾರೆ. ಆದರೆ ನಾನು ಈ ವರೆಗೂ ಕುಲಟೆಯನ್ನಾಗಲಿ ಕಲಂಕಿನಿಯನ್ನಾಗಲಿ ಕಂಡುದಿಲ್ಲ. ಕುಲಟೆಯನ್ನು ನೋಡುವ ಇಚ್ಛೆ ನನಗೆ ಬಹಳ ಇದೆ. ಅವರು ಹೇಗಿರುತ್ತಾರೆ ?–ನಮ್ಮಂತೇ ಇರುವರೊ, ಅಥವಾ ಏನಾದರೂ ವ್ಯತ್ಯಾಸ ವಿದೆಯೊ ? –ಆ ಜನ ಏನು ಮಾಡುತ್ತಾರೆ?–ಇವೆಲ್ಲವನ್ನು ಕಂಣಾರೆ ನೋಡಲು ನನಗೆ ಬಹು ಆಸೆ. ನೀವು ಎಂದಾದರೂ ಇಂತಹ ಸ್ತ್ರೀಯರನ್ನು ನೋಡಿ ದ್ದಿರಾ ?"

"ಹಾಂ, ನೋಡಿದ್ದೇನೆ" ಎಂದ ನೀಲಾಂಬರ.

"ನೋಡಿದ್ದಿರಾ ? ನಾನು ನಿಮ್ಮ ಬಳಿ ಕುಳಿತು ಹರಟುವಂತೆ ಅವರೂ ಯಾವುದೇ ಗಂಡಸಿನ ಬಳಿ ಕುಳಿತು ಸ್ವಚ್ಛಂದವಾಗಿ ಹರಟೆಕೊಚ್ಚುವರೊ ?"

ನೀಲಾಂಬರ ನಗುತ್ತ ನುಡಿದ: "ಅದನ್ನು ನಾನು ಹೇಳಲಾರೆ. ಅಷ್ಟು ಹತ್ತಿರದಿಂದ ನಾನು ಅವರನ್ನು ನೋಡಿಲ್ಲ."

ವಿರಾಜಳು ಕ್ಷಣಹೊತ್ತು ಅನಿಮಿಷ ದೃಷ್ಟಿಯಿಂದ ಗಂಡನ ಮುಖವನ್ನು

ನಿಟ್ಟುಸಿರಿಟ್ಟಳು. ಆ ಮೇಲೆ ಅವಳ ಮನದಲ್ಲಿ ಯಾವ ವಿಚಾರ ಮೂಡಿತೊ? ಒಮ್ಮೆಲೆ ಅವಳ ದೇಹ ಗಡಗಡ ನಡುಗತೊಡಗಿತು. ದೇಹದ ಪ್ರತಿಯೊಂದು ಭಾಗದಲ್ಲೂ ಮುಳ್ಳು ಚುಚ್ಚುತ್ತಿರುವಂತೆ ಭಾಸವಾಯಿತು ಅವಳಿಗೆ.

ಹೆಂಡತಿಯ ಅವಸ್ಥೆ ನೋಡಿ–"ನಿನಗೇನಾಯಿತೆ?" ಎಂದ ನೀಲಾಂಬರ.

ವಿರಾಜಳೆಂದಳು–"ಅಬ್ಬಾ, ಅವರೆಂಥ ಜನಗಳಪ್ಪಾ? ರಾಮ ರಾಮ! ಸಂಜೆಯ ಹೊತ್ತಿಗೆ ಇದೆಂಥ ವಿಚಾರ ಮೂಡಿತು?–ಏನು, ಇನ್ನೂ ನಿಮ್ಮ ಸಂಧ್ಯಾವಂದನೆ ಆಗಿಲ್ಲವೆ?"

"ಇಲ್ಲ. ಈಗ ಮಾಡುತ್ತೇನೆ" ಎಂದ ನೀಲಾಂಬರ.

"ಆಗಲಿ, ಬೇಗ ಕೈ ಕಾಲು ತೊಳೆದುಕೊಂಡು ಬನ್ನಿ. ಆ ವರೆಗೆ ಇದೇ ಕೋಣೆಯಲ್ಲಿ ಮಣೆಹಾಕಿ ನಿಮ್ಮ ಸಂಧ್ಯಾವಂದನೆಗೆ ಅಣಿಮಾಡುತ್ತೇನೆ."

ಇದಾದ ೫-೬ ದಿನಗಳ ನಂತರ ಒಂದು ಸಂಗತಿ ನಡೆಯಿತು. ರಾತ್ರಿ ಹತ್ತು ಹೊಡೆದಿರಬಹುದು. ನೀಲಾಂಬರ ಹಾಸಿಗೆಯ ಮೇಲೆ ಒರಗಿ ಕಣ್ಣುಮುಚ್ಚಿ ಗುಡುಗುಡಿ ಸೇದುತ್ತಿದ್ದ. ವಿರಾಜಳು ಮನೆಗೆಲಸಗಳೆಲ್ಲವನ್ನೂ ಮುಗಿಸಿ ಮಲಗುವ ಸಿದ್ಧತೆಯಲ್ಲಿದ್ದಳು. ಮಲಗುವ ಮುನ್ನ ತಾಂಬೂಲ ಅಗೆಯೋಣವೆನ್ನಿಸಿತು ಅವಳಿಗೆ. ಅವಳು ನೆಲದ ಮೇಲೆ ಕುಳಿತು ವೀಳ್ಯ ಕಟ್ಟತೊಡಗಿದಳು. ಅಷ್ಟರಲ್ಲಿ–"ಹೌದೆ, ಶಾಸ್ತ್ರದೊಳಗಿನ ಸಂಗತಿಯೆಲ್ಲವೂ ನಿಜ ಸಂಗತಿಗಳೆ?" ಎಂದು ಒಮ್ಮೆಗೇ ಕೇಳಿದಳು.

ನೀಲಾಂಬರ ಬಾಯಿಯೊಳಗಿನ ಗುಡುಗುಡಿಯ ನಳಿಕೆ ಹೊರದೆಗೆದು ಮುಖ ಹೊರಳಿಸಿ– "ಶಾಸ್ತ್ರದೊಳಗಿನ ಸಂಗತಿಗಳು ನಿಜವಲ್ಲದೆ ಸುಳ್ಳು ಇರುವವೆ?" ಎಂದ.

"ಹಾಗಲ್ಲ. ಅವು ಸುಳ್ಳು ಸಂಗತಿಗಳೆಂದು ನನ್ನ ಅಭಿಪ್ರಾಯವಲ್ಲ. ನಾನು ಕೇಳುವುದು ಪ್ರಾಚೀನ ಕಾಲದಲ್ಲಿ ಫಲವಿತ್ತಂತೆ ಈಗಲೂ ಫಲ ಕೊಡುವವೆ?" ವಿರಾಜಳೆಂದಳು.

ಕ್ಷಣ ಹೊತ್ತು ಯೋಚಿಸಿ ನೀಲಾಂಬರನೆಂದ: "ವಿರಾಜ್, ನಾನೇನು ಪಂಡಿತನಲ್ಲ. ಎಲ್ಲ ವಿಷಯ ನನಗೂ ಗೊತ್ತಿಲ್ಲ. ಆದರೆ ನನ್ನ ಬುದ್ಧಿಗೆ ತಿಳಿದಂತೆ, ಯಾವುದು ಸತ್ಯವೊ ಅದು ಪ್ರಾಚೀನ ಕಾಲದಲ್ಲಿಯೂ ಸತ್ಯವಿತ್ತು, ಈ ಘೋರ ಕಲಿಯುಗದಲ್ಲಿಯೂ ಸತ್ಯವೇ."

ವಿರಾಜಳೆಂದಳು–"ಸಾವಿತ್ರಿ ಸತ್ಯವಾನರ ವಿಷಯವನ್ನೇ ತೆಗೆದುಕೊಳ್ಳಿ.

ಸಾವಿತ್ರಿ ಮೃತ ಪತಿಯನ್ನು ಯಮಪಾಶದಿಂದ ಬಿಡಿಸಿ ತಂದಳು. ಈ ಯುಗದಲ್ಲಿಯೂ ಇಂಥ ಕೆಲಸ ಹೆಂಗುಸರಿಂದ ಸಾಧ್ಯವೇ ?"

"ಅದೇಕೆ ಸಾಧ್ಯವಿಲ್ಲ? ಸಾವಿತ್ರಿಯಷ್ಟು ಸತೀ ಸಾಧ್ವಿಯಾದ ಸ್ತ್ರೀ ಖಂಡಿತವಾಗಿಯೂ ಅಂಥ ಕಾರ್ಯ ಮಾಡಬಹುದು."

"ಹಾಗಾದರೆ ನಾನೂ ಹಾಗೆ ಮಾಡಬಲ್ಲೆನೆ ?"

ನೀಲಾಂಬರನಗುತ್ತ–"ಏನು, ನೀನು ಸಾವಿತ್ರಿಯಷ್ಟು ಸತೀ ಸಾಧ್ವಿಯೆ? ಅವಳು ದೇವತಾಸ್ವರೂಪಳು" ಎಂದ.

ಎಲೆಯ ಡಬ್ಬಿಯನ್ನು ಮುಚ್ಚಿ ಒಂದು ಮೂಲೆಗೆ ಸರಿಸಿ ವಿರಾಜ ಕೇಂದಳು : "ಅವಳು ದೇವತಾ ಸ್ವರೂಪಳಿರಬಹುದು. ಸತೀತ್ವದಲ್ಲಿ ನಾನೂ ಅವಳಿಗಿಂತ ಯಾವ ವಿಧದಲ್ಲಿಯೂ ಕಡಿಮೆಯಲ್ಲ. ನನ್ನಂತೆ ಸತೀತ್ವದ ನಿಯಮ ಪಾಲಿಸುವಂಥ ಸ್ತ್ರೀಯರು ಈ ಜಗತ್ತಿನಲ್ಲಿ ಕಡಿಮೆ ಇರಲಿಕ್ಕಿಲ್ಲ. ಆದರೆ ಸತೀತ್ವದ ಮಹಿಮೆಯನ್ನು ನನಗಿಂತ ಹೆಚ್ಚು ಅರಿತ ಸ್ತ್ರೀಯರು ಈ ಲೋಕದಲ್ಲಿದ್ದಾರೆಂಬ ಮಾತನ್ನು ನಾನೆಂದಿಗೂ ಒಪ್ಪಲಾರೆ. ಸಾವಿತ್ರಿಯೆ ಇರಲಿ, ಯಾರೇ ಇರಲಿ, ಈ ವಿಷಯದಲ್ಲಿ ನಾನು ಯಾರಿಗೂ ಕಡಿಮೆಯಲ್ಲ."

ನೀಲಾಂಬರ ಈ ಮಾತಿಗೇನೂ ಉತ್ತರಿಸಲಿಲ್ಲ. ಅವನು ಮೌನದಿಂದ ಹೆಂಡತಿಯ ಮುಖವನ್ನೇ ನೋಡುತ್ತಿದ್ದ. ವಿರಾಜಳು ವೀಳ್ಯದೆಲೆ ಕಟ್ಟಲು ಕುಳಿತಾಗಲೆ ನೀಲಾಂಬರ ಅವಳೆದುರು ದೀಪ ತಂದಿಟ್ಟಿದ್ದ. ಅದರ ಬೆಳಕೆಲ್ಲವೂ ವಿರಾಜಳ ಮುಖದ ಮೇಲೆ ಬೀಳುತ್ತಿತ್ತು. ಅವಳ ಎರಡೂ ಕಂಣುಗಳಿಂದ ಅದ್ಭುತ ಜ್ಯೋತಿಯೊಂದು ಚಿಮ್ಮಿ ಬರುತ್ತಿರುವಂತೆ ಆ ಬೆಳಕಿನಲ್ಲಿ ನೀಲಾಂಬರನಿಗೆ ಸ್ಪಷ್ಟವಾಗಿ ಕಾಣಿಸಿತು.

"ಹಾಗಾದರೆ ನೀನೂ ಹಾಗೆ ಮಾಡಬಲ್ಲೆ" ಎಂದು ಅಳುಕುತ್ತ ಅಳುಕುತ್ತ ನೀಲಾಂಬರನೆಂದ.

ವಿರಾಜಳು ಎದ್ದು ಬಂದು ಬಾಗಿ ಗಂಡನ ಎರಡೂ ಪಾದಗಳಿಗೆ ಹಣೆಹಚ್ಚಿ ನಮಸ್ಕರಿಸಿ ಬಳಿಯಲ್ಲಿಯೆ ಕುಳಿತಳು. ಬಳಿಕ–"ನನಗೆ ತಿಳಿವಳಿಕೆ ಬಂದಂದಿನಿಂದ ಈ ವರೆಗೆ ನಿಮ್ಮ ಈ ಚರಣಗಳ ಸೇವೆಯಲ್ಲದೆ ಅನ್ಯ ಚರಣಗಳ ಕಡೆಗೆ ನಾನು ನೋಡಿಲ್ಲ. ಅದು ನಿಜವಿದ್ದುದಾದರೆ, ಹಾಗೂ ಅಕ್ಷರಶಃ ನಾನು ಪತಿವ್ರತೆಯಾಗಿದ್ದರೆ, ವಿಷ ಗಳಿಗೆಯಲ್ಲಿ ಸಾವಿತ್ರಿಯ ಹಾಗೆ ನಾನೂ ನಿಮ್ಮನ್ನು ಮರಳಿ ಪಡೆಯುವಂತೆಯೂ ಸುಮಂಗಲಿಯಾಗಿಯೆ ಚಿತೆಯನ್ನೇರುವಂತೆಯೂ ಅಂತ್ಯ

ಕಾಲದಲ್ಲಿ ಈ ನಿಮ್ಮ ಚರಣಗಳ ಮೇಲೆಯೇ ತಲೆಯಿಟ್ಟು ಪ್ರಾಣಬಿಡು ವಂತೆಯೂ ನನ್ನನ್ನು ಹರಿಸಿ" ಎಂದು ಪ್ರಾರ್ಥಿಸಿಕೊಂಡಳು.

ನೀಲಾಂಬರ ವ್ಯಸ್ತನಾಗಿ ಎದ್ದು ಕುಳಿತು–" ಇದೇನು ವಿರಾಜ್, ಇಂದು ನಿನಗೇನಾಗಿದೆ ?" ಎಂದು ಕೇಳಿದ. ವಿರಾಜಳ ನೇತ್ರಗಳೆರಡೂ ಸಜಲವಾಗಿ ದ್ದವು. ಆದರೂ ಅವಳ ತುಟಿಗಳಲ್ಲಿ ಅತ್ಯಂತ ಮೃದುಮಧುರವಾದ ನಗುಮಲ್ಲಿಗೆ ಅರಳಿತ್ತು. ಅವಳೆಂದಳು : "ಮತ್ತೆಂದಾದರೂ ಹೇಳುತ್ತೇನೆ, ಈಗ ಬೇಡ. ನನ್ನನ್ನಿಷ್ಟೇ ಹರಿಸಿ– ಸಾಯುವಾಗ ನಿಮ್ಮ ಈ ಚರಣಗಳ ಧೂಳಿ ಪಡೆಯಲು ಸಮರ್ಥಳಾಗಲಿ ಎಂದು; ನಿಮ್ಮ ತೊಡೆಯ ಮೇಲೆಯೇ ತಲೆಯಿಟ್ಟು ನಿಮ್ಮ ಮುಖವನ್ನೇ ನೋಡುತ್ತ ಪ್ರಾಣ ಬಿಡುವಂತಾಗಲಿ ಎಂದು."

ವಿರಾಜಳಿಗೆ ಹೆಚ್ಚು ಮಾತನಾಡಲಾಗಲಿಲ್ಲ. ಇಷ್ಟು ಹೇಳುವುದರಲ್ಲೇ ಅವಳ ಗಂಟಲು ಕಟ್ಟಿಕೊಂಡಿತು.

ಹೆಂಡತಿಯ ಅವಸ್ಥೆ ನೋಡಿ ನೀಲಾಂಬರ ಗಾಬರಿಯಾದ. ಅವಳನ್ನು ತನ್ನ ಕಡೆಗೆ ಸೆಳೆದುಕೊಂಡು ಅವನು–" ಇಂದು ನಿನಗೇನಾಗಿದೆ ವಿರಾಜ್ ? ಯಾರಾದರೂ ನಿನಗೇನಾದರೂ ಹೇಳಿದ್ದಾರೆಯೆ ?" ಎಂದು ಕೇಳಿದ. ವಿರಾ ಜಳು ಗಂಡನ ಮಡಿಲಲ್ಲಿ ಮುಖವಡಗಿಸಿ ಸುಮ್ಮನೆ ಅಳತೊಡಗಿದಳು. ಅವಳು ಯಾವ ಉತ್ತರವನ್ನೂ ಕೊಡಲಿಲ್ಲ.

ನೀಲಾಂಬರನು ಪುನಃ–" ನೀನು ಹಿಂದೆ ಹೀಗೆ ಮಾಡುತ್ತಿರಲಿಲ್ಲ ವಿರಾಜ್ ! ನಿನಗೇನಾಗಿದೆಯೆಂದು ಹೇಳುವುದಿಲ್ಲವೆ ?" ಎಂದು ಕೇಳಿದ.

ವಿರಾಜಳು ಗಂಡನ ತೊಡೆಯಲ್ಲೇ ಮುಖವಡಗಿಸಿ ಕಂಹೊರಸಿಕೊಂಡ ಳಲ್ಲದೆ ಮುಖವನ್ನು ಮೇಲೆತ್ತಲಿಲ್ಲ. ಅವಳು ಮೃದುತರಲಕಂಠದಿಂದ– "ಮತ್ತೆಂದಾದರೂ ತಿಳಿಸುತ್ತೇನೆ" ಎಂದಳು.

ನೀಲಾಂಬರನು ಮತ್ತೆ ಆಗ್ರಹ ಹಿಡಿಯಲಿಲ್ಲ. ಕುಳಿತಂತೆಯೆ ಕುಳಿತು ವಿರಾಜಳ ತಲೆಗೂದಲುಗಳ ಮಧ್ಯೆ ಬೆರಳನ್ನಾಡಿಸುತ್ತ ಮೌನವಾಗಿ ಹೆಂಡತಿಗೆ ಸಾಂತ್ವನವೀಯತೊಡಗಿದ. ತಂಗಿಯ ಮದುವೆಯಲ್ಲಿ ತನ್ನ ಶಕ್ತಿಮೀರಿ ವೆಚ್ಚ ಮಾಡಿದ್ದರಿಂದ ಅವನು ಸಾಲಗಾರನಾಗಿದ್ದ. ಇತ್ತೀಚೆ ಮನೆಯ ವೆಚ್ಚ ಮೊದ ಲಿನಷ್ಟು ಸರಾಗವಾಗಿ ಸಾಗುತ್ತಿದ್ದಿಲ್ಲ. ಇತ್ತ ಒಂದೇಸಮನಾಗಿ ಎರಡು ವರ್ಷ ಗಳ ಬರದಿಂದ ಗದ್ದೆಗಳೂ ಹಾಳಾದವಲ್ಲದೆ ಬೆಳೆಯೂ ಬರಲಿಲ್ಲ. ಈ ವರ್ಷ ಹೊತಿಗೆ ಸರಿಯಾಗಿ ಮಳೆ ಬಾರದರಿಂದ ಬಹಂಶ ಬೆಳೆಯೂ ಒಣಗಿ

ಹೋಗಿತ್ತು. ಕಣಜದೊಳಗಿನ ಧಾನ್ಯವೂ ಬರಿದಾಗಿತ್ತು. ಕೆರೆಯ ನೀರೂ ಒಣಗಿತ್ತು, ಮೀನೂ ಉಳಿಯಲಿಲ್ಲ. ಬಾಳೆಯ ತೋಟ ಒಣಗತೊಡಗಿತು. ಲಿಂಬೆ ತೋಟದಲ್ಲಿ ಕಾಯಿಗಳು ಮಿಡಿಯಾಗಿರುವಾಗಲೆ ಉದುರಿ ಬೀಳತೊಡಗಿದ್ದವು. ಇತ್ತ ಸಾಹುಕಾರರ ಒತ್ತಾಯ ಹೆಚ್ಚುತ್ತಲೇಹೋಯಿತು. ಸಾಲದ್ದಕ್ಕೆ ಪುಟ್ಟಿಯ ಮಾವ ಬೇರೆ ತೊಂದರೆ ಕೊಡತೊಡಗಿದ. ತನ್ನ ಮಗನ ಓದಿನ ವೆಚ್ಚಕ್ಕಾಗಿ ಹಲವು ಸಲ ಸಿಹಿಯಾಗಿ, ಬಹಳ ಸಲ ಕಹಿಯಾಗಿ ಮೇಲಿಂದ ಮೇಲೆ ಪತ್ರ ಬರೆಯುತ್ತಲಿದ್ದ. ಇವೆಲ್ಲವೂ ವಿರಾಜಳಿಗೆ ಗೊತ್ತಿರಲಿಲ್ಲ. ಅದೆಷ್ಟೋ ಅಪ್ರೀತಿಕರ ಸಂಗತಿಗಳನ್ನು ನೀಲಾಂಬರನು ವಿರಾಜಳಿಂದ ಅತಿ ಯತ್ನಪೂರ್ವಕ ಮುಚ್ಚಿಟ್ಟಿದ್ದ. ಈಗ ಅವನು ಉದ್ವಿಗ್ನನಾಗಿ–"ಬಹುಶಃ ಈ ಎಲ್ಲ ವಿಷಯಗಳನ್ನು ಯಾರಾದರೂ ವಿರಾಜಳಿಗೆ ತಿಳಿಸಿರಬಹುದು" ಎಂದು ಯೋಚಿಸತೊಡಗಿದ. ವಿರಾಜಳು ಒಮ್ಮಿಂದೊಮ್ಮೆಲೇ ಮುಖವನ್ನು ಮೇಲಕ್ಕೆತ್ತಿ ನಸುನಕ್ಕು–"ನಾನೊಂದು ಮಾತು ಕೇಳಬೇಕೆಂದಿದ್ದೇನೆ. ನೀವು ಸತ್ಯಸಂಗತಿ ಹೇಳುವಿರಾ ?" ಎಂದಳು.

ನೀಲಾಂಬರ ಮನದಲ್ಲಿಯೇ ಮತ್ತಿಷ್ಟು ಸಂಶಯಪೀಡಿತನಾಗಿ–"ಯಾವ ವಿಷಯ ?" ಎಂದ.

ವಿರಾಜಳು ಸುಂದರಿಯಾದ ಸ್ತ್ರೀ. ಆದರೆ ಅವಳ ಮುಗುಳುನಗೆ ಅವಳ ಸೌಂದರ್ಯಕ್ಕಿಂತಲೂ ಹೆಚ್ಚು ರಮಣೀಯವಾದುದು. ಆ ಸೌಂದರ್ಯವನ್ನು ತನ್ನ ತುಟಿಗಳ ಮೇಲೆ ಅರಳಿಸಿ ಗಂಡನ ಮುಖವನ್ನೇ ದಿಟ್ಟಿಸುತ್ತ–"ನಾನು ಕುರೂಪಿಯಂತೂ ಅಲ್ಲ ತಾನೆ ?" ಎಂದು ಕೇಳಿದಳು.

ನೀಲಾಂಬರ ತಲೆಯಲ್ಲಾಡಿಸುತ್ತ 'ಅಲ್ಲ' ಎಂದ.

"ಅಕಸ್ಮಾತ್ತಾಗಿ ನಾನು ಕುರೂಪಿಯಾದರೆ ನನ್ನನ್ನು ನೀವು ಇಷ್ಟೇ ಪ್ರೀತಿಯಿಂದ ಕಾಣುವಿರಾ ?"

ಈ ವಿಚಿತ್ರ ಪ್ರಶ್ನೆ ಕೇಳಿ ನೀಲಾಂಬರನಿಗೆ ಆಶ್ಚರ್ಯವಾಯಿತೇನೊ ನಿಜ. ಆದರೆ ಅವನ ಎದೆಯ ಮೇಲಿನ ಬಹು ದೊಡ್ಡ ಭಾರವೊಂದು ಜರ್ರನೇ ಇಳಿದಂತಾಯಿತು. ಅವನು ಪ್ರಸನ್ನತೆಯಿಂದ ನಕ್ಕು ನುಡಿದ: "ಚಿಕ್ಕಂದಿನಿಂದಲೇ ನಾನು ಒಬ್ಬ ಅನುಪಮ ದಿವ್ಯ ಸುಂದರಿಯನ್ನು ಪ್ರೀತಿಸುತ್ತ ಬಂದಿದ್ದೇನೆ. ನಾನು ಪ್ರೀತಿಸುವ ಆ ಸುಂದರಿ ಕುರೂಪಿಯಾದರೆ ಏನು ಮಾಡುವೆನೆಂದು ಈಗ ಹೇಗೆ ಹೇಳಲಿ ?"

ಬಾಹುದ್ವಯಗಳಿಂದ ಗಂಡನ ಕತ್ತನ್ನು ಸುತ್ತಿ ಮತ್ತಿಷ್ಟು ಹತ್ತಿರ ಎಳೆದು ಕೊಂಡು ವಿರಾಜಳೆಂದಳು–"ಹೇಗೆ ಹೇಳಲಿ ಎಂದರೆ? ಆದರೂ ನೀವು ನನ್ನನ್ನು ಇಷ್ಟೇ ಪ್ರೇಮದಿಂದ ಕಾಣುವಿರಲ್ಲವೆ?"

ಇದಕ್ಕೂ ನೀಲಾಂಬರ ಮೌನವಾಗಿ ದಿಟ್ಟಿಸುತ್ತ ಕುಳಿತ.

ವಿರಾಜಳೆಂದಳು: "ನೀವು ಬಹುಶಃ ಯೋಚಿಸುತ್ತಿರಬಹುದು– ನಾನು ಅದನ್ನು ಹೇಗೆ ಹೇಳಲಿ ಎಂದು, ಅಲ್ಲವೆ?"

ನೀಲಾಂಬರ ಸ್ವಲ್ಪ ತಡೆದು ಮೆಲ್ಲಮೆಲ್ಲನೆ ಹೇಳಿದ–"ಹುಂ, ಅದನ್ನೇ ಯೋಚಿಸುತ್ತಿದ್ದೆ. ಅದು ನಿನಗೆ ಹೇಗೆ ಗೊತ್ತಾಯಿತು?"

ವಿರಾಜಳು ಗಂಡನ ಕತ್ತನ್ನು ಬಿಟ್ಟು ಅವನ ತೊಡೆಯ ಒಂದು ಮಗ್ಗುಲಿಗೇ ತಲೆಯಾನಿಸಿ ಒರಗಿದಳು. ಬಳಿಕ ಅವನ ಮುಖವನ್ನೆ ನಿಟ್ಟಿಸುತ್ತ ಮೆಲುದನಿ ಯಿಂದ–"ನನ್ನ ಮನಸ್ಸೇ ಹಾಗೆ ಹೇಳುತ್ತಿದೆ. ನಾನು ನಿಮ್ಮನ್ನೆಷ್ಟು ಅರಿತಿರು ವೆನೋ ಅಷ್ಟು ಸ್ವತಃ ನೀವೇ ನಿಮ್ಮನ್ನು ಅರಿತಿಲ್ಲ. ಆದುದರಿಂದಲೆ ಬಲ್ಲೆ, ನಾನು ಒಂದು ವೇಳೆ ಕುರೂಪಿಯಾದರೂ ನೀವು ನನ್ನನ್ನು ಇದೇ ರೀತಿ ಪ್ರೀತಿ ಸುವಿರೆಂದು. ಅನ್ಯಾಯದ, ಪಾಪಕ್ಕೆ ಮೂಲವಾದ ಯಾವ ಕೆಲಸವನ್ನೂ ನೀವು ಮಾಡಲಾರಿರಿ. ಹೆಂಡತಿಯನ್ನು ಪ್ರೀತಿಸದಿರುವುದು ಅನ್ಯಾಯವೇ ಸರಿ. ಆದುದರಿಂದಲೆ ನಾನು ಕುರುಡಿ, ಇಲ್ಲವೆ ಕುಂಟಿಯಾದರೂ ನಿಮ್ಮಿಂದ ಇದೇ ತೆರನಾದ ಆದರ ಪಡೆಯುವೆನೆಂಬ ನಂಬಿಕೆಯಿದೆ ನನಗೆ."

ನೀಲಾಂಬರ ಈ ಮಾತಿಗೂ ಉತ್ತರವೀಯಲಿಲ್ಲ. ವಿರಾಜಳು ಗಂಡನ ಮಡಿಲಲ್ಲಿ ಮುಖ ಹುದುಗಿಸಿ ಅರೆ ಗಳಿಗೆ ಸ್ಥಿರಭಾವದಿಂದ ಬಿದ್ದಿದ್ದಳು. ಬಳಿಕ ಒಮ್ಮೆಗೇ ಅಂದಾಜಿನಿಂದ ಕೈಯನ್ನು ಮೇಲೆ ಚಾಚಿದಳು. ಅವಳ ಬೆರಳು ನೀಲಾಂಬರನ ಕಂಣುಗಳ ಮೇಲೇ ಬಿದ್ದವು. ಅವಳು ಚಕಿತಳಾಗಿ–"ನಿಮ್ಮ ಕಂಣಲ್ಲಿ ನೀರೇಕೆ?" ಎಂದು ಕೇಳಿದಳು.

ನೀಲಾಂಬರ ಬುದ್ಧಿಪೂರ್ವಕವಾಗಿ ಅವಳ ಕೈಯನ್ನು ದೂರ ಸರಿಸಿ ಅಳು ದನಿಯಿಂದ– "ನೀನು ಹೇಗೆ ಅರಿತೆ?" ಎಂದ.

ವಿರಾಜಳೆಂದಳು: "ಒಂಬತ್ತು ವರುಷದವಳಿದ್ದಾಗಲೆ ನಿಮ್ಮೊಂದಿಗೆ ನನ್ನ ಮದುವೆಯಾಗಿದೆಯೆಂಬುದನ್ನು ಮರೆತುಬಿಟ್ಟಿರಾ? ಆಗಲೇ ನಾನು ನಿಮ್ಮೊಂ- ದಿಗೆ ಆತ್ಮೀಯಳಾಗಿದ್ದೇನೆಂದು ನೀವು ಮರೆಯುವುದೇಕೆ? ನಾನೂ ನಿಮ್ಮ ಲ್ಲಿಯೆ ತಾದಾತ್ಮ್ಯಹೊಂದಿದ್ದೇನೆಂದು ನಿಮ್ಮ ದೇಹ ಮುಟ್ಟಿಕೊಂಡು ಅರಿತು

ಕೊಳ್ಳಲಾರಿರಾ?"

ನೀಲಾಂಬರ ಏನೂ ಉತ್ತರಿಸಲಿಲ್ಲ. ಕಣ್ಣು ಮುಚ್ಚಿಕೊಂಡು ಹಾಗೆಯೆ ಕುಳಿತಿದ್ದ ಆತನ ಕಣ್ಣುಗಳೆರಡರಿಂದಲೂ ಕಂಬನಿ ಹನಿ ಹನಿಯಾಗಿ ಉದುರ ತೊಡಗಿತು.

ವಿರಾಜಳು ಎದ್ದು ಕುಳಿತು ಸಾವಧಾನದಿಂದ ಗಂಡನ ಕಂಬನಿಗಳನ್ನು ತನ್ನ ಸೆರಗಿನಿಂದ ಒರಸಿ ಗಂಭೀರಸ್ವರದಿಂದ ಹೇಳಿದಳು–"ನೀವೇನೂ ಚಿಂತಿಸ ಬೇಡಿ. ಅತ್ತೆಯವರು ಸಾಯುವಾಗ ಪುಟ್ಟಿಯನ್ನು ನಿಮಗೆ ಒಪ್ಪಿಸಿ ಅವಳ ರಕ್ಷಣೆಯ ಭಾರವನ್ನು ನಿಮ್ಮ ಮೇಲೆ ಹಾಕಿಹೋಗಿದ್ದಾರೆ. ಅದೇ ಪುಟ್ಟಿಯ ಸುಖಕಲ್ಯಾಣಕ್ಕಾಗಿ ಯಾವುದು ಹಿತವೊ ಅದನ್ನೇ ನೀವು ಮಾಡಿದಿರಿ. ಇದ ರಿಂದ ಸಂತೋಷಗೊಂಡು ಅವರು ಸ್ವರ್ಗದಿಂದಲೆ ನಮ್ಮನ್ನು ಹರಸುವರು. ಈಗ ನೀವು ಶಾಂತಚಿತ್ತರಾಗಿರಿ. ಎಲ್ಲ ಸಾಲದಿಂದ ಒಮ್ಮೆ ಮುಕ್ತರಾಗಿರಿ. ಅದಕ್ಕಾಗಿ ಸರ್ವಸ್ವವೂ ಹೋದರೂ ಹೋಗಲಿ. ಸುಮ್ಮನೆ ಚಿಂತೆ ಕಟ್ಟಿಕೊಳ್ಳ ಬೇಡಿ."

ಕಣ್ಣುಗಳನ್ನೊರಸುತ್ತ ನೀಲಾಂಬರ ಅಳುದನಿಯಿಂದ ನುಡಿದ–"ವಿರಾಜ್, ನಾನೇನೇನು ಮಾಡಿದ್ದೇನೆಂದು ನೀನು ಅರಿಯೆ. ನಾನು ನಿನ್ನ...."

ವಿರಾಜಳು ನೀಲಾಂಬರನಿಗೆ ಹೆಚ್ಚಿಗೆ ಹೇಳಗೊಡಲಿಲ್ಲ. ಗಂಡನ ಬಾಯಿಯ ಮೇಲೆ ಕೈಯಿಟ್ಟು–"ಅದೆಲ್ಲ ನಾನು ಬಲ್ಲೆ. ಅಲ್ಲವೆ ನನಗೆ ಗೊತ್ತಿರಲಿ ಇಲ್ಲ ದಿರಲಿ, ನೀವು ಚಿಂತಿಸಿ ಚಿಂತಿಸಿ ನಿಮ್ಮ ಶರೀರ ಒಣಗಿಹೋಗುವಂತೆ ಮಾಡ ಗೊಡಲಾರೆ. ಆಗದು, ಅದಾಗದು. ಯಾರ ಋಣ ಎಷ್ಟೆಷ್ಟು ಇದೆಯೊ ಅದನ್ನೆಲ್ಲ ಪೈಗೆ ಪೈ ಸಹಿತ ಮುಟ್ಟಿಸಿ ನಿಶ್ಚಿಂತರಾಗಿರಿ. ಮುಂದೆ ದೇವರಿದ್ದಾನೆ, ತಾಯಿ ಭೂದೇವಿಯಿದ್ದಾಳೆ" ಎಂದಳು.

ನಿಡಿದಾದ ಉಸಿರೊಂದನ್ನೆಳೆದು ನೀಲಾಂಬರ ಸುಮ್ಮನೆ ಕುಳಿತ.

೪

ಮತ್ತಾರು ತಿಂಗಳೂ ಉರುಳಿದವು. ನೀಲಾಂಬರನ ತಮ್ಮನು ಹರಿ ಮತಿಯ ಮದುವೆಯ ಮೊದಲೇ ಆಸ್ತಿ ಪಾಲುಮಾಡಿಕೊಂಡ. ತಂಗಿಯ ಮದು

ನೆಯ ವೆಚ್ಚವು ಎಷ್ಟೂ ತನ್ನ ಮೇಲೆ ಬೀಳಬಾರದೆಂಬುದೇ ಅವನ ಒಳ ಉದ್ದೇಶ. ಪಾಲಾದ ನಂತರ ನೀಲಾಂಬರ ತನಗೆ ದೊರೆತ ಪಿತ್ರಾರ್ಜಿತ ಆಸ್ತಿಯಲ್ಲಿ ಸ್ವಲ್ಪ ಅಂಶವನ್ನು ಒತ್ತೆಹಾಕಿ ಹರಿಮತಿಯ ಮದುವೆಗಾಗಿ ಸಾಲ ತಂದಿದ್ದ. ಪೀತಾಂಬರನು ಒಂದು ಕಾಸಿನ ಸಹಾಯವನ್ನೂ ಮಾಡಲಿಲ್ಲ. ಅಳಿಯನ ಓದು-ವೆಚ್ಚವನ್ನು ನೀಲಾಂಬರನೆ ತೆರಬೇಕೆಂದು ವಿವಾಹ ನಿಶ್ಚಯಕಾಲದಲ್ಲಿ ಕರಾರಾಗಿತ್ತು. ಆದುದರಿಂದ ಹರಿಮತಿಯ ಮಾವನಿಗೆ ಪ್ರತಿ ತಿಂಗಳು ಹಣದ ಮೊತ್ತವೊಂದನ್ನು ಇಲ್ಲಿಂದ ಕಳಿಸಬೇಕಾಗುತಿತ್ತು. ಇತ್ತ ಮನೆಯ ವೆಚ್ಚವನ್ನೂ ನೋಡಿಕೊಳ್ಳಬೇಕಿತ್ತು. ಇದರಿಂದ ಅನೇಕ ತೊಡಕು ತೊಂದರೆಗಳುಂಟಾಗಿ ನೀಲಾಂಬರ ತನ್ನ ಹೊಲ ಮನೆಗಳನ್ನು ಸಾಹುಕಾರರಿಗೆ ಒತ್ತೆ ಹಾಕುವ ಸಂದರ್ಭ ಬರುತಿತ್ತು. ಈ ರೀತಿ ನೀಲಾಂಬರನ ಋಣಭಾರ ಹೆಚ್ಚುತ್ತಲೆ ಹೋಯಿತು. ಆದರೆ ಪಿತ್ರಾರ್ಜಿತ ಆಸ್ತಿಯೆಂಬ ಮಮತೆಯಿಂದ ಅದನ್ನು ಒಮ್ಮೆಲೆ ಮಾರಲು ಅವನ ಮನಸ್ಸು ಎಂದಿಗೂ ಒಡಂಬಡಲಿಲ್ಲ.

ಅಂದು ಸಂಜೆಯ ಸಮಯ. ಸಾಹುಕಾರ ಭೋಲಾನಾಥ ಮುಖರ್ಜಿಯು ನೀಲಾಂಬರನ ಮನೆಗೆ ಬಂದು, ಸಾಲವನ್ನೆಲ್ಲ ಬಗೆಹರಿಸಲೇಬೇಕೆಂದು ನೀಲಾಂಬರನಿಗೆ ಸ್ವಲ್ಪ ಕಟುವಾಗಿಯೆ ಒತ್ತಾಯ ಮಾಡಿದ. ಮರೆಯಲ್ಲಿ ನಿಂತು ವಿರಾಜಳು ಅವನ ಕಟುಮಾತುಗಳನ್ನೆಲ್ಲ ಆಲಿಸಿದಳು. ನೀಲಾಂಬರನು ಮನೆಯಲ್ಲಿ ಕಾಲಿಡುವುದೇ ತಡ, ಅವಳು ಅಡುಗೆಮನೆಯಿಂದ ಬಂದವಳೇ ಗಂಡನೆದುರು ಸುಮ್ಮನೆ ನಿಂತಳು. ಅವಳ ಆ ಕೃತಿಯಿಂದ ಅವಳ ಹೃದಯಕ್ಕೆ ನೋವಾಗುವಂತಹ ಯಾವುದಾದರೊಂದು ಘಟನೆ ನಡೆದಿರಲೇಬೇಕೆಂದು ನೀಲಾಂಬರನಿಗೆ ಖಚಿತವಾಯಿತು. ಕ್ಷೋಭೆ ಅಪಮಾನಗಳಿಂದ ವಿರಾಜಳ ಎದೆ ಭಗಭಗ ಉರಿಯುತ್ತಿತ್ತು. ಆದರೆ ಅವಳು ತನ್ನ ಭಾವವನ್ನು ಹೊರಗೆ ತೋರಗೊಡಲಿಲ್ಲ. ಗಂಡನಿಗೆ ಬೆರಳಿನಿಂದ ಮಂಚವನ್ನು ತೋರಿಸಿ ಪ್ರಶಾಂತ ಗಂಭೀರಸ್ವರದಿಂದ—“ ಇಲ್ಲಿ ಕುಳಿತುಕೊಳ್ಳಿ ” ಎಂದಳು.

ಹೆಂಡತಿಯ ಅಪೇಕ್ಷೆಯಂತೆ ನೀಲಾಂಬರ ಮಂಚದ ಮೇಲೆ ಕುಳಿತ. ವಿರಾಜಳು ಬಳಿಕ ಒಮ್ಮೆಗೇ ಅವನ ಚರಣಗಳ ಬಳಿ ಕುಳಿತುಕೊಂಡು, “ ಒಂದೇ, ನೀವೇ ನನ್ನನ್ನಾದರೂ ಋಣಮುಕ್ತಳನ್ನಾಗಿಮಾಡಿರಿ, ಇಲ್ಲದಿದ್ದರೆ ಆಣೆಮಾಡಿ ಹೇಳುತ್ತೇನೆ, ನಾನೇ........”

ನೀಲಾಂಬರನಿಗೆ ತಿಳಿದುಹೋಯಿತು— ವಿರಾಜಳಿಗೆ ಎಲ್ಲವೂ ಗೊತ್ತಾಗಿದೆ

ಯೆಂದು. ಅದರಿಂದ ಅವನು ಭಯಭೀತನಾಗಿ ಒಮ್ಮೆಲೇ ಬಾಗಿ ಅವಳ ಬಾಯಿ ಯನ್ನು ಮುಚ್ಚಿದ. ಬಳಿಕ ಅವಳನ್ನು ಜೋರಿನಿಂದ ತನ್ನೆಡೆಗೆ ಸೆಳೆದುಕೊಂಡು ಮಗ್ಗುಲಲ್ಲಿ ಕುಳ್ಳಿರಿಸುತ್ತ ಇನಿದನಿಯಿಂದ–“ ಛೀ ವಿರಾಜ್, ಇಂಥ ಸಣ್ಣ ಮಾತಿನಿಂದ ಇಷ್ಟೊಂದು ಧೃತಿಗೆಡಬೇಕೆ ? ” ಎಂದು ಸಂತೈಸತೊಡಗಿದ.

ಬಾಯ ಮೇಲಿನ ಗಂಡನ ಕೈಯನ್ನು ಬದಿಗೆ ಸರಿಸಿ ವಿರಾಜಳೆಂದಳು: “ ಮನುಷ್ಯ ಇದರಿಂದ ಅಲ್ಲದೆ ಇನ್ನೇತರಿಂದ ಧೃತಿಗೆಡಬೇಕೆಂಬುದನ್ನಾದರೂ ತುಸು ತಿಳಿಸಿ ನೋಡೋಣ ! ”

ಇದಕ್ಕೇನು ಉತ್ತರ ಕೊಡಬೇಕೆಂದು ಒಮ್ಮೆಗೇ ನೀಲಾಂಬರನಿಗೂ ಹೊಳೆ ಯಲಿಲ್ಲ. ಆದುದರಿಂದ ಅವನು ತುಟಿಬಿಚ್ಚುವ ಸಾಹಸ ಮಾಡಲಿಲ್ಲ.

“ ಸುಮ್ಮನೇಕೆ ಕುಳಿತಿರಿ ? ಉತ್ತರಕೊಡಿ. ”

“ ಉತ್ತರ ಕೊಡುವಷ್ಟು ಯೋಗ್ಯವಾದ ಯಾವ ಮಾತೂ ಇಲ್ಲ ವಿರಾಜ್. ಆದರೆ.... ? ” ಎಂದ ನೀಲಾಂಬರ.

ಗಂಡನ ಮಾತನ್ನು ಅರ್ಧಕ್ಕೇ ಹೊಡೆದುಹಾಕಿ ವಿರಾಜ್ ಏರುದನಿಯಿಂದ ಹೇಳಿದಳು: “ನಿಮ್ಮ ಆದರೆ ಗೀದರೆಯಿಂದ ಯಾವ ಕೆಲಸವೂ ಆಗದು. ನನ್ನ ಮನೆಬಾಗಿಲ ಬಳಿ ಜನ ನಿಮ್ಮನ್ನು ಅಪಮಾನ ಮಾಡಬೇಕು, ಹಾಗೂ ನಾನು ನಿಂತುಕೊಂಡು ನಿಮಗಾಡಿದ ಕಟುಮಾತುಗಳನ್ನು ತೆಪ್ಪಗೆ ಸಹಿಸಬೇಕು– ಇದೇ ಅಲ್ಲವೇ ನೀವು ಹೇಳುವುದು ? ಅಂಥ ವಿಚಾರಕ್ಕೆ ನಿಮ್ಮ ತಲೆಯಲ್ಲಿ ಎಡೆ ಕೊಡಬೇಡಿ. ಒಂದೇ, ಇದಕ್ಕೇನಾದರೂ ಉಪಾಯ ಹುಡುಕಿ ; ಇಲ್ಲದಿದ್ದರೆ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ”

ನೀಲಾಂಬರ ಬೆದರುಗಣ್ಣುಗಳಿಂದ–“ ಒಂದೇ ದಿನದಲ್ಲಿ ಏನು ಉಪಾಯ ಹುಡುಕಲಿ ವಿರಾಜ್? ”ಎಂದ.

“ ಒಳ್ಳೆಯ ಮಾತು ನಿಮ್ಮದು. ಒಂದು ದಿನದಲ್ಲಿ ಆಗದಿದ್ದವರು ಎರಡು ದಿನಗಳಲ್ಲಿ ಏನು ಉಪಾಯ ಹೂಡುವಿರಿ–ಅವನ್ನಾದರೂ ಅಷ್ಟು ಹೇಳಿ ? ”

ನೀಲಾಂಬರ ಮತ್ತೆ ಮೌನವನ್ನೇ ಸಾಧಿಸಿದ.

“ ಎಂದೆಂದಿಗೂ ಪೂರ್ಣವಾಗದಂತಹ ಆಸೆಯನ್ನು ತಳೆದು ನೀವೂ ಮೋಸಹೋಗಬೇಡಿ, ನನ್ನ ಸರ್ವನಾಶವನ್ನೂ ಮಾಡಬೇಡಿ. ದಿನಗಳೆದಂತೆ ನಿಮ್ಮ ಸಾಲ ಹೆಚ್ಚಾಗುತ್ತಲೇ ಹೋಗುವುದು. ನಿಮಗೆ ಹುಚ್ಚು! ಸೆರಗೊಡ್ಡಿ

ಬೇಡುತ್ತೇನೆ, ನಿಮ್ಮ ಕಾಲಿಗೆ ಬೀಳುತ್ತೇನೆ. ಈಗಲೆ ಏನಾದರೊಂದು ಉಪಾಯ ಹುಡುಕಿ."

ಈ ಮಾತು ಹೊರಬೀಳುತ್ತಿರುವಾಗಲೆ ಅಶ್ರುಭಾರದಿಂದ ಅವಳ ಕಂಠ ಕಟ್ಟಿಕೊಂಡಿತು. ತನ್ನ ಪತಿಗೆ ಭೋಲಾನಾಥ ಮುಖರ್ಜಿ ಆಡಿದ ಮಾತುಗಳು ಅವಳ ಎದೆಯನ್ನು ಬಾಣದಂತೆ ಇರಿಯತೊಡಗಿದ್ದವು. ನೀಲಾಂಬರ ತನ್ನ ಕೈಯಿಂದಲೆ ಹೆಂಡತಿಯ ಕಂಬನಿಗಳನ್ನೊರಸಿ ಮೆಲ್ಲಮೆಲ್ಲನೆ ಸಂತೈಸತೊಡಗಿದ: "ಕೈಕಾಲು ಕಳೆದುಕೊಳ್ಳುವುದರಿಂದೇನು ಲಾಭ ವಿರಾಜ್! ಒಂದೇ ವರ್ಷ ಬೆಳೆ ಚನ್ನಾಗಿ ಬಂದರೆ ಸಾಕು. ಹನ್ನೆರಡಾಣೆ ಭೂಮಿಯನ್ನು ಬಿಡಿಸಿಕೊಂಡು ಬರಬಹುದು. ಆದರೆ ಗಾಬರಿಗೊಂಡು ನಿನ್ನ ಮಾತಿನಂತೆ ಭೂಮಿಯೆಲ್ಲವನ್ನೂ ಈಗ ಮಾರಿಬಿಟ್ಟರೆ ಮುಂದೆ ಅದನ್ನು ಮರಳಿ ಪಡೆಯಲು ಸಾಧ್ಯವೆ? ಈ ಮಾತನ್ನಾದರೂ ಕೊಂಚ ಯೋಚಿಸು."

ವಿರಾಜಳು ತರಲಕಂಠದಿಂದ ಹೇಳಿದಳು: "ನಾನೂ ಚನ್ನಾಗಿಯೆ ಯೋಚಿಸಿದ್ದೇನೆ. ಮುಂದಿನ ವರ್ಷ ಹದಿನಾರಾಣೆ ಬೆಳೆ ಬಂದೇ ಬರುವುದೆಂಬುದಕ್ಕೆ ಏನು ಆಧಾರ? ಆದರೆ ಸಾಲದ ಬಡ್ಡಿ ಮಾತ್ರ ದಿನದಿನಕ್ಕೂ ಬೆಳೆವುದು ಖಂಡಿತ. ಜೊತೆಗೆ ಸಾಹುಕಾರರ ಕಟುಮಾತುಗಳನ್ನೂ ಸಹಿಸಬೇಕಾಗುವುದು. ನಾನು ಎಲ್ಲವನ್ನೂ ಸಹಿಸಬಲ್ಲೆ—ಆದರೆ ನಿಮ್ಮ ಅಪಮಾನವನ್ನು ಮಾತ್ರ ಸಹಿಸಲಾರೆ."

ನೀಲಾಂಬರ ಇದನ್ನು ಅರಿಯದವನೇನೂ ಅಲ್ಲ. ಆದುದರಿಂದ ಮರುತ್ತರ ನೀಯಲು ಅವನಿಂದಾಗಲಿಲ್ಲ.

ವಿರಾಜಳು ಪುನಃ ಹೇಳಿದಳು: "ನನಗೆ ಮಾತ್ರವೇ ದುಃಖವೆಂದು ಬಗೆದಿರಾ? ಹಗಲುರಾತ್ರಿಯೆನ್ನದೆ ಚಿಂತೆಕಟ್ಟಿಕೊಂಡು ನೀವೂ ಬಡವಾಗುತಿದ್ದೀರಿ. ನಿಮ್ಮ ಶರೀರ ಒಂದೇ ಸಮನಾಗಿ ಕಡ್ಡಿಯಾಗುತ್ತಿದೆ. ಇದನ್ನು ನಾನು ಕಂಣಾರೆ ನೋಡುತಿದ್ದೇನೆ. ನಿಮ್ಮ ಬಂಗಾರದಂತಹ ಈ ದೇಹ ನನ್ನ ಕಂಣೆದುರಿಗೇ ಕಪ್ಪಿಟ್ಟುಹೋಗುತ್ತಲಿದೆ. ಈ ಬೇಗೆ ಸಹಿಸುವಷ್ಟು ಶಕ್ತಿ ನನ್ನ ಶರೀರಕ್ಕಿದೆಯೆಂದು ನೀವು ನನ್ನ ಮೈಮುಟ್ಟಿ ಆಣೆಮಾಡಿ ಹೇಳುವಿರಾ? ಇನ್ನೆಷ್ಟು ದಿನ ಯೋಗೀಂದ್ರನ ಓದು-ವೆಚ್ಚ ನೋಡಿಕೊಳ್ಳಬೇಕು?"

"ಇನ್ನೊಂದು ವರ್ಷ ಪೂರ್ತಿ. ಒಂದು ವರ್ಷದ ಓದು ಮುಗಿಯಿತೆಂದರೆ ಅವನು ಡಾಕ್ಟರಾಗುತ್ತಾನೆ."

ಕ್ಷಣ ಹೊತ್ತು ಸ್ಥಿರಳಾಗಿ ಕುಳಿತು ವಿರಾಜಳು–" ಪುಟ್ಟಿಯನ್ನು ಸಾಕಿ ಸಲಹಿ ನೀವು ಅವಳನ್ನು ಇಷ್ಟು ದೊಡ್ಡವಳನ್ನಾಗಿ ಮಾಡಿದ್ದೀರಿ. ಅವಳು 'ರಾಣಿ'ಯಾದರೆ ಅದು ನಮಗೆ ಆನಂದವೇ. ಆದರೆ ಅವಳಿಗಾಗಿಯೇ ನಾವಿಷ್ಟು ಸಂಕಟಗಳನ್ನೆದುರಿಸಬೇಕಾದೀತೆಂದು ನನಗೆ ಮೊದಲೇ ತಿಳಿದಿದ್ದರೆ ನಾನು ಅವಳನ್ನೆತ್ತಿ ನದಿಯಲ್ಲಿ ಬೀಸಾಡುತ್ತಿದ್ದೆ. ನಮ್ಮ ಮೇಲೆ ಇಂತಹ ವಜ್ರ ದೇಟು ಬೀಳಲು ನಾನೆಂದಿಗೂ ಬಿಡುತ್ತಿರಲಿಲ್ಲ. ಹಾಯ್ ದೇವಾ! ಆ ಜನ ಶ್ರೀಮಂತರು. ಅವರಿಗೆ ತಾಪತ್ರಯ, ಕೊರತೆ ಯಾವುದೂ ಇಲ್ಲ. ಆದರೂ ಅವರು ಜಿಗುಳಿಯಂತೆ ನನ್ನ ಎದೆಯ ರಕ್ತವನ್ನು ಹೀರುತ್ತಿದ್ದಾರೆ. ಅವರಿಗೆ ಸ್ವಲ್ಪವೂ ದಯೆ ದಾಕ್ಷಿಣ್ಯವೆಂಬುದಿಲ್ಲವಲ್ಲ! ಅವರ ಕರುಣೆಯ ಸೆಲೆಯೇ ಬತ್ತಿ ಹೋಗಿರಬೇಕು" ಎಂದು ಉದ್ದವಾದ ಉಸಿರೆಳೆದು ಸ್ತಬ್ಧಳಾಗಿ ಕುಳಿತಳು. ಹೀಗೆ ನೀರವತೆಯಿಂದ ಬಹಳ ಹೊತ್ತು ಕುಳಿತು ಬಳಿಕ ಮುಖವೆತ್ತಿ ಮೆಲ್ಲಮೆಲ್ಲನೆ– "ನೋಡಿದಲ್ಲಿ ದಾರಿದ್ರ್ಯವೇ ದಾರಿದ್ರ್ಯ, ದುರ್ಭಿಕ್ಷೆಯೇ ದುರ್ಭಿಕ್ಷೆ. ಬಡವರಿಗೆ ಹೊಟ್ಟೆ ಹೊರೆಯಲು ಈಗಾಗಲೆ ದುಸ್ತರವೆನಿಸತೊಡಗಿದೆ. ಕೆಲವರು ಉಪವಾಸ ಮಾಡುತ್ತಿದ್ದರೆ ಹಲವರು ಸಿಕ್ಕಿದುದನ್ನೇ ತಿಂದು ಅರೆಹೊಟ್ಟೆಯಿಂದ ಹೇಗೋ ಜೀವ ಹಿಡಿದುಕೊಂಡಿದ್ದಾರೆ. ಇಂತಹ ಪ್ರತಿಕೂಲ ಸಮಯದಲ್ಲಿ ಪರ ಹುಡುಗನ ಭವಿಷ್ಯತ್ತಿನ ನಿರ್ಮಾಣದ ಭಾರವನ್ನು ನಾವೇಕೆ ಹೊರಬೇಕು? ಪುಟ್ಟಿಯ ಮಾವನಿಗೇನು ಕಡಿಮೆ ಆಗಿದೆ? ಅವನು ಬೇಕಾದಷ್ಟು ಭಾಗ್ಯವಂತ. ಮಗನ ಓದು-ವೆಚ್ಚ ನೋಡಲು ಅವನಿಗೇ ಬೇಡವಾದರೆ ಅದನ್ನು ನಾವೇಕೆ ಹೊರಬೇಕು? ಆದದ್ದು ಆಗಿಹೋಯಿತು. ಇನ್ನು ನೀವು ನಿಮ್ಮ ಸಾಲ ಹೆಚ್ಚಿಸಿಕೊಳ್ಳಬೇಡಿ" ಎಂದಳು.

ಅತಿ ಪ್ರಯಾಸದಿಂದ ತುಟಿಗಳ ಮೇಲೆ ಒಣನಗೆಯನ್ನು ತಂದುಕೊಂಡು ನೀಲಾಂಬರನೆಂದ: "ಅದೆಲ್ಲ ನಾನು ಬಲ್ಲೆ ವಿರಾಜ್. ಆದರೆ ಸಾಲಿಗ್ರಾಮ ಮೂರ್ತಿಯ ಎದುರು ನಾನು ಮಾಡಿದ ಪ್ರತಿಜ್ಞೆ ಇದೆಯಲ್ಲ, ಅದರ ಗತಿಯೇನು?"

ವಿರಾಜಳು ಸಿಡಿದು ನುಡಿದಳು: "ಅದರಿಂದ ಏನೂ ಆಗುವುದಿಲ್ಲ. ಸಾಲಿಗ್ರಾಮ ನಿಜವಾಗಿಯೂ ದೇವತೆಯಾಗಿದ್ದರೆ ಅದಕ್ಕೆ ಖಂಡಿತವಾಗಿ ನಮ್ಮ ಕಷ್ಟದ ಅರಿವಾಗುವುದು. ಅಲ್ಲದೆ ನಾನೂ ನಿಮ್ಮ ಅರ್ಧಾಂಗಿನಿಯಷ್ಟೆ? ಇದರಿಂದ ಪಾಪವೇನಾದರೂ ಬಂದರೆ ಅದನ್ನು ತಲೆಯ ಮೇಲೆ ಹೊತ್ತುಕೊಂಡು ಜನ,

ಜನ್ಮಾಂತರದ ವರೆಗೂ ನರಕದಲ್ಲೇ ಉರುಳಾಡುತ್ತೇನೆ. ಅದಕ್ಕಾಗಿ ನೀವು ಕೊಂಚವೂ ಹೆದರಬೇಡಿ. ಇನ್ನುಮುಂದೆ ಯಾರಿಂದಲೂ ನಾಲಪಡೆಯಬೇಡಿ."

ಧರ್ಮಜೀವಿಯಾದ ತನ್ನ ಗಂಡನ ದುಃಖಬವಣೆಗಳ ಲವಲೇಶವೂ ವಿರಾಜಳಿಂದ ಗೋಪ್ಯವಾಗಿರಲಿಲ್ಲ. ಆದರೆ ಈಗ ಅವಳಿಗೆ ಸಹಿಸಲಾಗಲಿಲ್ಲ. ನಿಜವಾಗಿಯೂ ಗಂಡನೇ ಅವಳ ಸರ್ವಸ್ವ. ತನ್ನ ಪತಿರಾಯನ ಮುಖವು ದಿನ ರಾತ್ರಿ ಚಿಂತಾಗ್ರಸ್ತವಾದ ಮೂಲಕ ಕಳೆಗುಂದಿರುತ್ತಿತ್ತು. ಅವನ ಬಾಡಿ ಮುದುಡಿದ ಮುಖವನ್ನು ನೋಡಿದೊಡನೆಯೆ ಅವಳ ಹೃದಯವು ಚೂರು ಚೂರಾಗುತ್ತಿತ್ತು. ಇಷ್ಟು ದಿನ ಅವಳು ಬಹು ಪ್ರಯತ್ನದಿಂದ ತನ್ನನ್ನು ಸಾವರಿಸಿಕೊಂಡು ಮಾತನಾಡುತ್ತಿದ್ದಳು. ಆದರೆ ಈಗ ಅವಳ ದುಃಖ ಕೋಡಿವರಿಯಿತು. ಅವಳು ತ್ವರೆಯಿಂದ ಗಂಡನ ತೊಡೆಯಲ್ಲಿ ಮುಖ ಮುಚ್ಚಿಕೊಂಡು ಒಂದೇ ಸಮನಾಗಿ ಅಳತೊಡಗಿದಳು.

ತನ್ನ ಎಡಗೈಯನ್ನು ವಿರಾಜಳ ತಲೆಯ ಮೇಲಿಟ್ಟು ನೀಲಾಂಬರ ನಿಶ್ಚಲನಾಗಿ ಕುಳಿತ. ವಿರಾಜಳು ಎಷ್ಟೋ ಹೊತ್ತಿನ ವರೆಗೆ ಅತ್ತ ಬಳಿಕ, ತನ್ನ ದುಸ್ಸಹ ದುಃಖದ ಆವೇಗ ಸ್ವಲ್ಪಕಡಮೆಯಾದಮೇಲೆ, ಮುಖವನ್ನು ಹಾಗೆಯೇ ಮುಚ್ಚಿಕೊಂಡು ಹೇಳಿದಳು: "ನನಗೆ ನೆನಪು ಇದ್ದಂತೆ, ಚಿಕ್ಕಂದಿನಿಂದ ಈ ವರೆಗೆ ನಿಮ್ಮ ಮುಖ ಇಷ್ಟು ಕಳೆಗುಂದಿದುದನ್ನಾಗಲಿ, ನಿಮ್ಮ ಮುಖದ ಮೇಲೆ ಇಂತಹ ವಿಷಾದದ ಚಿಹ್ನೆವನ್ನಾಗಲಿ ಒಮ್ಮೆಯೂ ಕಂಡಿರಲಿಲ್ಲ. ಆದರೆ ಇತ್ತೀಚೆ ನಿಮ್ಮ ಮುಖವನ್ನು ನೋಡಿದಾಗಲೆಲ್ಲ ನನ್ನೆದೆಯಲ್ಲಿ ಪರ್ವತ ಸಮಾನವಾದ ಬೆಂಕಿ ಉರಿದಂತಾಗುತ್ತದೆ. ನಿಮ್ಮ ಭವಿಷ್ಯತ್ತನ್ನು ಕುರಿತು ನೀವು ಚಿಂತಿಸದಿದ್ದರೆ ಬೇಡ. ಆದರೆ ನನ್ನ ಭವಿಷತ್ತಿನ ಜೀವನದ ವಿಷಯದಲ್ಲಿ ಕೊನೆಗೆ ಒಂದಾವರ್ತಿಯಾದರೂ ಯೋಚಿಸಿ. ನೀವು ನನ್ನನ್ನು ಬೀದಿಯ ಭಿಕಾರಿಯನ್ನಾಗಿ ಮಾಡಬೇಕೆನ್ನುವಿರಾ? ಆಗಿನ ನನ್ನ ಅಸಹಾಯಸ್ಥಿತಿಯನ್ನು ನಿಮ್ಮಿಂದ ಸಹಿಸಲು ಸಾಧ್ಯವೆ?"

ವಿರಾಜಳ ಈ ಮಾತಿಗೂ ನೀಲಾಂಬರ ಮೌನವನ್ನೆ ತಳೆದ. ಹೆಂಡತಿಯ ಮಾತಿನ ಕಡೆಗೆ ಗಮನವಿಲ್ಲವೆನ್ನುವಂತೆ ಅವನು ಅವಳ ಜಡೆಯನ್ನು ಅತ್ತಿತ್ತ ಅಲುಗಾಡಿಸುತ್ತಿದ್ದ. ಅಷ್ಟರಲ್ಲಿ ಕೋಣೆಯ ಹೊರಗಿನಿಂದಲೆ ಹಳೆಯ ಒಕ್ಕಲುಗಿತ್ತಿ ಸುಂದರಿಯು–"ತಾಯಿ, ಒಲೆಗೆ ಬೆಂಕಿ ಮಾಡಲೆ?" ಎಂದು ಕೂಗಿ ಕೇಳಿದಳು.

ವಿರಾಜಳು ಅಸ್ತವ್ಯಸ್ತಳಾಗಿ ತಟ್ಟನೆದ್ದು ಸೆರಗಿನಿಂದ ಮುಖ ಒರಸಿ ಕೊಂಡು ಕೋಣೆಯಿಂದ ಹೊರಬಂದಳು.

"ಒಲೆಗೆ ಉರಿಹಾಕಲೆ?" ಎಂದು ಸುಂದರಿ ಪುನಃ ಕೇಳಿದಳು.

ವಿರಾಜಳು ಅಸ್ಪಷ್ಟವಾಗಿ–"ಹೂಂ, ಹಾಕು. ನಿಮಗಾಗಿ ಏನಾದರೂ ಅಷ್ಟು ಬೇಯಿಸಿ ಇಡುತ್ತೇನೆ. ನಾನಿಂದು ಏನೂ ತೆಗೆದುಕೊಳ್ಳುವುದಿಲ್ಲ" ಎಂದಳು.

ಈ ಮಾತು ನೀಲಾಂಬರನ ಕಿವಿ ಸೇರಲೆಂಬ ಉದ್ದೇಶದಿಂದಲೇ ಒಕ್ಕಲು ಗಿತ್ತಿ ಏರುದನಿಯಿಂದ–"ಅಮ್ಮಯ್ಯ ಇದೇನು, ನೀವೂ ರಾತ್ರಿ ಊಟ ಒಮ್ಮೆಗೇ ನಿಲ್ಲಿಸಿಬಿಟ್ಟಿರಾ? ಉಪವಾಸ ಮಾಡಿ ಮಾಡಿ ಒಣಗಿ ಈಗಾಗಲೇ ಅರ್ಧ ಸೊರ ಗಿದ್ದೀರಿ" ಎಂದಳು.

ಒಕ್ಕಲುಗಿತ್ತಿಯ ಕೈಹಿಡಿದು ದರದರನೆ ಎಳೆಯುತ್ತ ವಿರಾಜಳು ಅವಳನ್ನು ಅಡುಗೆ ಮನೆಗೆ ಒಯ್ದಳು.

ಒಲೆಯ ಬೆಳಕು ವಿರಾಜಳ ಮುಖದ ಮೇಲೆ ಬೀಳುತ್ತಲಿತ್ತು. ಹತ್ತಿರವೇ ಕುಳಿತ ಸುಂದರಿಯು ಅವಳ ಮುಖವನ್ನೇ ಟಕಮಕನೆ ನೋಡುತ್ತಿದ್ದಳು. ಅವಳು ಒಮ್ಮೆಗೇ– "ನಿಜ ಹೇಳುತ್ತೇನೆ ತಾಯಿ, ನಿಮ್ಮಷ್ಟು ಸುಂದರಿಯಾದ ಸ್ತ್ರೀಯನ್ನು ನಾನೀವರೆಗೂ ಕಂಡುದಿಲ್ಲ. ನಿಮ್ಮಂತಹ ರೂಪ-ಲಾವುಣ್ಯವುಳ್ಳ ಸ್ತ್ರೀಯರು ರಾಜ-ಮಹಾರಾಜರ ಅರಮನೆಗಳಲ್ಲಿಯೂ ಕಾಣಿಸಿಗಲಿಕ್ಕಿಲ್ಲ" ಎಂದಳು.

ಒಕ್ಕಲುಗಿತ್ತಿಯೆಡೆಗೆ ಮುಖಹೊರಳಿಸಿ ವಿರಾಜಳು ನಸು ಅಪ್ರಸನ್ನತೆ ಯಿಂದ ಕೇಳಿದಳು: "ನೀನು ರಾಜ ಮಹಾರಾಜರ ಅರಮನೆಗಳ ಸ್ಥಿತಿಗತಿ ಗಳೆಲ್ಲವನ್ನೂ ಬಲ್ಲೆಯಾ?"

ಸುಂದರಿಯ ವಯಸ್ಸು ೩೫–೩೬ ಇರಬಹುದು. ತನ್ನ ಸೌಂದರ್ಯದ ವಿಷಯವಾಗಿ ಒಂದು ಕಾಲದಲ್ಲಿ ಅವಳೂ ಸಾಕಷ್ಟು ಹೆಸರು ಪಡೆದಿದ್ದಳು. ಅವಳ ಆ ಖ್ಯಾತಿ ಇಂದಿಗೂ ಪೂರ್ಣವಾಗಿ ಲುಪ್ತವಾಗಿರಲಿಲ್ಲ

ತನ್ನ ಮದುವೆ ಯಾವಾಗ ಆಯಿತು, ತಾನು ಯಾವಾಗ ವಿಧವೆಯಾದೆ, ಎಂಬುದು ಯಾವುದೂ ತನಗೆ ತಿಳಿಯದೆಂದು ಸುಂದರಿ ಯಾವಾಗಲೂ ಹೇಳು ತಿದ್ದಳು. ಆದರೆ ಸಧವೆಯ ಸೌಭಾಗ್ಯಗಳಿಂದ ಅವಳು ಪೂರ್ಣವಾಗಿ ವಂಚಿತ ಳಾಗಿರಲಿಲ್ಲ. ಅವಳ ಊರಾದ ಕೃಷ್ಣಾಪುರದಲ್ಲಿ ಈ ವಿಷಯ ಎಲ್ಲರ ಬಾಯಿ ಮಾತಾಗಿತ್ತು. ವಿರಾಜಳ ಪ್ರಶ್ನೆಗೆ ಅವಳು ನಗು ನಗುತ್ತಲೆ–"ರಾಜ-ಮಹಾ

ರಾಜರ ಅರಮನೆಗಳ ಸ್ಥಿತಿ-ಗತಿಯನ್ನು ಅಲ್ಪ ಸ್ವಲ್ಪ ಚನ್ನಾಗಿ ಬಲ್ಲೆ ತಾಯಿ! ಇಲ್ಲದಿದ್ದರೆ ಅಂದು ನಾನು ಅವನನ್ನು ಪೂರ್ಣವಾಗಿ ತಳ್ಳಿಬಿಡುತಿದ್ದೆ" ಎಂದಳು.

ಸುಂದರಿಯ ಈ ಮಾತಿನಿಂದ ವಿರಾಜಳು ಅನವಶ್ಯಕವಾಗಿ ಮುನಿದು ಕೊಂಡಳು: "ಮನಸ್ಸಿಗೆ ಬಂದಾಗಲೆಲ್ಲಾ ಇದೊಂದೇ ಮಾತನ್ನು ಏಕೆ ಆಡುವೆ ಸುಂದರೀ? ಅವರ ಮನಸ್ಸಿಗೆ ಬಂದುದನ್ನು ಅವರು ಹೇಳಿದ್ದಾರಾದೀತು. ಅದರ ಗೊಡವೆ ನಮಗೇಕೆ? ಅಲ್ಲದೆ ವ್ಯರ್ಥವಾಗಿ ಈ ಸಂದರ್ಭವನ್ನು ಬಾರಿ ಬಾರಿಗೂ ನನ್ನೆದುರು ಬಿಚ್ಚುವ ಅವಶ್ಯಕತೆಯೇನಿದೆ ನಿನಗೆ? ಇವರ ಸ್ವಭಾವ ವನ್ನು ನೀನು ಬಲ್ಲೆ. ಹೇಳಿ ಕೇಳಿ ಸಿಡುಕಿನ ಸ್ವಭಾವದವರು! ಈ ವಿಷಯ ಇವರ ಕಿವಿಗೆ ಹೋಗಿ ಇವರೇನಾದರೂ ಎಂದುಬಿಟ್ಟರೆ?"

ಸುಂದರಿ ಭಯಪುಲಕಿತಳಾಗಿ–"ಯಜಮಾನರ ಕಿವಿಗೆ ಏಕೆ ಬೀಳಬೇಕು ತಾಯಿ? ಇದೆಂತಹ ವಿಷಯಾಂತರ?" ಎಂದಳು.

"ಇದು ವಿಷಯಾಂತರವೆಂದು ನನಗೆ ತಿಳಿಸಲು ಬಂದೆಯಾ? ನನ್ನ ಮಾತಿಷ್ಟೆ: ಯಾವ ವಿಷಯ ಮುಗಿದುಹೋಗಿದೆಯೋ, ಯಾವುದರಲ್ಲಿ ಹುರುಳು ಉಳಿದಿಲ್ಲವೋ, ಅದನ್ನು ಚರ್ಚಿಸುವ ಅಗತ್ಯವೇನು?"

ಸುಂದರಿ ಸೆಡವಿನಿಂದ–"ಆ ವಿಷಯವೆಲ್ಲಿ ಮುಗಿದಿದೆ ತಾಯಿ? ಅದೆಲ್ಲ ಹುರುಳಿಲ್ಲದ ಮಾತೆಂದು ಭಾವಿಸಿದ್ದೀರಾ? ಆದರೆ ಅವರು ನಿನ್ನೆ ಸಹ ನನ್ನನ್ನು ಕರೆದುಕೊಂಡು ಹೋಗಿದ್ದರು. ಮತ್ತು...."

ವಿರಾಜಳ ಕೋಪ ಎಲ್ಲೆ ಮೀರಿತು. ಅವಳು–"ನೀನು ಅಲ್ಲಿ ಹೋದು ದಾದರೂ ಏಕೆ? ನಮ್ಮ ಅನ್ನ ಉಂಡು ನೀನು ಮತ್ತೊಬ್ಬರಲ್ಲಿ ಓಡಿಹೋಗು ವೆಯಾ? ಅಂದು ಅವರು ಕಲ್ಕತ್ತೆಗೆ ಹೋದರೆಂದು ನೀನೇ ಹೇಳಿರಲಿಲ್ಲವೆ?" ಎಂದು ಗರ್ಜಿಸಿದಳು.

ಸುಂದರಿಯೆಂದಳು: "ನಾನೇನೂ ಸುಳ್ಳಾಡಿರಲಿಲ್ಲ ತಾಯಿ! ಎರಡು ತಿಂಗಳ ಹಿಂದೆ ಹೋದವರು ಇದೀಗ ಮರಳಿ ಬಂದಿದ್ದಾರೆ. ನಾನು ಅವರಲ್ಲಿ ಹೋಗಿ ಬರುವ ವಿಷಯ ಕೇಳುವಿರಾ? ಅವರ ಆಳೇ ಇಲ್ಲಿಯ ವರೆಗೆ ಬಂದು ಕರೆದರೆ ನಾನು ಅದನ್ನು ಹೇಗೆ ಅಸಡ್ಡೆಮಾಡಲಿ? ಹೇಳಿ ಕೇಳಿ ಅವರು ಇಲ್ಲಿಯ ದೊಡ್ಡ ಜಮೀನುದಾರರು! ನಾನೋ ಶತ ದರಿದ್ರಳು. ಯಾವ ಧೈರ್ಯದಿಂದ ಅವರ ಆಜ್ಞೆ ಮೀರಲಿ?–ನೀವೇ ಹೇಳಿ."

ವಿರಾಜಳು ಕ್ಷಣ ಹೊತ್ತು ಸುಂದರಿಯನ್ನು ದಿಟ್ಟಿಸುತ್ತ ನಿಂತು–" ಅವರು ಇಲ್ಲಿಯ ಜಮೀನುದಾರರೇನು ? " ಎಂದಳು.

ಸುಂದರಿ ಮುಗುಳು ನಗುತ್ತ ನುಡಿದಳು–" ಹೌದು ತಾಯಿ, ಈ ಗ್ರಾಮವನ್ನು ಅವರೇ ಕೊಂಡಿದ್ದಾರೆ. ಈಗ ಇಲ್ಲಿಯೇ ಬಿಡಾರಮಾಡಿದ್ದಾರೆ. ನಿಜ ಹೇಳುತ್ತೇನೆ ತಾಯಿ, ಅವರು ಅಂತಿಂತಹ ಸಾಮಾನ್ಯ ಜನಗಳಲ್ಲ. ರಾಜನ ಮಕ್ಕಳು–ಅವರು ! ಅವರ ಮುಖ ಕಣ್ಣುಗಳಲ್ಲಿ . . . . "

ಸುಂದರಿಯ ಮಾತನ್ನು ಅರ್ಧಕ್ಕೇ ತಡೆದು ವಿರಾಜ್ ಒಮ್ಮೆಗೇ ಹೇಳಿದಳು–" ಇರಲಿ ಬಿಡು ಸುಂದರೀ, ಇರಲಿ. ನೀನು ಸುಮ್ಮನಿರು. ಈ ಎಲ್ಲ ಮಾತುಗಳನ್ನು ನಾನು ಕೇಳಬಯಸಿಲ್ಲ. ಇರಲಿ-ಅವರು ನಿನಗೇನು ಹೇಳಿದರು?"

ವಿರಾಜಳ ಈ ಮಾತಿನಿಂದ ಸುಂದರಿ ಮನದಲ್ಲಿಯೆ ಅಸಂತುಷ್ಟಳಾದಳು. ಆದರೆ ತನ್ನ ಭಾವವನ್ನು ಹತ್ತಿಕ್ಕಿ ಕೋಪದ ಸ್ವರದಿಂದ– "ಅವರೇನು ಹೇಳುವುದು ಸುಡುಗಾಡು ? ಅವರು ಕೇವಲ ನಿಮ್ಮ ವಿಷಯವನ್ನೇ ಕುರಿತು ಚರ್ಚಿಸುತ್ತಿದ್ದರು " ಎಂದಳು.

ವಿರಾಜಳು ಹೊಂಕರಿಸಿ ಸುಮ್ಮನಾದಳು.

ಈ ವಿಷಯವನ್ನು ಇಲ್ಲಿ ಸ್ವಲ್ಪ ಸ್ಪಷ್ಟವಾಗಿ ವಿವರಿಸುವುದು ಅವಶ್ಯ. ಎರಡು ವರ್ಷಗಳ ಹಿಂದೆ ಈ ಗ್ರಾಮ ಕಲ್ಕತ್ತೆಯ ಒಬ್ಬ ಭಾರೀ ಜಮೀನುದಾರನ ವಶಕ್ಕೆ ಬಂದಿತು. ಆ ಜಮೀನುದಾರನ ಚಿಕ್ಕ ಮಗ, ಅತಿ ಉದ್ಧಟ, ಲಂಪಟ. ಅವನನ್ನು ಸುಧಾರಿಸುವ ಯೋಚನೆಯಿಂದ ಅವನ ತಂದೆ ಅವನನ್ನು ಕಲ್ಕತ್ತೆಯ ವಾತಾವರಣದಿಂದ ತಪ್ಪಿಸಿ ಹತ್ತಿರದ ತನ್ನ ಯಾವುದಾದರೊಂದು ಗ್ರಾಮದಲ್ಲಿರಿಸಿ ಅಲ್ಲಿಯ ಜಮೀನುದಾರಿಕೆಯ ಹೊಣೆಯನ್ನು ಹೇರಿದರೆ ಅವನು ಆಡಳಿತದ ವಿಷಯವನ್ನು ಅರಿತುಕೊಳ್ಳಬಹುದೆಂದೂ ಜೊತೆಗೆ ಸ್ವಲ್ಪ ಸಂಯಮವೂ ಉಂಟಾಗಬಹುದೆಂದೂ ಭಾವಿಸಿದ. ತನ್ನ ಈ ಯೋಚನೆಯನ್ನು ಕಾರ್ಯರೂಪಕ್ಕೆ ತರುವುದಕ್ಕಾಗಿಯೇ ಆ ಜಮೀನುದಾರ ತನ್ನ ಈ ಕಿರಿಯ ಮಗ ರಾಜೇಂದ್ರಕುಮಾರನನ್ನು ಕಳೆದ ವರುಷ ಇಲ್ಲಿಗೆ ಕಳುಹಿಸಿದ್ದ. ಸಪ್ತಗ್ರಾಮದಲ್ಲಿ ಜಮೀನುದಾರನಿಗೆ ವಾಸಿಸಲು ಯೋಗ್ಯವಾದ ಬಂಗ್ಲೆಯಾಗಲಿ, ಮನೆಯಾಗಲಿ ಇರಲಿಲ್ಲ. ಆದುದರಿಂದ ಊರ ಹೊರಗೆ ಗ್ರ್ಯಾಂಡ್ ಟ್ರಂಕ್ ರೋಡಿನ ಬಳಿಯಲ್ಲಿರುವ ಮಾವಿನ ತೋಪಿನಲ್ಲಿ ಗುಡಾರ ಕಟ್ಟಿಸಿ ರಾಜೇಂದ್ರ ಅಲ್ಲಿ ವಾಸಿಸತೊಡಗಿದ.

ಸಪ್ತಗ್ರಾಮಕ್ಕೆ ಬಂದ ಬಳಿಕ ರಾಜೇಂದ್ರಕುಮಾರನಿಗೆ ಜಮೀನು ದಾರಿಕೆಯ ಆಡಳಿತವನ್ನು ಅರಿತುಕೊಳ್ಳುವ ಪ್ರವೃತ್ತಿ ಉಂಟಾಗಲೇ ಇಲ್ಲ. ಹಕ್ಕಿಯ ಬೇಟೆಯಲ್ಲಿ ಅವನಿಗೆ ಬಲು ಗೀಳು. ವಿಸ್ಕಿಯ ಫ್ಲಾಸ್ಕಿನ್ನು ಬೆನ್ನಿಗೆ ಇಳಿಬಿಟ್ಟು ಸಂಗಡ ಕೋವಿ, ನಾಲ್ಕಾರು ನಾಯಿಗಳನ್ನು ಕರೆದು ಕೊಂಡು ದಿನವೆಲ್ಲವೂ ನದಿಯ ತಟದಲ್ಲಿಯ ಕಾಡು-ವನಗಳನ್ನೆಲ್ಲ ಸುತ್ತಿ ಸುತ್ತಿ ಬೇಟೆಯಾಡುತಿದ್ದ. ಅವನು ಆರು ತಿಂಗಳ ಹಿಂದೆ ಬೇಟೆಯ ಗುಂಗಿನಲ್ಲಿ ಅಲೆಯುತ್ತ ಅಲೆಯುತ್ತ ಒಂದು ದಿನ ವಿರಾಜಳನ್ನು ನೋಡಿದ. ನೋಡಿ ದೊಡನೆಯೆ ಅವಳ ಮೇಲೆ ಮೋಹಗೊಂಡ.

ವಿರಾಜಳು ಘಟ್ಟದಲ್ಲಿ ಮೀಯುತ್ತಿದ್ದ ಸ್ಥಾನ ನಾಲ್ಕು ದಿಕ್ಕಿನಿಂದಲೂ ಹೆಮ್ಮರಗಳಿಂದ ಮುಚ್ಚಿದಂತಿತ್ತು. ಆದುದರಿಂದ ಅಲ್ಲಿ ಮೀಯುವಾಗ ದೂರ ದಲ್ಲಿರುವ ಜನರ ದೃಷ್ಟಿಗೆ ಬೀಳುವ ಸಂದರ್ಭವಿರಲಿಲ್ಲ. ಆ ಕಾರಣದಿಂದಲೆ ಅವಳು ನಿರ್ಭಯದಿಂದಲೂ ನಿಸ್ಸಂಕೋಚ ಚಿತ್ತದಿಂದಲೂ ಅಲ್ಲಿ ಮೀಯು ತ್ತಿದ್ದಳು. ಮೈದೊಳೆದ ಬಳಿಕ ಕೊಡವನ್ನು ತುಂಬಿಕೊಂಡು ಒದ್ದೆಬಟ್ಟೆಯನ್ನೆ ಸುತ್ತಿಕೊಂಡು ಮನೆಗೆ ತೆರಳಿದಳು. ಸಂಜೆಯಾಗಲು ಇನ್ನೂ ಸ್ವಲ್ಪ ಸಮಯ ವಿತ್ತು. ಅಸ್ತಾಚಲಶಿಖರದಲ್ಲಿ ವಿರಾಜಮಾನನಾದ ಸೂರ್ಯನ ಹೊಂಬಿಸಿಲು ವಿರಾಜಳ ಸೌಂದರ್ಯವನ್ನು ದ್ವಿಗುಣಿಸಿತ್ತು. ಅದೇ ಸಮಯಕ್ಕೆ ಸರಿಯಾಗಿ ಬೇಟೆಯನ್ನರಸುತ್ತ ರಾಜೇಂದ್ರಕುಮಾರನು ಅಲ್ಲಿಗೆ ಬಂದ. ನದೀತಟದ ಮೇಲೆ ಬಿದ್ದಿದ್ದ ಸಮಾಧಿಸ್ತೂಪದ ಮೇಲೆ ನಿಂತು ವಿರಾಜಳನ್ನು ಒಂದೇ ಸಮನೆ ನೋಡತೊಡಗಿದ. ಮಾನವರಲ್ಲಿ ಇಷ್ಟೊಂದು ಸೌಂದರ್ಯವಿದ್ದೀತೆಂಬ ನಂಬುಗೆಯೆ ಅವನಿಗೆ ಇರಲಿಲ್ಲ. ಅವನು ಕಲ್ಲುಮೂರ್ತಿಯಂತೆ ನಿರ್ನಿಮಿಷ ದೃಷ್ಟಿಯಿಂದ ಅವಳನ್ನೇ ನೋಡತೊಡಗಿದ. ವಿರಾಜಳು ಒಮ್ಮೆಗೇ ದೃಷ್ಟಿ ಮೇಲೆತ್ತಿದಾಗ ಅಪರಿಚಿತನೊಬ್ಬನು ತನ್ನನ್ನೇ ದಿಟ್ಟಿಸಿ ನೋಡುತ್ತಿದ್ದುದನ್ನು ಕಂಡು ಒದ್ದೆಬಟ್ಟೆಯಿಂದ ನಾವರಿಸಿ ಮೈಮುಚ್ಚಿಕೊಂಡು ತ್ವರೆಯಾಗಿ ಹೆಜ್ಜೆ ಯಿಡುತ್ತ ಹೋದಳು. ರಾಜೇಂದ್ರಕುಮಾರನು ಶಿಲಾಮೂರ್ತಿಯಂತೆ ನಿಂತು ದೃಷ್ಟಿಯೋಡುವ ಉದ್ದಕ್ಕೂ ಅವಳ ಅಪಾರ ರೂಪರಾಶಿಯನ್ನು ನೋಡಿ ನೋಡಿ ಸುಖಾನುಭವ ಹೊಂದುತ್ತಿದ್ದ. ಕೊನೆಗೆ ಅವಳು ಮರೆಯಾದಾಗ ಸ್ವಲ್ಪ ಹೊತ್ತು ಅಸ್ತವ್ಯಸ್ತನಾಗಿ ನಿಂತು ಧೀರಗತಿಯಿಂದ ಹೊರಟುಹೋದ. ದಾರಿ ಯಲ್ಲೆಲ್ಲ ಅವನಿಗೊಂದೇ ಯೋಚನೆ—ಇಂತಹ ಸುಂದರ ಸ್ತ್ರೀ ಇಲ್ಲಿಗೆ ಹೇಗೆ

ಬಂದಳು ಎಂಬುದು. ಇಲ್ಲಿ ಸುತ್ತಲೂ ಕಾಡೆಂಪರೆ ಕಾಡು. ಇದ್ದ ಹಳ್ಳಿಯೂ ತೀರ ಚಿಕ್ಕದು. ಪ್ರತಿಷ್ಠಿತ ಮನೆತನದವರು ಯಾರೂ ಇಲ್ಲಿ ವಾಸಿಸುವುದಿಲ್ಲ. ಇಂಥ ಸುಂದರ ಸ್ತ್ರೀಯನ್ನು ತನ್ನ ಜೀವಮಾನದಲ್ಲಿ ಅವನು ಒಮ್ಮೆಯೂ ಕಂಡಿಲ್ಲ. ಕೊನೆಗೆ ಬಹು ಸಂಶೋಧನೆ ಮಾಡಿ ಅವಳಾರೆಂಬುದನ್ನು ಆ ರಾತ್ರಿಯೇ ಅರಿತುಕೊಂಡ. ಅಂದಿನಿಂದ ಅವಳ ವಿಷಯವೇ ಅವನಿಗೆ ಜಪವಾಯಿತು. ಅವನ ತಲೆಯಲ್ಲಿ ಅನ್ಯ ವಿಷಯಗಳ ಚಿಂತನೆಗೆ ಎಡೆಯೇ ಉಳಿಯಲಿಲ್ಲ.

ಮನೆ ಸೇರಿದ ಕೂಡಲೆ ವಿರಾಜಳು ಸುಂದರಿಯನ್ನು ಕರೆದು—" ಸುಂದರೀ, ಹೆಂಗುಸರ ಸ್ನಾನಘಟ್ಟದ ಮೇಲೆ ಯಾವನೋ ಒಬ್ಬ ಗಂಡುಸು ನಿಂತಿದ್ದಾನೆ! ಅಲ್ಲಿಂದ ಹೊರಟುಹೋಗಬೇಕೆಂದೂ ಪುನಃ ಈ ತೋಟದಲ್ಲಿ ಕಾಲಿಡಕೂಡ ದೆಂದೂ ಅವನಿಗೆ ಹೇಳು " ಎಂದು ಆಜ್ಞಾಪಿಸಿದಳು.

ಸುಂದರಿಯು ವಿರಾಜಳ ಅಪ್ಪಣೆಯಂತೆ ಘಟ್ಟದೆಡೆ ತೆರಳಿದಳು. ಅಲ್ಲಿ ನಿಂತುಕೊಂಡಿದ್ದ ವ್ಯಕ್ತಿಗೆ, ಕೂಡಲೇ ಹೊರಟುಹೋಗಬೇಕೆಂದೂ ಪುನಃ ಅಲ್ಲಿ ಕಾಲಿಡಕೂಡದೆಂದೂ ಎಚ್ಚರಿಕೆ ಕೊಡಬಂದಿದ್ದಳು ಅವಳು. ಆದರೆ ಅಲ್ಲಿಗೆ ಬಂದು ಆ ವ್ಯಕ್ತಿಯನ್ನು ನೋಡಿದೊಡನೆಯೆ ಅವಾಕ್ಕಾಗಿ—" ಯಾರು ಬಾಬೂ ಸಾಹೇಬರೇನು ? " ಎಂದಳು.

ಅವನು ಸುಂದರಿಯ ಕಡೆಗೆ ನೋಡಿ—"ಏನು, ನೀನು ನನ್ನನ್ನು ಗುರುತಿಸ ಬಲ್ಲೆಯಾ ? " ಎಂದ. ಸುಂದರಿ—" ಹೌದು ದೊರೆ, ತಮ್ಮನ್ನು ಗುರುತಿಸದವ ರಾರು ? " ಎಂದು ಉತ್ತರವಿತ್ತಳು.

" ನಾನು ಎಲ್ಲಿ ಬಿಡಾರ ಮಾಡಿದ್ದೇನೆಂದು ಬಲ್ಲೆಯಾ ? "

" ಬಲ್ಲೆ. "

" ಹಾಗಾದರೆ ಸ್ವಲ್ಪ ಹೊತ್ತಿನ ಮಟ್ಟಿಗೆ ಅಲ್ಲಿಗೆ ಬರುವೆಯಾ ? " ಎಂದು ಕೇಳಿದ ರಾಜೇಂದ್ರ.

ಸುಂದರಿಯು ಲಜ್ಜಾಯುಕ್ತ ನಗೆ ನಕ್ಕು ಮುಖ ಕೆಳಗೆ ಮಾಡಿ ಮೆಲ್ಲ ಮೆಲ್ಲನೆ—" ಏನು ವಿಷಯ ದೊರೆಯೆ ? " ಎಂದು ಕೇಳಿದಳು

" ನಿನ್ನ ಬಳಿ ಕೆಲಸವುಂಟು. ಸ್ವಲ್ಪ ಬಂದು ಹೋಗು " ಎಂದು ಹೆಗಲ ಮೇಲೆ ಕೋವಿಯನ್ನಿಟ್ಟು ರಾಜೇಂದ್ರಕುಮಾರ ಅಲ್ಲಿಂದ ಹೊರಟುಹೋದ.

ಅಂದಿನಿಂದ ಸುಂದರಿಯು ಜನರ ಕಣ್ಣು ತಪ್ಪಿಸಿ ಏಕಾಂತ ಸಮಯದಲ್ಲಿ ಎಷ್ಟೋ ಸಲ ರಾಜೇಂದ್ರಕುಮಾರನ ಶಿಬಿರಕ್ಕೆ ಹೋಗಿದ್ದಳು. ಅವಳಿಗೆ ಮತ್ತು

ರಾಜೇಂದ್ರಕುಮಾರನಿಗೆ ಎಷ್ಟೋ ಮಾತುಕತೆಗಳೂ ಆಗಿದ್ದವು. ಆದರೆ ಅಲ್ಲಿ ಹೋಗಿ ಬಂದ ಬಳಿಕ ವಿರಾಜಳೊಂದಿಗೆ ಒಂದೆರಡು ಸಲ ಸಾಂಕೇತಿಕವಾಗಿ ಅಲ್ಲದೆ ತುಟಿಬಿಚ್ಚಿ ಮಾತನಾಡುವ ಸಾಹಸ ಸುಂದರಿಗೆ ಉಂಟಾಗಲೇ ಇಲ್ಲ. ಸುಂದರಿ ತಿಳಿವಳಿಕೆಯಿಲ್ಲದ ಹೆಂಗುಸಂತೂ ಅಲ್ಲವೇ ಅಲ್ಲ. ಅವಳು ವಿರಾಜಳ ಗುಣ-ಸ್ವಭಾವವನ್ನು ಚನ್ನಾಗಿ ಬಲ್ಲಳು. ಹೊರನೋಟದಿಂದ ವಿರಾಜಳು ಅದೆಷ್ಟು ಕೋಮಲವಾಗಿ, ಅದೆಷ್ಟು ಮಧುರವಾಗಿ ತೋರಿದರೂ, ಅವಳ ಪ್ರಕೃತಿ ಅತಿ ಉಗ್ರವಾದುದೂ ಕಲ್ಲಿನಷ್ಟು ಕಠೋರವಾದುದೂ ಎಂದು ಸುಂದರಿ ಬಲ್ಲಳು. ಅಲ್ಲದೆ ವಿರಾಜಳೊಂದಿಗೆ ಬಾಯಿ ಬಿಚ್ಚಿ ಮಾತನಾಡುವ ಇಚ್ಛೆಯುಂಟಾದರೂ, ಸುಂದರಿ ಅಷ್ಟು ಹೆದರುತ್ತಿದ್ದುದಕ್ಕೆ ಇನ್ನೊಂದು ಕಾರಣವಿತ್ತು. ವಿರಾಜಳು ಅತ್ಯಂತ ಸಾಹಸಿ. ಮನುಷ್ಯನೇ ಆಗಲಿ ಹಾವು ಚೇಳುಗಳೇ ಆಗಲಿ, ಅದೇಕೆ, ಭೂತ ಪ್ರೇತಗಳೇ ಆಗಲಿ, ಯಾರಿಗೂ ಅವಳು ಅಂಜಳು. ಅವಳಿಗೆ ಭೀತಿ ಯೆಂಬುದೇ ತಿಳಿಯದು.

ಒಲೆಯಲ್ಲಿದ್ದ ಕಟ್ಟಿಗೆಯನ್ನು ಚಾಚುತ್ತ ವಿರಾಜಳು ಮುಖ ಹೊರಳಿಸಿ ಸುಂದರಿಯ ಮುಖವನ್ನು ನಿಟ್ಟಿಸುತ್ತಲೇ ಹೇಳಿದಳು : "ಹೌದು ಸುಂದರೀ, ನೀನು ಅದೆಷ್ಟೋ ಸಲ ಅಲ್ಲಿಗೆ ಹೋಗಿಬಂದೆ. ಆ ಮನೆಯವರೊಂದಿಗೆ ಅದೆಷ್ಟೋ ಮಾತುಕತೆಯಾಡಿರಬಹುದು. ಆದರೆ ಆ ಕುರಿತು ನೀನು ನನಗೆ ಏನೂ ಹೇಳಲಿಲ್ಲವಲ್ಲ !"

ವಿರಾಜಳ ಈ ಮಾತು ಕೇಳಿ ಸುಂದರಿ ಅತ್ಯಂತ ಸೋಜಿಗಗೊಂಡಳು. ಯಜಮಾನಿಯ ಈ ಮಾತಿಗೇನು ಉತ್ತರ ಕೊಡಬೇಕೆಂದು ಅವಳಿಗೆ ಹೊಳೆ ಯಲೇ ಇಲ್ಲ. ಕ್ಷಣ ಹೊತ್ತು ಸಾವರಿಸಿಕೊಂಡು ಅವಳು–"ಏನು ತಾಯಿ, ನಾನಲ್ಲಿ ಹೋಗಿ ಬಹಳಷ್ಟು ಮಾತನಾಡಿಕೊಂಡು ಬಂದಿದ್ದೇನೆಂದು ನಿಮಗೆ ಯಾರು ಹೇಳಿದರು ?" ಎಂದು ಕೇಳಿದಳು.

"ನನಗೆ ಯಾರೂ ಹೇಳಿಲ್ಲ. ನಾನೇ ಬಲ್ಲೆ. ನನ್ನ ತಲೆಯ ಹಿಂಬದಿಗೆ ಮತ್ತೆರಡು ಕಣ್ಣು ಕಿವಿಗಳಿವೆ ಸುಂದರಿ ! ನಿನ್ನೆ ನಿನಗೆಷ್ಟು ಬಹುಮಾನ ದೊರೆ ಯಿತು ?–ಹತ್ತು ರೂಪಾಯಿಗಳಲ್ಲವೆ ?"

ಸುಂದರಿ ವಿಸ್ಮಯದಿಂದ ತಬ್ಬಿಬ್ಬಾದಳು. ಅವಳ ಮುಖ ಒಮ್ಮೆಲೆ ಮಲಿನ ವಾಯಿತು. ಒಲೆಯ ಆ ಮಸುಕು ಬೆಳಕಿನಲ್ಲಿಯೂ ಅದು ವಿರಾಜಳಿಗೆ ಕಾಣದೆ ಹೋಗಲಿಲ್ಲ. ಅಲ್ಲದೆ ತನ್ನ ಪ್ರಶ್ನೆಗೆ ಉತ್ತರವೀಯಲು ಸುಂದರಿಗೆ ಏನೂ

ಹೊಳೆಯಲೊಲ್ಲದೆಂದೂ ತಿಳಿಯದೆ ಇರಲಿಲ್ಲ.

ನಸು ಮುಗುಳುನಗೆ ಬೀರಿ ವಿರಾಜಳೇ ನುಡಿದಳು: "ಸುಂದರಿ, ನನ್ನೆದುರು ಬಾಯಿ ಬಿಚ್ಚುವ ಎದೆಗಾರಿಕೆ ನಿನಗಿಲ್ಲ. ನೀನು ಏಕೆ ಹಗಲೆಲ್ಲ ಅಲ್ಲಿಗೆ ಹೋಗಿ ಬರುತ್ತಲಿರುವೆ? ಈಗೇನೋ ನಿನಗೆ ಹಣ ಸಿಗುತ್ತಿದೆ. ಅದರಿಂದ ನಿನಗೆ ಸಂತೋಷವೂ ಆಗುತ್ತಿದೆ. ಆದರೆ ಮುಂದೆ, ಹಣ ಪಡೆದ ಬಗೆಗೆ ನೀನು ಆ ಸಿರಿವಂತನ ಕೋಪಕ್ಕೆ ಗುರಿಯಾಗುವುದು ಖಂಡಿತ. ಇರಲಿ, ನಾಳೆಯಿಂದ ನೀನು ಈ ಮನೆಯಲ್ಲಿ ಕಾಲಿಡತಕ್ಕದ್ದಲ್ಲ. ನೀನು ಮುಟ್ಟಿದ ನೀರಿನಿಂದ ಕೈ ಕಾಲು ತೊಳೆಯಲೂ ಜುಗುಪ್ಸೆಯಾಗುತ್ತಿದೆ ನನಗೆ. ಈ ಮೊದಲಿನ ನಿನ್ನ ಇತಿಹಾಸವೆಲ್ಲ ನನಗೆ ಗೊತ್ತಿರಲಿಲ್ಲ. ಈಗೆರಡು ದಿನಗಳ ಮೊದಲು ಎಲ್ಲವನ್ನೂ ಕೇಳಿ ತಿಳಿದುಕೊಂಡಿದ್ದೇನೆ. ಇರಲಿ, ಈಗ ಹೋಗಿ ನಿನ್ನ ಸೀರೆಯಂಚಿನಲ್ಲಿ ಕಟ್ಟಿದ ಆ ಹತ್ತು ರೂಪಾಯಿಯ ನೋಟನ್ನು ಅವನಿಗೆ ಹಿಂದಿರುಗಿ ಕೊಟ್ಟು ಬಾ. ಬಳಿಕ ಬಡವೆಯ ಮನೆಯಲ್ಲಿ ಹುಟ್ಟಿ ಬೆಳೆದಂತೆ ದುಡಿದು ನಿನ್ನ ಶೇಷ ಜೀವನವನ್ನು ಕಳೆ. ವಯಸ್ಸು ನಿನಗೆ ಅನುಕೂಲವಿದ್ದಾಗ ಮನದಣಿಯುವಂತೆ ಅದರ ಉಪಭೋಗ ಮಾಡಿಕೊಂಡೆ. ಈಗ ಆ ವಯಸ್ಸು ಮರಳಿ ಬಾರದು. ಆದರೆ ನಿನ್ನ ಜನ್ಮ ಹಾಳುಮಾಡಿಕೊಂಡಂತೆ ಪರರ ಜನ್ಮವನ್ನೂ ಹಾಳುಗೆಡಿಸುವ ಉದ್ಯೋಗಕ್ಕೆ ಮಾತ್ರ ತೊಡಗಬೇಡ."

ಏನೋ ಹೇಳಬೇಕೆಂದಿದ್ದಳು ಸುಂದರಿ. ಆದರೆ ಅವಳ ನಾಲಗೆಯೆ ಏಳಲಿಲ್ಲ.

ಅದನ್ನು ನೋಡಿ ವಿರಾಜಳೆಂದಳು: "ಸುಳ್ಳು ಮಾತು ಆಡುವುದರಿಂದೇನು ಲಾಭ ಸುಂದರಿ? ಈ ಎಲ್ಲ ಸಂಗತಿಗಳನ್ನು ನಾನು ಯಾರಿಗೂ ಹೇಳುವುದಿಲ್ಲ. ನಿನ್ನ ಸೆರಗಿನೊಳಗಿನ ನೋಟು ನಿನಗೆಲ್ಲಿ ದೊರೆಯಿತೆಂಬುದರ ವಿಷಯ ನನಗೆ ಗೊತ್ತಿರಲಿಲ್ಲ. ಆದರೆ ಈಗ ಅದೆಲ್ಲ ಸ್ಪಷ್ಟವಾಗಿ ತಿಳಿಯಿತು ನಾಳೆಯಿಂದ ನಮ್ಮ ಮನೆಗೆ ಕಾಲಿಡಬೇಡ. ಇಂದೇ ನಿನ್ನ ನಿರೋಪ ತೆಗೆದುಕೊಳ್ಳಬೇಕೆಂದು ನನ್ನ ಬಯಕೆ."

ಇದೆಂಥ ಅಸಂಭವನೀಯ ಮಾತು! ಸುಂದರಿ ಅತಿ ಕೌತುಕದಿಂದ ವಿಮೂಢಳಾಗಿ ನಿಂತಲ್ಲಿಯೇ ಕುಕ್ಕುರಿಸಿದಳು. ಈ ಮನೆಯ ಚಾಕರಿಯಿಂದ ಒಮ್ಮೆಗೇ ತಾನು ಬಿಡುಗಡೆಯಾಗಬಹುದೆಂಬ ವಿಷಯ ಅವಳಿಗೆ ಅಸಂಭವವಾಗಿ ತೋರಿತು. ಅದರ ನಿಜಾಂಶವನ್ನು ಸ್ವಾಭಾವಿಕವಾಗಿ ಒಪ್ಪಿಕೊಳ್ಳಲು ಅವಳ ಬುದ್ಧಿಯು ಸಿದ್ಧವಾಗಲಿಲ್ಲ. ಸುಂದರಿಯು ಬಹಳ ಹಳೆಯ ಒಕ್ಕಲುಗಿತ್ತಿ. ವಿರಾ-

ಜಳ ಮದುವೆಯಾದುದೂ ಅವಳೆದುರಿನಲ್ಲಿ; ಪುಟ್ಟ ಹುಟ್ಟಿದ್ದೂ ಅವಳೆದುರಿನಲ್ಲಿ. ನೀಲಾಂಬರನ ತಾಯಿ ಅವಳನ್ನು ತುಂಬಾ ಪ್ರೀತಿಸುತ್ತಿದ್ದಳು. ಅವಳು ತೀರ್ಥ ಯಾತ್ರೆಗೆ ಹೋಗುವಾಗಲೂ ಸುಂದರಿಯನ್ನು ಸಂಗಡ ಕರೆದೊಯ್ದಿದ್ದಳು. ಈ ರೀತಿ ಅನೇಕ ದಿನಗಳಿಂದ ಘನಿಷ್ಠತೆಯಿಂದಿದ್ದು ಒಂದು ರೀತಿಯಿಂದ ಆ ಕುಟುಂಬದಲ್ಲಿ ಒಂದಾಗಿದ್ದಳು ಸುಂದರಿ. ಇಂದು ಅದೇ ಸುಂದರಿ ಮನೆಯಲ್ಲಿ ಕಾಲಿಡಲೂ ವಿರಾಜಳಿಂದ ಪ್ರತಿಬಂಧಿಸಲ್ಪಟ್ಟಿದ್ದಾಳೆ. ಕ್ಷೋಭೆ ಅಭಿಮಾನ ಗಳು ಉಕ್ಕಿ, ಅವಳ ಕಂಠನಾಳದ ವರೆಗೂ ಬಂದವು. ಅವಳ ಎದೆಯ ಆಳದಿಂದ ಎಷ್ಟೋ ಮಾತು ನೂಕುನುಗ್ಗುತ್ತ ಕಂಠದ ವರೆಗೆ ಬಂದವು. ಅವುಗಳಿಂದ ತನ್ನ ನಿಷ್ಕಲಂಕತೆಯನ್ನು ಸ್ಥಾಪಿಸುವ ಯತ್ನ ಮಾಡಬೇಕೆಂದಳು ಅವಳು. ಅಲ್ಲದೆ ತನ್ನನ್ನು ಹೀಗೆ ಹೊರಗಟ್ಟುವುದು ಎಂದಿಗೂ ಯೋಗ್ಯವಲ್ಲವೆಂದು ಹೇಳ ಬೇಕೆಂದಳು. ಆದರೆ ಹೃದಯಗವ್ಹರದಿಂದ ಹೊರ ಹೊಮ್ಮಿದ ಈ ಎಲ್ಲ ಆವೇಗ, ಆತ್ಮಸಮರ್ಥನೆಗಾಗಿ ಅಂತರಾಳದಿಂದ ಹೊರಚಿಮ್ಮಿದ ಆ ಮಾತು, ಅವಳ ನಾಲ ಗೆಯ ವರೆಗೆ ಮಾತ್ರ ಬಂದವು. ಬಾಯಿಯಿಂದ ಮಾತ್ರ ಒಂದು ಶಬ್ದವೂ ಹೊರಬೀಳಲಿಲ್ಲ. ಅವಳು ವಿಹ್ವಲಳಾಗಿ ಯಜಮಾನಿಯ ಮುಖವನ್ನೇ ನಿಟ್ಟಿಸುತ್ತ ನಿಂತಳು.

ವಿರಾಜಳು ಸುಂದರಿಯ ಈ ಎಲ್ಲ ಸ್ಥಿತಿಯನ್ನೂ ಮನದಲ್ಲಿಯೆ ಅನುಭವಿಸಿ ದಳು. ಆದರೆ ಅವಳೂ ಮುಂದೆ ಮಾತನಾಡಲಿಲ್ಲ. ಮುಖ ಹೊರಳಿಸಿ ನೋಡಿ ದಾಗ ಒಲೆಯ ಮೇಲಿನ ಚಿಕ್ಕ ತಪ್ಪಲೆಯೊಳಗಿನ ನೀರು ಇಂಗಿಹೋಗಿತ್ತು. ಹತ್ತಿರವೇ ಹಿತ್ತಾಳೆಯ ಕೊಡ ತುಂಬಿದ್ದಿತು. ಅವಳು ಪಾತ್ರೆಗೆ ಆ ನೀರು ಸುರುವಿಕೊಳ್ಳುವುದರಲ್ಲಿದ್ದಳು. ಆದರೆ ಏನು ಯೋಚನೆ ಮೂಡಿತೊ, ಒಮ್ಮೆಲೆ ಪಾತ್ರೆಯನ್ನು ನೆಲದ ಮೇಲೆ ಇಟ್ಟುಬಿಟ್ಟು—“ಬೇಡ, ನೀನು ತಂದ ನೀರು ಮುಟ್ಟಿದರೂ ಅಮಂಗಲವಾಗುವುದು. ನೀನು ಹಣಪಡೆದದ್ದು ಅದೇ ಕೈಯಿಂದ” ಎಂದು ಜುಗುಪ್ಸೆ ತೋರಿದಳು.

ತಿರಸ್ಕಾರ ಬೆರೆತ ಈ ಮಾತುಗಳಿಗೆ ಸುಂದರಿ ಏನೂ ಉತ್ತರಕೊಡಲಿಲ್ಲ.

ವಿರಾಜಳು ಮತ್ತೊಂದು ದೀಪ ಹೊತ್ತಿಸಿ ಒಂದು ಕೈಯಲ್ಲಿ ದೀಪವನ್ನೂ ಮತ್ತೊಂದರಲ್ಲಿ ಕೊಡವನ್ನೂ ತೆಗೆದುಕೊಂಡಳು. ಬಳಿಕ ಆ ಗಾಢ ಕತ್ತಲಲ್ಲೇ ಮಾವಿನ ತೋಟದ ಮಧ್ಯ ಸಾಗಿದ ದಾರಿಯಿಂದ ನದಿಯೆಡೆಗೆ ಸಾಗಿದಳು. ವಿರಾಜಳು ಹೊರಟು ಹೋದ ಬಳಿಕ, ತಾನೂ ಅವಳ ಹಿಂದಿನಿಂದ ಹೋಗಲೇ

ಎಂದುಕೊಂಡಳು ಸುಂದರಿ ಮನದಲ್ಲಿ. ಆದರೆ ನದಿಯ ಸುತ್ತಲಿದ್ದ ಭಯಾನಕ ದೃಶ್ಯ ನೆನೆಸಿಕೊಂಡನೆಯೆ ಅವಳ ಸಾಹಸ ಕರಗತೊಡಗಿತು. ಆಗ ಅತ್ಯಂತ ಗಾಢಕತ್ತಲೆ. ಕೈಯನ್ನು ಅತ್ತಿತ್ತ ಸರಿಸುತ್ತ ತಡವರಿಸುತ್ತ ಹೋದರೂ ಏನೂ ತೋಚುವಂತಿದ್ದಿಲ್ಲ. ಅಲ್ಲದೆ, ಆ ಇಕ್ಕಟ್ಟಾದ ಮಾರ್ಗದಲ್ಲಿ ಪೊದೆ ಬಳ್ಳಿಗಳು ದಟ್ಟವಾಗಿ ಹಬ್ಬಿವೆ. ಸುತ್ತಲೂ ಭವ್ಯ ಪ್ರಾಕಾರ. ಅಲ್ಲದೆ, ಸಪ್ತಗ್ರಾಮದ ಎಷ್ಟೋ ಪರಿಚಿತರ ಅಪರಿಚಿತರ ಸಮಾಧಿಸೂಪ್ತಗಳೂ ಪ್ರಾಚೀನ ಕಾಲದ ಅರಳೆಯ ಮರಗಳೂ ಅಲ್ಲಿವೆ. ಈ ಎಲ್ಲ ಚಿತ್ರ, ಸುಂದರಿಯ ಮಾನಸಪಟಲದ ಮೇಲೆ ಮಿಂಚಿನ ವೇಗದಿಂದ ಮೂಡತೊಡಗಿ ಅವಳ ಶರೀರವೆಲ್ಲ ನವಿರೆದ್ದಿತು. ಅವಳು ಭಯವಿಹ್ವಲಳಾಗಿ ಅಡಿಯಿಂದ ಮುಡಿಯವರೆಗೆ ಥರಥರನೆ ನಡುಗುತ್ತಾ–'ಅಮ್ಮಯ್ಯಾ!' ಎಂದು ಚೀರಿ ಕುಸಿದು ಅಲ್ಲಿಯೇ ಕುಳಿತಳು.




ಎರಡು ದಿನಗಳಾದ ಬಳಿಕ-"ವಿರಾಜ್, ಇತ್ತೀಚೆ ಸುಂದರಿ ಕಾಣಿಸುತ್ತಿಲ್ಲವಲ್ಲ?" ಎಂದ ನೀಲಾಂಬರ.

"ಅವಳನ್ನು ಕೆಲಸದಿಂದ ತೆಗೆದೆ"–ವಿರಾಜಳು ಉತ್ತರವಿತ್ತಳು. ನೀಲಾಂಬರನಿಗೆ ಹೆಂಡತಿಯ ಮಾತಿನ ಮೇಲೆ ನಂಬಿಕೆಯಾಗಲಿಲ್ಲ. ಅವಳು ಹಾಸ್ಯ ಮಾಡುತ್ತಿದ್ದಾಳೆಂದು ಭಾವಿಸಿದ. "ಒಳ್ಳೆಯದನ್ನೇ ಮಾಡಿದೆ! ಸರಿ, ಅವಳಿಗೇನು ಆಗಿದೆ?" ಎಂದು ವಿಚಾರಿಸಿದ ನೀಲಾಂಬರ.

ವಿರಾಜಳೆಂದಳು: "ಅವಳಿಗೇನಾಗಬೇಕು? ನಾನು ನಿಜವಾಗಿಯೂ ಅವಳನ್ನು ಕೆಲಸದಿಂದ ಬಿಡುಗಡೆ ಮಾಡಿದೆ."

ನೀಲಾಂಬರನಿಗೆ ಈಗಲೂ ನಂಬುಗೆಯಾಗಲಿಲ್ಲ. ಅವನು ಅತ್ಯಂತ ಸೋಜಿಗಗೊಂಡು ಹೆಂಡತಿಯ ಮುಖವನ್ನೇ ನೋಡುತ್ತ–"ನೀನೇಕೆ ಅವಳನ್ನು ಕೆಲಸದಿಂದ ಬಿಡುಗಡೆ ಮಾಡಿದೆ? ಅವಳು ಮಹಾಪರಾಧ ಮಾಡಿದರೂ ಅವಳನ್ನು ಕೆಲಸದಿಂದ ತೆಗೆಯಕೂಡದು. ಅವಳೆಷ್ಟು ಹಳೆಯ ಒಕ್ಕಲುಗಿತ್ತಿಯೆಂದು ನಿನಗೆ ಗೊತ್ತಿಲ್ಲವೆ? ಹೊರದೂಡಲು ಅವಳೇನು ಅಂಥ ಅಪರಾಧ ಮಾಡಿದ್ದಾಳೆ?" ಎಂದು ಕೇಳಿದ.

" ಎಲ್ಲವನ್ನೂ ಪೂರ್ಣವಾಗಿ ಯೋಚಿಸಿದ ಮೇಲೆ, ಅವಳನ್ನು ಹೊರಗಟ್ಟು ವುದೇ ವಿಹಿತವೆಂದೆನಿಸಿತು ನನಗೆ. "

ನೀಲಾಂಬರ ಒಗರು ದನಿಯಿಂದ ಹೇಳಿದ–" ನಿನ್ನ ಆ ಕಾರಣವನ್ನೇ ನಾನೀಗ ತಿಳಿದುಕೊಳ್ಳಬಯಸಿದ್ದು. "

ವಿರಾಜಳಿಗೆ ಗಂಡನ ಮನೋಭಾವ ತಿಳಿಯಿತು. ಕ್ಷಣ ಹೊತ್ತು ಅವನ ಮುಖವನ್ನೇ ನಿಟ್ಟಿಸಿ–" ಅವಳಿಗೆ ಅಪ್ಪಣೆಕೊಡುವುದೇ ವಿಹಿತವೆಂದು ತೋರಿದ್ದ ರಿಂದ ಹಾಗೆ ಮಾಡಿದೆ. ಇಟ್ಟುಕೊಳ್ಳುವುದು ವಿಹಿತವೆಂದು ನಿಮಗೆನಿಸಿದರೆ ನೀವು ಅವಳನ್ನು ಕರೆತರಬಹುದು " ಎಂದು ಹೇಳಿ ಉತ್ತರದ ದಾರಿಕಾಯದೆ ಅವಳು ಅಡುಗೆಮನೆಗೆ ಹೋದಳು.

ವಿರಾಜಳಿಗೆ ಕೋಪ ಬಂದಿದೆಯೆಂದು ಅವನಿಗೆ ತಿಳಿಯಿತು. ಆದುದರಿಂದ ಆತನೂ ಹೆಚ್ಚಿನ ಗೋಜಿಗೆ ಹೋಗಲಿಲ್ಲ.

ನೀಲಾಂಬರ ಒಂದು ಗಂಟೆಯ ತರುವಾಯ ಹೊರಗಿನಿಂದ ಬಂದು ಅಡುಗೆಮನೆಯ ಹೊಸ್ತಿಲ ಬಳಿ ನಿಂತು ಮೃದುದನಿಯಿಂದ–" ಸುಂದರಿಯ ನ್ನಂತೂ ಹೊರದೂಡಿದ್ದಾಯಿತು. ಇನ್ನು ಮನೆಕೆಲಸಗಳನ್ನೆಲ್ಲ ಯಾರು ಮಾಡುವವರು ? " ಎಂದ

ಗಂಡನ ಈ ಮಾತು ಕೇಳಿ ವಿರಾಜಳು ಮುಖ ತಿರುವಿ ನಕ್ಕು–" ನೀವು ! " ಎಂದಳು.

ನೀಲಾಂಬರನೂ ನಕ್ಕು–" ಹಾಗಾದರೆ ಕೊಡು, ಈ ಮುಸುರೆ ಪಾತ್ರೆ ಗಳನ್ನು ತಿಕ್ಕಿ ತರುತ್ತೇನೆ " ಎಂದ.

ವಿರಾಜಳು ಕೈಯಲ್ಲಿದ್ದ ಚಿಮ್ಮಟಿಕೆಯನ್ನು ಝಣ್ ಎಂದು ಸದ್ದಾಗುವಂತೆ ಬದಿಗೆ ಎಸೆದು ಕೈತೊಳೆದುಕೊಂಡು ಗಂಡನ ಹತ್ತಿರ ಬಂದಳು. ಬಳಿಕ ಆತನ ಪಾದಧೂಳಿಯನ್ನು ಮಸ್ತಕದ ಮೇಲಿಟ್ಟುಕೊಂಡು–" ನೀವು ಇಲ್ಲಿಂದ ಹೋಗಿ. ನಿಮ್ಮೊಂದಿಗೆ ನಸುಚೇಷ್ಟೆಯೂ ಕಠಿಣವೇ. ಎಂತಹ ಅಸಹ್ಯ ಮಾತುಗಳನ್ನು ಆಡುವಿರಲ್ಲ ? ಅವುಗಳನ್ನು ಕೇಳುವುದರಿಂದಲೇ ಪಾಪ ತಟ್ಟುವುದು " ಎಂದಳು.

ಕುಂಠಿತನಾದ ನೀಲಾಂಬರ–" ಈ ಮಾತು ಕೇಳಿದ ಮಾತ್ರಕ್ಕೇ ಪಾಪ ತಟ್ಟುವುದೆ ? ನಿನಗೆ ಏತರಿಂದ ಪಾಪ ತಟ್ಟುವುದಿಲ್ಲವೆಂಬುದೇ ನನಗೆ ತಿಳಿಯು ಲೊಲ್ಲದಲ್ಲ ವಿರಾಜ್ ! " ಎಂದ

ವಿರಾಜಳೆಂದಳು : " ನಿಮಗೆ ತಿಳಿಯದೆ ಏನು ? ಹಾಗಿದ್ದರೆ, ಇಷ್ಟೊಂದು

ಕೆಲಸ-ಬೊಗಸೆಗಳು ಬಿದ್ದಿರುವಾಗಲೂ ಮುಸುರೆ ತಿಕ್ಕುವ ಮಾತನ್ನೇ ಆಡಿ ತೋರಿಸುತ್ತಿದ್ದಿಲ್ಲ. ತಡಮಾಡಬೇಡಿ. ಹೋಗಿ, ಬೇಗ ಸ್ನಾನಮಾಡಿಕೊಂಡು ಬನ್ನಿ. ಅಡುಗೆ ಸಿದ್ಧವಾಗಿದೆ. ”

ನೀಲಾಂಬರ ಹೊಸ್ತಿಲ ಬಳಿಯೆ ಕುಳಿತು–“ ನಿಜವಾಗಿ ಹೇಳು ವಿರಾಜ್, ಮನೆಗೆಲಸಗಳನ್ನು ಇನ್ನು ಯಾರು ಮಾಡುವರು ? ” ಎಂದು ಕೇಳಿದ.

ದೃಷ್ಟಿ ಮೇಲಕ್ಕೆತ್ತಿ ವಿರಾಜಳೆಂದಳು : “ ಈಗ ಇರುವ ಕೆಲಸವಾದರೂ ಏನು ? ಪುಟ್ಟಿಯೂ ಇಲ್ಲ; ಅವಳ ಚಿಕ್ಕಣ್ಣನೂ ಬೇರೆಯಾಗಿದ್ದಾರೆ. ಈಗ ಮನೆಯಲ್ಲಿ ಜನರಾದರೂ ಎಲ್ಲಿ, ಕೆಲಸ-ಬೊಗಸೆ ಹೆಚ್ಚಾಗಲು ? ಕೆಲಸವಿಲ್ಲವೆಂದೇ ನಾನು ಇಡಿಯ ದಿನವನ್ನು ವ್ಯರ್ಥ ಕಳೆಯುತ್ತಿದ್ದೇನೆ. ನೀವೇನೂ ಚಿಂತಿಸಬೇಡಿ. ನನ್ನ ಕೆಲಸಗಳೇನಾದರೂ ನಿಂತುಹೋದರೆ ನಿಮ್ಮನ್ನು ಕರೆಕಳಿಸುತ್ತೇನೆ. ”

“ ಆಗದು ವಿರಾಜ್, ಅದಾಗದು. ಆಳು ಹೋಳುಗಳು ಮಾಡುವಂತಹ ಕೆಲಸಗಳನ್ನು ನೀನು ಮಾಡುವುದಕ್ಕೆ ನಾನೆಂದಿಗೂ ಬಿಡಲಾರೆ. ಸುಂದರಿ ಯಾವ ಅಪರಾಧವನ್ನೂ ಮಾಡಿಲ್ಲ. ಕೇವಲ ಮನೆಯ ವೆಚ್ಚವನ್ನು ಉಳಿಸುವುದಕ್ಕಾಗಿ ನೀನು ಆವಳನ್ನು ಕೆಲಸದಿಂದ ತೆಗೆದೆ. ಹೌದೊ ಅಲ್ಲವೊ, ಹೇಳು ? ”

“ ಅಲ್ಲ. ಅದು ನಿಜವಲ್ಲ. ಅವಳು ನಿಜವಾಗಿಯೂ ಅಪರಾಧ ಮಾಡಿದ್ದಾಳೆ ” ಎಂದಳು ವಿರಾಜ್.

“ ಅದೇನು ಅಂಥ ಅಪರಾಧ ಮಾಡಿದ್ದು ? ”

“ ಅದನ್ನು ನಾನು ಹೇಳಲಾರೆ. ಸುಮ್ಮನೆ ಕುಳಿತುಕೊಳ್ಳಬೇಡಿ. ಹೋಗಿ, ಸ್ನಾನ ಮಾಡಿಕೊಂಡು ಬನ್ನಿ ” ಎಂದು ವಿರಾಜಳು ಅಡುಗೆಮನೆಯಿಂದ ಹೊರಗೆ ಹೋದಳು. ಸ್ವಲ್ಪ ಹೊತ್ತಿನ ಬಳಿಕ ಮರಳಿ ಬಂದಾಗ ನೀಲಾಂಬರ ಹಾಗೆಯೆ ಕುಳಿತುದನ್ನು ಕಂಡು–“ನೀವಿನ್ನೂ ಹೋಗಲೇ ಇಲ್ಲವೆ ? ಹೀಗೆಯೇ ಕುಳಿತುಬಿಟ್ಟಿರಾ ? ” ಎಂದಳು.

ನೀಲಾಂಬರ ಅತ್ಯಂತ ಕೋಮಲ ದನಿಯಿಂದ–“ ಹೋಗುತ್ತೇನೆ ವಿರಾಜ್, ಆದರೆ ಇದನ್ನು ನಾನು ತಾಳಲಾರೆ. ನೀನು ಇಂಥ ಕೀಳು ಕೆಲಸ ಮಾಡಲು ನಾನು ಹೇಗೆ ಒಪ್ಪಲಿ ? ” ಎಂದ.

ಗಂಡನ ಈ ಮಾತಿನಿಂದ ವಿರಾಜಳಿಗೆ ಸಂತೋಷವಾಗಲಿಲ್ಲ. ಕ್ಷಣ ಹೊತ್ತು ಅವನನ್ನು ನಿಟ್ಟಿಸಿ–“ ಹಾಗಾದರೆ ನೀವೇನು ಮಾಡಬೇಕೆನ್ನುವಿರಿ ? ” ಎಂದು ಕೇಳಿದಳು.

"ಸುಂದರಿ ಬೇಡವಾಗಿದ್ದರೆ ಬಿಟ್ಟುಬಿಡು. ಬೇರೆ ಯಾರನ್ನಾದರೂ ನೋಡು. ಅಲ್ಲದೆ ನೀನೊಬ್ಬಳೇ ಹೇಗೆ ಇರಬಲ್ಲೆ ?"

"ನಾನು ಹೇಗಾದರೂ ಇರಬೊಲ್ಲೆನೇಕೆ ? ಆದರೆ ನಾನಿನ್ನು ಯಾರನೂ ನೋಡಲಿಕ್ಕೆ ಹೋಗುವುದಿಲ್ಲ."

ನೀಲಾಂಬರ ಸ್ವಲ್ಪ ಗಡುಚಾಗಿ–"ಆಗದು, ಅದಾಗದು. ನಾನು ಸಂಸಾರಿ ಯಾಗಿರುವ ವರೆಗೆ ನನ್ನ ಮಾನಾಪಮಾನವನ್ನು ಲಕ್ಷಿಸಬೇಕು. ಈ ವಿಷಯ ಜನರಿಗೆ ತಿಳಿಯಿತೆಂದರೆ ಅವರೇನೆಂದಾರು ?" ಎಂದು ಗುಡುಗಿದ.

ವಿರಾಜ್ ಹತ್ತಿರವೇ ಬಂದು ಕುಳಿತು– "ನೀನೊಬ್ಬಳೇ ಹೇಗೆ ಇರುವೆ, ಮನೆ ಕೆಲಸಗಳನ್ನೆಲ್ಲ ನೀನೊಬ್ಬಳೇ ಹೇಗೆ ನೀಗಿಸುವೆ, ಎಂಬ ನಿಮ್ಮ ಮಾತು ಕೇವಲ ನೆವನ ಮಾತ್ರ. ಜನವೇನೆಂದಾರೋ ಎಂಬುದೇ ನಿಮ್ಮ ನಿಜವಾದ ಭೀತಿ" ಎಂದಳು.

ಹೆಂಡತಿಯ ಮಾತು ಕೇಳಿ ನೀಲಾಂಬರ ರೇಗಿದ. ಅದರೊಂದಿಗೆ ಅವನಿಗೆ ಅಷ್ಟೇ ಕೌತುಕವೂ ಆಯಿತು. ಅವನು ದೃಷ್ಟಿ ಮೇಲಕ್ಕೆತ್ತಿ–"ಇದು ನೆವನವೆ?" ಎಂದ.

ವಿರಾಜಳೆಂದಳು : "ಹೌದು, ನೆವನವೆ ಸರಿ. ಇತ್ತೀಚೆ ನನಗೆಲ್ಲ ತಿಳಿದಿದೆ. ನೀವು ನನ್ನ ಮುಖ ನೋಡುತ್ತಿದ್ದರೆ, ನನ್ನ ಸುಖ ದುಃಖದ ಬಗೆಗೆ ಕೊಂಚ ವಾದರೂ ಯೋಚಿಸುತ್ತಿದ್ದರೆ, ನನ್ನ ಒಂದು ಮಾತನ್ನಾದರೂ ಕೇಳುತ್ತಿದ್ದರೆ, ಇಂದು ನನಗೀ ಅವಸ್ಥೆ ಬರುತ್ತಿರಲಿಲ್ಲ."

ನೀಲಾಂಬರನೆಂದ–"ನಾನು ನಿನ್ನ ಒಂದು ಮಾತನ್ನೂ ಕೇಳುತ್ತಿಲ್ಲವೆ ?"

"ಇಲ್ಲ, ಒಂದು ಮಾತನ್ನೂ ಕೇಳುತ್ತಿಲ್ಲ" ಎಂದು ಸ್ವಲ್ಪ ಭಾರವಾಗಿಯೆ ನುಡಿದು ವಿರಾಜಳು ಮತ್ತಿಂತೆಂದಳು : "ನಾನೇನಾದರೂ ಹೇಳಿದರೆ ಅದನ್ನು ಒಂದಿಲ್ಲೊಂದು ನೆವದಿಂದ ನೀವು ತಳ್ಳಿಹಾಕುತ್ತೀರಿ. ನಿಮಗೆ ಯಾವಾಗಲೂ ಒಂದೇ ವಿಚಾರ–'ಈ ಕೆಲಸ ಮಾಡುವುದರಿಂದ ನನಗೆ ಪಾಪತಟ್ಟುವುದು. ಹೀಗೆ ಮಾಡುವುದರಿಂದ ಅಪಯಶಸ್ಸು ಉಂಟಾಗುವುದು, ಸಮಾಜದಲ್ಲಿ ನನಗೆ ಅಪಮಾನ ತಪ್ಪಿದ್ದಲ್ಲ' ಎಂದು. ಆದರೆ ನೀವು ಯಾವುದೇ ಕೆಲಸ ಕೈಕೊಳ್ಳುವ ಮೊದಲು, ಇದರಿಂದ ನಿಮ್ಮ ಹೆಂಡತಿಯ ಮನಸ್ಸಿನ ಮೇಲೆ ಯಾವ ಪರಿಣಾಮ ವಾದೀತೆಂದು ಒಂದು ಸಲವಾದರೂ ಯೋಚಿಸಿದ್ದೀರಾ ?"

"ಹಾಗಾದರೆ ನನ್ನ ನಿನ್ನ ಪಾಪ ಒಂದೇ ಅಲ್ಲವೆ ? ನನ್ನ ಹೆಸರಿಗೆ ಕಲಂಕ

ಬಂದರೆ ಅದು ನಿನಗೂ ಬಂದ ಹಾಗಲ್ಲವೆ? "

ಈಗ ವಿರಾಜಳಿಂದ ತನ್ನ ಕೋಪವನ್ನು ಹತ್ತಿಕ್ಕುವುದಾಗಲಿಲ್ಲ. "ನೋಡಿ, ಇವೆಲ್ಲ ಮಕ್ಕಳಿಗೆ ಹೇಳುವ ಮಾತು. ನಾನೇನು ಮಗುವಲ್ಲ, ಇಂಥ ಮಾತು ಕೇಳಿ ಮೋಸಹೋಗಲು"– ಎಂದಳು ಅವಳು.

ಹೀಗೆಂದು ವಿರಾಜಳು ಕ್ಷಣ ಹೊತ್ತು ಮೌನವಾಗಿ ಉಳಿದು ಪುನಃ ಹೇಳತೊಡಗಿದಳು : " ನಿಮ್ಮ ಮಿದುಳಿನಲ್ಲಿ ನಿಮ್ಮ ಸುಖ ದುಃಖಗಳ ವಿಚಾರ ಗಳಷ್ಟೇ ಮೂಡುತ್ತವಲ್ಲದೆ ಅನ್ಯರ ಸುಖ-ದುಃಖಗಳನ್ನು ಕುರಿತು ಯಾವ ಯೋಚನೆಯೂ ಬರುವುದಿಲ್ಲ. ಇಂದು ಅತಿ ದುಃಖದಿಂದ ಈ ಮಾತನ್ನು ನಿಮ್ಮೆದುರು ಆಡಿತೋರಿಸಬೇಕಾಗಿದೆ. ಆಳು-ಹೋಳುಗಳು ಮಾಡುವ ಕೆಲಸವನ್ನು ನಾನು ಮಾಡುತ್ತಿದ್ದೇನೆಂಬ ಕ್ಷುದ್ರ ಕಾರಣದಿಂದ ಇಂದು ನೀವು ಲಜ್ಜಾಪೀಡಿತ ರಾಗಿದ್ದೀರಿ. ಆದರೆ ನಾಳೆ ಆಕಸ್ಮಾತ್ತಾಗಿ ನಿಮಗೇನಾದರೂ ಆದರೆ–ಹಾಗಾಗ ದಿರಲಿ ಎಂದು ದೇವರಲ್ಲಿ ಪ್ರಾರ್ಥನೆ–ಮುಂದೆ ಒಂದು ತುತ್ತು ಅನ್ನಕ್ಕಾಗಿ ನಾನು ಪರರ ಮನೆಯಲ್ಲಿ ಆಳಾಗಿ ದುಡಿಯಬೇಕಾಗುವುದು. ಅಂತಹ ಕೀಳು ಕೆಲಸವನ್ನು ಮಾಡುವ ನನ್ನನ್ನು ನೀವು ನೋಡಲಿಕ್ಕೂ ಇರುವುದಿಲ್ಲ, ನನ್ನ ಗೋಳನ್ನು ಕಿವಿಯಿಂದ ಕೇಳಲಿಕ್ಕೂ ಇರುವುದಿಲ್ಲ. ಆದುದರಿಂದ ನೀವು ನಾಚಿ ಕೊಳ್ಳುವ ಅಗತ್ಯವಿಲ್ಲವೆಂಬುದು ನಿಜ. ಆದರೆ ಆ ಕುರಿತು ನೀವು ಮೊದಲೇ ಸ್ವಲ್ಪವೂ ಚಿಂತಿಸುವ ಅಗತ್ಯವಿಲ್ಲ–ಅಲ್ಲವೆ? "

ಈ ದೋಷಾರೋಪಣೆಗೆ ಒಮ್ಮೆಗೇ ಉತ್ತರವೀಯಲು ನೀಲಾಂಬರ ನಿಂದಾಗಲಿಲ್ಲ. ಸ್ವಲ್ಪ ಹೊತ್ತು ಮೌನದಿಂದ ನತಮುಖನಾಗಿದ್ದು ಕೋಮಲ ಸ್ವರದಿಂದ ಹೇಳಿದ : " ನೀನು ನಿಜವಾಗಿಯೂ ಈ ರೀತಿಯ ವಿಚಾರಕ್ಕೆಡೆ ಗೊಡುವೆಯೆಂದು ನಾನು ನಂಬಲಾರೆ. ದುಃಖ ಬವಣೆಗಳಿಂದ ನಿನಗೆ ಕೋಪ ಬಂದಿದೆ. ಆದುದರಿಂದಲೇ ನೀನು ಹೀಗೆ ಒಟಗುಟ್ಟುತ್ತಿರುವೆ. "

ವಿರಾಜಳೆಂದಳು : " ಸಂಕೋಚವಿಲ್ಲದೆ ನಾನೂ ಮೊದಲು ಹಾಗೆಯೆ ಭಾವಿಸಿದ್ದೆ. ಆದರೆ ಕಷ್ಟದಲ್ಲಿ ಸಿಲುಕದ ಮನುಷ್ಯನಿಗೆ ಕಷ್ಟದ ಪರಿಚಯ ವಾಗದು. ಹಾಗೆಯೆ, ಕಾಲ ಒದಗದೆ ಮನುಷ್ಯನ ಮೋಹ ಮಮತೆಗಳ ಪರಿ ಚಯವೂ ಆಗದು. ಇರಲಿ, ಈ ನಡುಮಧ್ಯಾಹ್ನ ಊಟದ ಹೊತ್ತಿಗೆ ನಿಮ್ಮೊಂದಿಗೆ ವಿವಾದ ಹೂಡುತ್ತ ಕುಳಿತಿರಲಾರೆ. ಹೋಗಿ, ಬೇಗ ಸ್ನಾನ ಮುಗಿಸಿಕೊಂಡು ಬನ್ನಿ. "

" ಆಗಲಿ "–ಎಂದು ನೀಲಾಂಬರ ಸುಮ್ಮನೆ ಕುಳಿತ.

ವಿರಾಜಳು ಮತ್ತೆ ಹೇಳತೊಡಗಿದಳು: " ನಮ್ಮ ಪುಟ್ಟಿಯ ಮದುವೆಯಾಗಿ ಎರಡು ವರ್ಷ ಸಂದವು. ಅದಕ್ಕೂ ಮೊದಲಿನಿಂದ ಪ್ರಾರಂಭಿಸಿ, ಈ ವರೆಗೆ ನಡೆದ ಎಲ್ಲ ಸಂಗತಿಗಳನ್ನು ನೆನೆದು ಒಂದು ನಿರ್ಧಾರಕ್ಕೆ ಬಂದಿದೇನೆ–ಅಂದಿನಿಂದ ನೀವು ನನ್ನ ಒಂದು ಮಾತನ್ನೂ ಕೇಳಲಿಲ್ಲ. ನಾನೇನಾದರೂ ಹೇಳಲು ಹೋದಾಗ ನಡುವೆಯೆ ನನ್ನ ಮಾತನ್ನು ಹಾರಿಸಿ ನಿಮ್ಮ ಮನಬಂದಂತೆ ನಡೆದಿದ್ದೀರಿ. ಮನುಷ್ಯನೆಂದ ಮೇಲೆ ಆಳು-ಹೋಳುಗಳ ಒಂದೆರಡು ಮಾತುಗಳನ್ನೂ ಲಕ್ಷಿಸಬೇಕಾಗುವುದು. ಆದರೆ ನೀವು ಮಾತ್ರ ಎಂದಿಗೂ ನನ್ನ ಒಂದು ಮಾತನ್ನೂ ಲೆಕ್ಕಿಸಿಲ್ಲ. "

ನೀಲಾಂಬರ ಮಾತನಾಡಲು ಬಾಯಿ ತೆರೆದಿದ್ದ. ಅಷ್ಟರಲ್ಲಿ ವಿರಾಜಳು ಅವನನ್ನು ಅಡ್ಡಯಿಸಿ ಪುನಃ ಹೇಳತೊಡಗಿದಳು: " ಇಲ್ಲ, ಇಲ್ಲ. ನಾನೆಂದಿಗೂ ನಿಮ್ಮೊಂದಿಗೆ ವಾದ ಹೂಡುವುದಿಲ್ಲ. ನಿಮ್ಮೊಂದಿಗೆ ವಾದ ವಿವಾದ ಮಾಡುವುದು ನನಗೆ ನಿಜವಾಗಿ ಭೂಷಣವೂ ಅಲ್ಲ. ನಿಮ್ಮ ವಿರುದ್ಧ ಇನ್ನು ಮುಂದೆ ಚಕಾರವನ್ನೂ ಎತ್ತುವುದಿಲ್ಲವೆಂದು ಎದೆಯೊಣೆಮಾಡಿ ಪಣತೊಟ್ಟಿದ್ದೇನೆ. ಸಂದರ್ಭ ಬಂದಿತೆಂದೇ ಇಷ್ಟು ಮಾತನಾಡಬೇಕಾಯಿತು. ಇಲ್ಲದಿದ್ದರೆ ನಿಮಗಿಂಥ ಮಾತುಗಳನ್ನು ಕೇಳುವ ಪ್ರಸಂಗ ಬರುತ್ತಿರಲಿಲ್ಲ. ಚಿಕ್ಕಂದಿನ ಆ ಘಟನೆ ನಿಮಗೆ ನೆನಪಿರಲಿಕ್ಕಿಲ್ಲ. ಒಂದು ದಿನ, ತಲೆಶೂಲೆಯಾದದ್ದರಿಂದ ನಾನು ಕದ ಮುಚ್ಚಿಕೊಂಡು ಮಲಗಿದ್ದೆ. ಬಾಗಿಲು ತೆರೆಯೆಂದು ನೀವು ತುಂಬ ಕೂಗಿದಿರಿ. ಬಹಳ ಹೊತ್ತಾದ ಬಳಿಕ ನಾನು ಬಾಗಿಲು ತೆರೆದಾಗ ನೀವು ನನ್ನನ್ನು ಹೊಡೆಯಲು ಏರಿಬಂದಿರಿ. ನನಗೆ ತಲೆಶೂಲೆಯಾಗಿದೆಯೆಂಬ ಮಾತನ್ನು ನೀವು ನಂಬಲೇ ಇಲ್ಲ. ಅಂದಿನಿಂದ ನನಗೆ ಬೇನೆ ಬೇಸರಿಕೆಯಾದರೆ ನಿಮಗೆ ಹೇಳಲೇ ಕೂಡದೆಂದು ಪಣತೊಟ್ಟೆ. ನನ್ನ ಅಸ್ವಸ್ಥತೆಯ ವಿಷಯದಲ್ಲಿ ನಿಮಗೆಂದಿಗೂ ಹೇಳಲಾರೆ. ನನ್ನ ಅಂದಿನ ಪ್ರತಿಜ್ಞೆ ಇಂದಿಗೂ ಭಂಗವಾಗಿಲ್ಲ. "

ನೀಲಾಂಬರ ಮೊಗವೆತ್ತಿದಾಗ ದಂಪತಿಗಳ ಕಣ್ಮಿಲನವಾಯಿತು. ಅವನು ಒಮ್ಮೆಲೇ ಎದ್ದು ವಿರಾಜಳ ಬಳಿಸಾರಿ ಆವಳ ಎರಡೂ ಕೈಗಳನ್ನು ಹಿಡಿದು ಉದ್ವಿಗ್ನಸ್ವರದಿಂದ–" ಅದು ಕೂಡದು ವಿರಾಜ್, ನಿನ್ನ ದೇಹಸ್ವಾಸ್ಥ್ಯವು ಎಷ್ಟೂ ಚನ್ನಾಗಿಲ್ಲ. ನಿನ್ನ ದುಃಖ ದುಮ್ಮಾನಗಳನ್ನು ನನಗೆ ತಿಳಿಸು. ಹೀಗೆ ಸಂಕೋಚಪಟ್ಟುಕೊಳ್ಳಬೇಡ. ನಿನ್ನ ಬೇನೆಯ ವಿಷಯವಾಗಿ ನನಗೆ ತಿಳಿಸಲೇ ಬೇಕು " ಎಂದು ಕೇಳಿಕೊಂಡ.

ವಿರಾಜಳು ಮೆಲ್ಲಮೆಲ್ಲನೆ ಕೈಕೊಸರಿಕೊಳ್ಳುತ್ತ–"ಕೈಬಿಡಿ, ನೋವಾಗುತ್ತಿದೆ" ಎಂದಳು.

"ನೋವಾಗುತ್ತಿರಬಹುದು ಪಾಪ! ಮೊದಲು ಹೇಳು, ನಿನಗೇನಾಗಿವೆ?"

ಒಣನಗೆ ನಕ್ಕು ವಿರಾಜಳೆಂದಳು: "ನನಗೇನಾಗಬೇಕು ? ನನಗೇನೂ ಆಗಿಲ್ಲ. ಚನ್ನಾಗಿದ್ದೇನೆ."

ನೀಲಾಂಬರ ಅವಿಶ್ವಾಸವನ್ನು ತೋರುತ್ತ ಹೇಳಿದ: "ಅಲ್ಲ, ಆ ಮಾತು ನಿಜವಲ್ಲ. ನಿನ್ನ ಆರೋಗ್ಯ ಸರಿಯಾಗಿಲ್ಲ. ನಿನ್ನ ಮನಸ್ಸಿಗೆ ಅತ್ಯಂತ ತಾಪವೆನಿಸಿರದಿದ್ದರೆ, ನೀನು ಅನೇಕ ದಿನಗಳ ಹಿಂದಿನ ಕಂತೆಬಿಚ್ಚಿ ನನ್ನ ಹೃದಯಕ್ಕೆ ನೋವು ಮಾಡುತ್ತಿರಲಿಲ್ಲ. ಅಲ್ಲದೆ ಅನೇಕ ಸಲ, ಹೆಚ್ಚಾಗಿ ಇಂಥ ಸಂದರ್ಭಗಳಲ್ಲಿ, ನಾನು ನಿನ್ನ ಕ್ಷಮೆಬೇಡಿದ್ದೇನೆ."

"ಇರಲಿ, ಇನ್ನೆಂದಿಗೂ ನಾನು ನಿಮ್ಮೆದುರು ಈ ಮಾತು ಎತ್ತುವುದಿಲ್ಲ" ಎಂದು ತನ್ನನ್ನು ಬಿಡಿಸಿಕೊಂಡು ಸ್ವಲ್ಪ ದೂರ ಸರಿದು ಕುಳಿತಳು ವಿರಾಜ್.

ನೀಲಾಂಬರನಿಗೆ ವಿರಾಜಳ ಮಾತಿನ ಅರ್ಥವಾಯಿತು. ಅವನು ಏನೂ ಮಾತನಾಡಲಿಲ್ಲ. ೨–೩ ನಿಮಿಷ ಸುಮ್ಮನೆ ಕುಳಿತು ಎದ್ದುಹೋದ.

ರಾತ್ರಿ ವಿರಾಜಳು ದೀಪದ ಬೆಳಕಿನಲ್ಲಿ ಕುಳಿತು ಪತ್ರ ಬರೆಯುತ್ತಿದ್ದಳು. ನೀಲಾಂಬರ ಮಂಚದ ಮೇಲೆ ಮೌನವಾಗಿ ಒರಗಿದ್ದ. ಹೆಂಡತಿಯ ಕಡೆಗೆ ನೋಡುತ್ತ ಅವನು ಒಮ್ಮೆಗೇ ಹೇಳಿದ: "ಈ ಜನ್ಮದಲ್ಲಿ ನೀನು ಅಪರಾಧ ಮಾಡಿರುವೆ ಎಂಬುದಾಗಿ ನಿನ್ನ ಕಡು ವೈರಿಗಳೂ ಹೇಳಲಾರರು. ಏಕೆಂದರೆ ನಿನ್ನ ಬಾಲ್ಯದಿಂದ ಈ ವರೆಗೆ ನಾನು ನಿನ್ನಲ್ಲಿ ಯಾವ ದೋಷವನ್ನೂ ಕಂಡಿಲ್ಲ. ಆದರೆ ನೀನು ಪೂರ್ವ ಜನ್ಮದಲ್ಲಿ ಪಾಪ ಮಾಡಿರಲೇಬೇಕೆಂದು ಎನಿಸುತ್ತಿದೆ. ಇಲ್ಲದಿದ್ದರೆ ಹೀಗೆಂದೂ ಆಗುತ್ತಿರಲಿಲ್ಲ."

ವಿರಾಜಳು ಮೊಗವೆತ್ತಿ ಕೇಳಿದಳು: "ಹೇಗೆ ಆಗುತ್ತಿರಲಿಲ್ಲ?"

ನೀಲಾಂಬರನೆಂದ: "ಭಗವಂತ ನಿನ್ನ ಶರೀರವನ್ನು ಅತ್ಯಂತ ಸುಂದರವಾಗಿ ರಚಿಸಿದ್ದಾನೆ. ನಿನಗೆ ಅಪೂರ್ವ ರೂಪರಾಶಿಯನ್ನಿತ್ತು ಈ ಲೋಕದಲ್ಲಿ ಹುಟ್ಟಿಸಿದ್ದಾನೆ. ಎಲ್ಲ ತೆರನ ಸುಖಸಾಮಗ್ರಿಗಳಿಂದ ಪರಿಪೂರ್ಣವಾದ ಅರಮನೆಯೇ ನಿನ್ನಂತಹರಿಗೆ ವಾಸಿಸಲು ಯೋಗ್ಯಸ್ಥಾನ. ಮೇಲಾಗಿ, ದೇವರು ನಿನಗೆ ರಾಜನಂತಹ ವಿಶಾಲ ಹೃದಯವನ್ನೂ ಕೊಟ್ಟಿದ್ದಾನೆ. ಆದರೆ...."

"ಆದರೆ ಏನು?"

ನೀಲಾಂಬರ ಮಾತನಾಡದೆ ಸುಮ್ಮನೆ ಉಳಿದ.

ನಿಮಿಷಾರ್ಧ ಉತ್ತರವನ್ನು ಪ್ರತೀಕ್ಷಿಸಿದ ಬಳಿಕ ವಿರಾಜಳು–" ಭಗವಂತ ನಿಮಗೆ ಈ ಸುದ್ದಿಯನ್ನು ಯಾವಾಗ ಕಳುಹಿದ ? " ಎಂದು ಕಟೂಕ್ತಿಯನ್ನಾಡಿದಳು.

" ಕಣ್ಣು ಕಿವಿಗಳಿದ್ದ ಎಲ್ಲರಿಗೂ ದೇವರು ಎಲ್ಲ ರೀತಿಯ ಸುದ್ದಿಗಳನ್ನು ನಿತ್ಯವೂ ಕಳಿಸುತ್ತಿರುತ್ತಾನೆ. "

ವಿರಾಜಳು–' ಹೂಂ ' ಎಂದು ಪತ್ರ ಬರೆಯತೊಡಗಿದಳು. ಕೆಲ ಕ್ಷಣ ಸುಮ್ಮನುಳಿದು ನೀಲಾಂಬರನೆಂದ : ನಿನ್ನ ಒಂದು ಮಾತಿಗೂ ನಾನು ಕಿವಿಗೊಡುತ್ತಿಲ್ಲವೆಂದು ನೀನೀಗ ಹೇಳಿದೆ. ಬಹುಶಃ ಆ ಮಾತು ನಿಜವಿರಬಹುದು. ಆದರೆ ಅದಕ್ಕೆಲ್ಲ ನಾನೇ ದೋಷಿಯೆ ? "

ಮುಖವೆತ್ತಿ ವಿರಾಜಳು ಪತಿಯನ್ನು ನೋಡುತ್ತ–" ಹಾಗಾದರೆ ನನ್ನ ದೋಷಗಳನ್ನಾದರೂ ತೋರಿಸಿಕೊಡಿ " ಎಂದಳು.

ನೀಲಾಂಬರನೆಂದ : " ನಾನು ನಿನ್ನ ದೋಷಗಳನ್ನು ತೋರಿಸಲಾರೆ. ಆದರೆ ಇಂದು ನಿಜಸಂಗತಿಯನ್ನು ಹೇಳದೆ ಇರಲಾರೆ–ನೀನು ಯಾವಾಗಲೂ ಇತರರನ್ನು ನಿನ್ನೊಂದಿಗೆ ತುಲನೆಮಾಡಿ ನೋಡುತ್ತಿ. ನಿನ್ನಂತಹ ಎಷ್ಟು ಜನ ಸ್ತ್ರೀಯರು ನನ್ನಂತಹ ನಿರುಪಯೋಗಿ ಮೂರ್ಖ ಗಂಡಂದಿರ ಕೈಯಲ್ಲಿ ಸಿಕ್ಕು ಒದ್ದಾಡುತ್ತಿದ್ದಾರೆಂದು ನೀನು ಒಂದು ಸಲವಾದರೂ ಯೋಚಿಸಿ ನೋಡಿದೆಯಾ ? ನೀನು ನನ್ನಂತಹನ ಕೊರಳಿಗೆ ಬಿದ್ದುದು ನಿನ್ನ ಪೂರ್ವಜನ್ಮದ ಪಾಪವೇ ಸರಿ. ಇಲ್ಲದಿದ್ದರೆ ಈ ದುಃಖಬವಣೆಯನ್ನು ಅನುಭೋಗಿಸುವ ಸಂದರ್ಭ ನಿನಗೆ ಒದಗುವ ಕಾರಣವೇ ಇರಲಿಲ್ಲ. "

ವಿರಾಜಳು ಸುಮ್ಮನೆ ಕಾಗದ ಬರೆಯುವುದರಲ್ಲಿ ಮಗ್ನಳಾದಳು. ಈ ಎಲ್ಲ ಮಾತುಗಳಿಗೆ ಉತ್ತರಿಸಕೂಡದೆಂದು ಬಹುಶಃ ಅವಳು ಮನದಲ್ಲಿಯೆ ನಿಶ್ಚಯಿಸಿರಬೇಕು. ಆದರೆ ಅವಳಿಗೂ ಮೌನ ಸಾಧಿಸಲಿಲ್ಲ. ಅವಳು ಮುಖ ಹೊರಳಿಸಿ ಪತಿಯನ್ನು ಕೇಳಿದಳು : " ನಿಮ್ಮ ಈ ಮಾತಿನಿಂದ ನಾನು ಸಂತುಷ್ಟಳಾಗುವೆನೆಂದು ನೀವು ಬಗೆದಿರಾ ? " ಎಂದು.

" ಯಾವ ಮಾತಿನಿಂದ ? "

ವಿರಾಜಳೆಂದಳು : " ' ನೀನು ಮಹಾರಾಣಿಯಾಗುತ್ತಿದ್ದೆ; ಕೇವಲ ನನ್ನ ಕೈಯಲ್ಲಿ ಬಿದ್ದು ಹೀಗಾದೆ ' ಎಂಬ ನಿಮ್ಮ ಮಾತು ಕೇಳಿ ನಾನು ಸಂತುಷ್ಟ

ಳಾಗುವೆನೆ? ಹೀಗೆ ಮಾತನಾಡುವವರ ಮುಖದರ್ಶನ ಮಾಡಿಕೊಳ್ಳುವ ಇಚ್ಛೆಯಾದರೂ ನನಗೆ ಉಂಟಾದೀತೆ ? ”

ವಿರಾಜಳು ಕಡುಕೋಪಗೊಂಡಿದ್ದಾಳೆಂದು ನೀಲಾಂಬರನಿಗೆ ಖಚಿತ ವಾಯಿತು. ತನ್ನ ಆ ಮಾತಿನಿಂದ ಅವಳು ಇಷ್ಟು ನೊಂದುಕೊಳ್ಳಬಹುದೆಂದು ಆತನೆಂದೂ ಶಂಕಿಸಿರಲಿಲ್ಲ. ಆದುದರಿಂದ ಅವನು ಮನದಲ್ಲಿಯೆ ಅತ್ಯಂತ ಸಂಕುಚಿತನಾದ, ಕುಂಠಿತನಾದ. ಆದರೆ ಹೆಂಡತಿಯನ್ನು ಹೇಗೆ ಸಂತೈಸುವು ದೆಂಬುದು ಅವನಿಗೆ ಹೊಳೆಯಲೇ ಇಲ್ಲ.

ವಿರಾಜಳೆಂದಳು : “ ರೂಪವಂತೆ ರೂಪ ! ಕೇಳಿ ಕೇಳಿ ನನ್ನ ಕಿವಿಪಟಲ ಹರಿದುಹೋಯಿತು. ಕೇವಲ ರೂಪದ ಮೇಲೆ ದೃಷ್ಟಿಯಿದ್ದವರು ನನ್ನ ರೂಪದ ಸಂಬಂಧವಾಗಿ ಚರ್ಚಿಸುತ್ತಿರಬಹುದು. ಆದರೆ ನೀವು ನನ್ನ ಪತಿ ದೇವರು. ನೀವೇ ನನ್ನನ್ನು ಇಷ್ಟು ದೊಡ್ಡವಳನ್ನಾಗಿ ಮಾಡಿದಿರಿ. ಹೀಗಿದ್ದೂ ನೀವೂ ನನ್ನ ರೂಪ ಮಾತ್ರ ನೋಡುತ್ತ ಇದ್ದೀರಾ? ನನ್ನಲ್ಲಿ ರೂಪ ಮಾತ್ರವೇ ಎಲ್ಲಕ್ಕೂ ಮಹತ್ವದ ವಸ್ತುವೆ? ನೀವೇಕೆ ಇಂಥ ಮಾತುಗಳ ನ್ನಾಡುವಿರಿ ? ನಾನು ನನ್ನ ರೂಪದ ವ್ಯಾಪಾರ ನಡೆಸಿದ್ದೇನೆಯೆ ? ಅಥವಾ ಈ ರೂಪವಿರುವುದರಿಂದ ನಿಮ್ಮನ್ನು ಮರೆಯಲೆತ್ನಿಸಿದೆನೆ? ”

ಹೆಂಡತಿಯ ಭಾವಭಂಗಿ ನೋಡಿ ನೀಲಾಂಬರ ಗಾಬರಿಯಾದ. ಅವನು ಅತ್ಯಂತ ಜಡಿತ ಕಂಠದಿಂದ– “ ಅಲ್ಲ–ಹಾಗಲ್ಲ ನನ್ನ ಮಾತಿನ ಅರ್ಥ ” ಎಂದ.

ಗಂಡನಿಗೆ ಮುಂದೆ ಮಾತನಾಡಗೊಡದೆ ವಿರಾಜಳು ತನ್ನ ಮಾತನ್ನೆ ಮುಂದುವರಿಸಿದಳು : “ ಆ ಅರ್ಥವಿಟ್ಟುಕೊಂಡು ಮಾತನಾಡಿದ್ದೀರಿ ನೀವು. ಆ ಬಗೆಗೇ ನಾನು ನಿಮ್ಮನ್ನು ಆ ದಿನ ಕೇಳಿದ್ದು–‘ ಒಂದು ವೇಳೆ ನಾನು ಕುರೂಪಿಯಾದರೂ ನನ್ನನ್ನು ಇದೇ ರೀತಿ ಪ್ರೀತಿಸುವಿರಾ’ ಎಂದು. ಆ ಮಾತು ನೆನಪಿದೆಯೆ ನಿಮಗೆ ? ”

ತಲೆದೂಗುತ್ತ ನೀಲಾಂಬರನು–“ ನೆನಪಿದೆ. ಆದರೆ ಅಂದು ನೀನೇ ಹೇಳಿದ್ದೆ ..” ಎನ್ನುವಷ್ಟರಲ್ಲಿ ವಿರಾಜಳು ಗಂಡನಿಗೆ ಹೆಚ್ಚು ಮಾತನಾಡ ಬಿಡದೆ ಹೇಳಿದಳು : “ ಹೌದು, ನಿಮ್ಮೊಂದಿಗೆ ನನ್ನ ಮದುವೆಯಾಗಿದೆ ಯೆಂದೇ, ನಾನು ಕುರೂಪಿಯಾದರೂ ನೀವು ಖಂಡಿತವಾಗಿ ನನ್ನನ್ನು ಪ್ರೀತಿ ಸುವಿರೆಂದು ಹೇಳಿದ್ದು ಹೌದು. ನಾನು ಹುಟ್ಟಿದ್ದೂ ಒಳ್ಳೆಯ ಮನೆತನದಲ್ಲಿ ;

ನನ್ನೆದುರಿಗೆ ಇಂಥ ಮಾತನಾಡುವುದು ನಿಮ್ಮಂತಹರಿಗೆ ನಾಚಿಕೆಗೇಡಲ್ಲವೆ? ಇಂಥ ಹೇಸಿ ಮಾತುಗಳನ್ನು ನನ್ನೆದುರು ನೀವು ಈ ಮೊದಲು ಎಂದೂ ಆಡಿರಲಿಲ್ಲ."

ಮಾತು ಆಡುತ್ತ ಆಡುತ್ತಲೆ ಕ್ರೋಧ ಅಭಿಮಾನಗಳಿಂದ ವಿರಾಜಳ ಕಣ್ಣುಗಳಲ್ಲಿ ನೀರು ತುಂಬಿತು. ದೀಪದ ಬೆಳಕಿನಲ್ಲಿ ಕಣ್ಣೀರ ಹನಿ ಮಿಂಚುತ್ತಿದ್ದವು.

ಇದನ್ನು ನೋಡಿ ನೀಲಾಂಬರ ವಿಚಲಿತನಾಗಿ ಎದ್ದು ಹೆಂಡತಿಯ ಬಳಿ ಸಾರಿ ಅವಳ ಕೈಯನ್ನು ಹಿಡಿದ.

ತನ್ನ ಪತಿ ತನ್ನ ಕೈಹಿಡಿದಾಗ ತನ್ನ ಕೋಪವೆಲ್ಲವೂ ಮಾಯವಾಗುವು ದೆಂದು ಒಮ್ಮೆ ವಿರಾಜಳೇ ಹೇಳಿದ್ದಳು. ಆ ಮಾತು ಅಕಸ್ಮಾತ್ತಾಗಿ ನೆನಪಿಗೆ ಬಂದು ನೀಲಾಂಬರ ತಟ್ಟನೆ ಹೆಂಡತಿಯ ಹತ್ತಿರ ಸರಿದು ಅವಳ ಬಲಕೈಯನ್ನು ಹಿಡಿದುಕೊಂಡು ಸುಮ್ಮನೆ ಕುಳಿತ.

ವಿರಾಜಳು ತನ್ನ ಎಡಗೈಯಿಂದ ಕಂಬನಿ ಒರಸಿಕೊಂಡಳು. ಅಂದು ರಾತ್ರಿ ಅವರಿಬ್ಬರೂ ಬಹಳ ಹೊತ್ತಿನ ವರೆಗೆ ನಿದ್ದೆಮಾಡಲೇ ಇಲ್ಲ. ದಂಪತಿ ಗಳಿಬ್ಬರೂ ಮೌನವಾಗಿಯೆ ಇದ್ದರು. ಯಾರ ಬಾಯಿಂದಲೂ ಒಂದಕ್ಷರವೂ ಹೊರಬೀಳಲಿಲ್ಲ. ಒಂದು ಸಲ ನೀಲಾಂಬರ ಒಮ್ಮೆಲೆ ಹೆಂಡತಿಯ ಕಡೆಗೆ ನೋಡಿ ಮೃದುವಾಗಿ–"ಇಂದು ಇಷ್ಟೇಕೆ ರೇಗಿರುವೆ?" ಎಂದು ಕೇಳಿದ.

"ನೀವು ಇಂಥ ಮಾತುಗಳನ್ನಾಡುವುದೇಕೆ?"

"ನಿನಗೆ ಅಂಥ ಕೆಟ್ಟ ಮಾತುಗಳನ್ನಾಡಿಲ್ಲವಲ್ಲ ನಾನು?" ಎಂದ ನೀಲಾಂಬರ.

ವಿರಾಜಳು ಮತ್ತೆ ಧೃತಿಗೆಟ್ಟು–"ಕೆಟ್ಟ ಮಾತನ್ನೇ ಆಡಿಲ್ಲವೆಂದು ನೀವು ಸಮರ್ಥಿಸಿಕೊಳ್ಳುವಿರಲ್ಲ! ನೀವಾಡಿದ ಮಾತು ಅತಿ ಹೀನವಾದ ಮಾತು. ಆದುದರಿಂದಲೇ ಆ ನೀಚ ದಾಸಿಯನ್ನು...." ವಿರಾಜಳು ಆಡುತ್ತ ಆಡುತ್ತಲೇ ನಿಂತುಬಿಟ್ಟಳು.

ಕ್ಷಣ ಹೊತ್ತು ಮೌನವಾಗಿ ಉಳಿದು ನೀಲಾಂಬರನೆಂದ: "ಕೇವಲ ಈ ಅಪರಾಧಕ್ಕಾಗಿಯೆ ನೀನು ಸುಂದರಿಯನ್ನು ಹೊರದಬ್ಬಿದೆಯಾ?"

'ಹೊಂ'–ಎಂದು ವಿರಾಜಳು ಸುಮ್ಮನಾದಳು.

ಬಳಿಕ ಅವಳೇ ಮಾತಿಗೆ ಮೊದಲಿಸಿದಳು: "ನೋಡಿ, ನೀವು ನನ್ನೊಂದಿಗೆ

ವಾದ ವಿವಾದ ಬೆಳಿಸಬೇಡಿ. ನಾನೇನು ಮಗುವಲ್ಲ. ಒಳಿತು ಕೆಡುಕನ್ನು ಅರಿತುಕೊಳ್ಳುವಷ್ಟು ಬುದ್ಧಿ ನನಗೂ ಇದೆ. ಅಂಥ ಮಹಾಪರಾಧ ಮಾಡಿದ ಳೆಂದೇ ಅವಳನ್ನು ಹೊರಗಟ್ಟಿದೆ. ಏಕೆ ಹೊರಗಟ್ಟಿದೆಯೆಂಬ ಸರ್ವ ವೃತ್ತಾಂತ ವನ್ನು ಗಂಡಸರಾದ ನೀವು ಕೇಳದೆಹೋದರೆ ನಿಮಗದರಿಂದ ಯಾವ ಹಾನಿಯೂ ಇಲ್ಲ."

"ಇಲ್ಲ, ಆ ವೃತ್ತಾಂತ ಕೇಳುವ ಇಚ್ಛೆ ನನಗಿಲ್ಲ" ಎಂದು ನೀಲಾಂಬರ ನೀಳ್ ಉಸಿರೊಂದನ್ನೆಳೆದ. ಬಳಿಕ ಮೆಲ್ಲನೆ ಪಕ್ಕಕ್ಕೆ ಹೊರಳಿ ನಿದ್ದೆ ಹೋದ.

ತಮ್ಮನಾದ ಪೀತಾಂಬರನು ಪಾಲಾದ ನಾಲ್ಕಾರು ದಿವಸಗಳಲ್ಲೇ ಮನೆಯ ನಡುವೆ ಚಿಕ್ಕ ಕಂಬಗಳನ್ನು ಹುಗಿದು ಬಿದಿರುಮೆಳೆಯ ತಟ್ಟಿ ಹಾಕಿಸಿ ತನ್ನ ಮನೆ ಬೇರೆ ಮಾಡಿಕೊಂಡ; ಅಲ್ಲದೆ, ತೆಂಕಣದಲ್ಲಿ ಹೊಸ ಬಾಗಿಲೊಂದನ್ನು ಹಾಕಿಸಿ ಮೊಗಸಾಲೆಯೊಂದನ್ನು ಮಾಡಿಸಿದ. ಅನಂತರ ಮನೆ ಗುಡಿಸಿ ಸಾರಿಸಿ ಸಜ್ಜುಮಾಡಿದ.

ಪೀತಾಂಬರ ಹೀಗೆ ತನ್ನ ದಿನಗಳನ್ನು ಸುಖದಿಂದ ಕಳೆಯತೊಡಗಿದ. ಅವನು ಮೊದಲಿನಿಂದಲೂ ಅಣ್ಣನೊಂದಿಗೆ ಹೆಚ್ಚು ಮಾತನಾಡುತ್ತಿರಲಿಲ್ಲ. ಇತ್ತೀಚೆಗೆ, ಅಣ್ಣನೊಂದಿಗಿದ್ದ ಎಲ್ಲ ಸಂಬಂಧವನ್ನೂ ಕಡಿದುಕೊಂಡು ಬಿಟ್ಟಿದ್ದ. ಮನೆಯಲ್ಲಿ ವಿರಾಜಳು ದಿನವೆಲ್ಲ ಏಕಾಂಗಿನಿಯಾಗಿಯೇ ಕಳೆಯ ಬೇಕಾಗುತ್ತಿತ್ತು. ಸುಂದರಿಯನ್ನು ಹೊರಗಟ್ಟಿದ ಬಳಿಕ ಮನೆಗೆಲಸಗಳೆಲ್ಲ ವನ್ನೂ ಅವಳೊಬ್ಬಳೇ ನಿರ್ವಹಿಸಬೇಕಾಯಿತು. ಜನರ ಅಪಹಾಸ್ಯಕ್ಕೆ ಹೆದರಿ, ಆಳು-ಹೋಳುಗಳು ಮಾಡುವಂತಹ ಕೆಲಸವನ್ನು, ಮುಚ್ಚುಮರೆಯಿಂದ ಮಾಡುತ್ತಿದ್ದಳು. ಆದುದರಿಂದ ರಾತ್ರಿ ಬಹಳ ಹೊತ್ತಿನ ವರೆಗೆ ಅವಳು ಜಾಗ ರಣೆ ಮಾಡಬೇಕಾಗುತ್ತಿತ್ತು.

ಒಂದು ದಿನ ನಡೆದ ಸಂಗತಿ. ಅಂದು ವಿರಾಜಳು ತನ್ನ ನಿತ್ಯದ ಕೆಲಸ ದಲ್ಲಿ ತೊಡಗಿದ್ದಳು. ಅಕಸ್ಮಾತ್ತಾಗಿ ಮನೆಯ ಆ ಭಾಗದಿಂದ ತಟ್ಟಿಯ ಸಂದಿ ನೊಳಗಿಂದ ಕೋಮಲ ದನಿಯೊಂದು ಕೇಳಬಂತು : "ಅಕ್ಕಾ, ರಾತ್ರಿ ಬಹಳ ವಾಯಿತು !"

ವಿರಾಜಳು ಚಕಿತಳಾಗಿ ಮುಖವನ್ನೆತ್ತಿ ನೋಡಿದಳು. ಮತ್ತೆ ಅದೇ ಕಂಠ ಮತ್ತಷ್ಟು ಕೋಮಲವಾಗಿ-"ಅಕ್ಕಾ, ನಾನು ಮೋಹಿನಿ" ಎಂದಿತು.

ಆಶ್ಚರ್ಯಗೊಂಡು– “ಯಾರು ? ತಂಗಿಯೇನು ? ಇಷ್ಟು ರಾತ್ರಿಯಲ್ಲಿ ಇದೇನೆ ?” ಎಂದಳು ವಿರಾಜ್.

“ಹೌದಕ್ಕ–ನಾನೇ, ಸ್ವಲ್ಪ ಸಮೀಪ ಬನ್ನಿ.”

ವಿರಾಜಳು ತಟ್ಟಿಯ ಬಳಿ ಸರಿದಳು. ಆಗ ಓರಗಿತ್ತಿ ಮೆತ್ತಗೆ ಕೇಳಿದಳು : “ಏನಕ್ಕ ? ಭಾವನವರು ಮಲಗಿದ್ದಾರೆಯೆ ?”

“ಹುಂ”–ಎಂದಳು ವಿರಾಜ್.

“ಅಕ್ಕಾ, ನಿನ್ನೊಂದಿಗೆ ಒಂದು ವಿಷಯ ಹೇಳುವುದಿದೆ. ಆದರೆ ಹೇಳುವ ಧೈರ್ಯವಾಗಲೊಲ್ಲದು”–ಎಂದು ಮೋಹಿನಿ ಸುಮ್ಮನಾದಳು.

ಮೋಹಿನಿಯ ಕಂಠದನಿಯಾಲಿಸಿ ಓರಗಿತ್ತಿ ಅಳುತಿದ್ದಾಳೆಂದು ವಿರಾಜಳು ಅರಿತುಕೊಂಡಳು. ಅವಳು ಚಿಂತಿತಳಾಗಿ–“ಏನಾಯಿತು ತಂಗಿ ?” ಎಂದು ಕೇಳಿದಳು.

ಓರಗಿತ್ತಿಗೆ ಆಗಲೆ ಉತ್ತರಿಸಲಾಗಲಿಲ್ಲ. ಅವಳು ಸೆರಗಿನಿಂದ ಕಣ್ಣೊರಸಿ ಕೊಂಡು ತನ್ನನ್ನು ಸಾವರಿಸಿಕೊಳ್ಳತೊಡಗಿದಳು.

ವಿರಾಜಳು ಉದ್ವಿಗ್ನಳಾಗಿ–“ಏನಾಯಿತು ತಂಗೀ ?” ಎಂದು ಪುನಃ ಕೇಳಿದಳು.

ಆಗ ಮೋಹಿನಿ ಅಳುದನಿಯಿಂದ ಹೇಳತೊಡಗಿದಳು : “ಭಾವನವರ ಮೇಲೆ ಕಟ್ಟಳೆಹಾಕಿದ್ದಾರಂತೆ. ನಾಳೆಯೇ ಸಮನ್ಸು ಹೊರಡುವುದೆಂದೂ ಕೇಳಿದ್ದೇನೆ. ಇನ್ನೇನು ಗತಿ ಅಕ್ಕಾ ?”

ವಿರಾಜಳು ಹೆದರಿದಳೇನೋ ನಿಜ. ಆದರೆ ತನ್ನ ಭಾವವನ್ನು ಅದುಮುತ್ತ “ಸಮನ್ಸ್ ಹೊರಟರೆ ಏಕೆ ಹೆದರಬೇಕು ತಂಗೀ ?” ಎಂದಳು.

“ಹೆದರುವ ಅವಶ್ಯಕತೆಯಿಲ್ಲವೆ ?”

“ಊಹೂಂ–ಆದರೆ ಕಟ್ಟಳೆ ಹೂಡಿದವರಾರು ?” ಎಂದು ವಿಚಾರಿಸಿದಳು ವಿರಾಜ್.

“ಭೋಲಾನಾಥ ಮುಖರ್ಜಿಯವರು” ಎಂದಳು ಮೋಹಿನಿ. ವಿರಾಜಳು ಕ್ಷಣ ಹೊತ್ತು ಸ್ತಂಭಿತಳಾಗಿ ನಿಂತು–“ಸರಿ, ಈಗ ಅರ್ಥವಾಯಿತು. ಅದೇನಿಲ್ಲ. ಇವರಿಗೆ ಮುಖರ್ಜಿ ಮಹಾಶಯರು ಸಾಲ ಕೊಟ್ಟಿದ್ದರು. ಬಹುಶಃ ಅದಕ್ಕಾಗಿ ಕಟ್ಟಳೆಹಾಕಿರಬಹುದು. ಈ ಬಗೆಗೆ ಹೆದರುವ ಕಾರಣವೇನೂ ಇಲ್ಲ ತಂಗೀ” ಎಂದು ಸಮಾಧಾನಪಡಿಸಿದಳು.

ತರುವಾಯ ಓರಗಿತ್ತಿಯರು ಮೌನವಾಗಿ ಉಳಿದರು. ಸ್ವಲ್ಪ ಹೊತ್ತು ತಡೆದು ಮೋಹಿನಿ ಹೇಳಿದಳು : " ಅಕ್ಕ, ನಾನೆಂದಿಗೂ ನಿನ್ನೊಡನೆ ಹೆಚ್ಚು ಮಾತನಾಡಿದವಳಲ್ಲ. ಅಲ್ಲದೆ ಆ ಯೋಗ್ಯತೆಯೂ ನನಗಿಲ್ಲ. ಆದರೆ ಇಂದು ಈ ತಂಗಿಯ ಮಾತೊಂದು ಕೇಳುವೆಯಾ ? ''

ಮೋಹಿನಿಯ ಕಂಠದನಿಯಿಂದ ವಿರಾಜಳ ಹೃದಯ ಕರಗಿತು. ಅವಳು ಮತ್ತಿಷ್ಟು ಕೋಮಲವಾಗಿ–" ಏಕೆ ಕೇಳಲಾರೆ ತಂಗಿ? " ಎಂದಳು.

" ಹಾಗಾದರೆ ತುಸು ನಿನ್ನ ಕೈಯೊಡ್ಡು. "

ವಿರಾಜ್ ಕೈ ಮುಂದೆಮಾಡಿನೊಡನೆಯೆ ಸುಕೋಮಲ ಚಿಕ್ಕ ಕೈಯೊಂದು ತಟ್ಟಿಯ ಸಂದಿನಿಂದ ಕಾಣಿಸಿತು. ಮೋಹಿನಿ ವಿರಾಜಳ ಕೈಯಲ್ಲಿ ಚಿನ್ನದ ಆಭರಣವೊಂದನ್ನು ಇಟ್ಟಳು.

ಕೌತುಕಗೊಂಡ ವಿರಾಜಳು–" ಇದನ್ನು ಕೊಂಡು ನಾನೇನು ಮಾಡುವುದು ತಂಗೀ ? " ಎಂದಳು.

ಮೋಹಿನಿ ತನ್ನ ದನಿಯನ್ನು ಮತ್ತಿಷ್ಟು ಮೃದುಗೊಳಿಸಿ–" ಇದನ್ನು ಒತ್ತೆ ಇಟ್ಟು, ಇಲ್ಲವೆ ಮಾರಿ, ಭಾವನವರ ಸಾಲ ಬಗೆಹರಿಸು ಅಕ್ಕ " ಎಂದಳು.

ಓರಗಿತ್ತಿಯಿಂದ ಈ ತೆರನ ಸಹಾನುಭೂತಿಯ ನಿರೀಕ್ಷೆಯನ್ನು ವಿರಾಜಳೆಂದಿಗೂ ತಳೆದಿರಲಿಲ್ಲ. ಆದುದರಿಂದ ಅವಳು ತಾನಾಗಿಯೆ ಇಷ್ಟೊಂದು ಸಹಾನುಭೂತಿ ತೋರಿದಾಗ ವಿರಾಜಳಿಗೆ ಕ್ಷಣ ಹೊತ್ತು ದಂಗುಬಡೆದಂತಾಯಿತು. ಅವಳ ಬಾಯಿಂದ ಮಾತೇ ಹೊರಡಲಿಲ್ಲ. " ಅಕ್ಕ, ನಾನಿನ್ನು ಹೋಗುತ್ತೇನೆ "–ಎಂದವಳೆ ಅವಳು ಮರಳಿ ಹೋಗುತ್ತಿರುವಾಗ ವಿರಾಜಳು ಅವಳನ್ನು ಕೂಗಿ ಕರೆದು–" ಈಗಲೆ ಹೋಗಬೇಡ ತಂಗಿ, ನನ್ನ ಮಾತೊಂದಿಷ್ಟು ಕೇಳಿ ಹೋಗು " ಎಂದಳು.

ಮೋಹಿನಿ ಮರಳಿ ಬಂದು–" ಏನಕ್ಕಾ ? " ಎಂದಳು.

ವಿರಾಜಳು ತಟ್ಟಿಯ ಸಂದಿನಿಂದ ತಟ್ಟನೆ ಆ ಆಭರಣವನ್ನು ಹಿಂದಕ್ಕೆಸೆದು–" ಛೀ ಛೀ, ಹೀಗೆಲ್ಲ ಮಾಡಕೂಡದು ತಂಗೀ " ಎಂದಳು.

ಮೋಹಿನಿ ಅದನ್ನೆತ್ತಿಕೊಳ್ಳುತ್ತ ಕೋಪದ ದನಿಯಿಂದ " ಅದೇಕೆ ಕೂಡದು ? " ಎಂದಳು.

ವಿರಾಜಳೆಂದಳು : " ಈ ವಿಷಯ ನಿನ್ನ ಯಜಮಾನರಿಗೆ ತಿಳಿಯಿತೆಂದರೆ

"ಅವರಿಗೆ ಇದು ಗೊತ್ತಾದರೆ ತಾನೆ ?"

"ಇಂದೇ ಗೊತ್ತಾಗಲಿಕ್ಕಿಲ್ಲ. ಆದರೆ ನಾಳೆಯಾದರೂ ಗೊತ್ತಾಗದೆ ಹೋಗದು. ಆಗ ಏನು ಗತಿ ?"

ಮೋಹಿನಿ ಎಂದಳು : "ಈ ವಿಷಯ ಅವರಿಗೆಂದಿಗೂ ಗೊತ್ತಾಗದಕ್ಕ ! ಕಳೆದ ವರುಷ ನನ್ನ ಅಮ್ಮ ಮೃತ್ಯುಶಯ್ಯೆಯಲ್ಲಿ ಮಲಗಿದ್ದಾಗ ಇದನ್ನು ಮುಚ್ಚಿ ನನಗೆ ಕೊಟ್ಟುಹೋದರು. ಈವರೆಗೂ ಅದನ್ನು ನಾನು ಇಕ್ಕಿ ಕೊಂಡಿಲ್ಲ, ಹೊರಗೂ ತೆಗೆದಿಲ್ಲ. ನಿನ್ನ ಕಾಲಿಗೆ ಬೀಳುತ್ತೇನೆ ಅಕ್ಕ, ದಯ ವಿಟ್ಟು ಇದನ್ನು ತೆಗೆದುಕೊ."

ಓರಗಿತ್ತಿಯ ಕಳಕಳಿಯ ಬಿನ್ನಹವನ್ನು ಕೇಳಿದ ಕೂಡಲೆ ವಿರಾಜಳ ಕಣ್ಣುಗಳಿಂದ ಕಂಬನಿ ಧಾರೆಗಟ್ಟಿ ಹರಿಯತೊಡಗಿತು. ಅವಳು ನಿಸ್ತಬ್ಧಳಾಗಿ ಮನದಲ್ಲಿಯೆ ಯೋಚಿಸತೊಡಗಿದಳು–"ನಮ್ಮಿಬ್ಬರನೂ ಒಂದೇ ಕುಟುಂಬಕ್ಕೆ ಮದುವೆ ಮಾಡಿ ಕೊಟ್ಟಿದೆ. ಆದುದರಿಂದಲೆ ನಮ್ಮಲ್ಲಿ ಈ ಆತ್ಮೀಯತೆ ಉಂಟಾ ಗಿದೆ. ಅದರ ಹೊರತು ನಮ್ಮಿಬ್ಬರಿಗೆ ಯಾವ ಸಂಪರ್ಕವೂ ಇಲ್ಲ, ಸಂಬಂಧವೂ ಇಲ್ಲ. ಆದರೂ ನಾವು ಪರಸ್ಪರರ ಬಗೆಗೆ ಸಹಾನುಭೂತಿ ತೋರುತ್ತೇವೆ, ಸ್ವಾರ್ಥತ್ಯಾಗ ಮಾಡುತ್ತೇವೆ. ಆದರೆ ಇದೇ ಕುಟುಂಬದಲ್ಲಿ ವಿರುದ್ಧ ಸ್ವಭಾವದ ಇಬ್ಬರು ಪುರುಷರಿದ್ದಾರೆ. ಅವರಿಬ್ಬರೂ ಒಡಹುಟ್ಟಿದವರು. ಆದರೆ ಅವರಲ್ಲಿ ಪರಸ್ಪರರ ವಿಷಯದಲ್ಲಿ ಇರುವ ಭಾವನೆ ಎಂಥದು ?" ಬಳಿಕ ಕೈಯಿಂದ ಕಣ್ಣೀರನ್ನು ತೊಡೆಯುತ್ತ ವಿರಾಜಳೆಂದಳು : "ತಂಗಿ, ಈ ನಿನ್ನ ಉಪಕಾರ ವನ್ನು ಸಾಯುವ ವರೆಗೂ ನಾನು ಮರೆಯಲಾರೆ ! ಆದರೂ ನಾನು ಇದನ್ನು ಸ್ವೀಕರಿಸಲಾರೆ. ಅಲ್ಲದೆ, ಗಂಡನ ಮರೆಯಲ್ಲಿ ಯಾವ ಕೆಲಸ ಮಾಡುವುದೂ ಎಂಥ ಸ್ತ್ರೀಗೂ ಭೂಷಣವಲ್ಲ. ಆದುದರಿಂದ ತಂಗಿ, ಈ ರೀತಿ ನಿನ್ನ ಆಭರಣ ತೆಗೆದುಕೊಳ್ಳುವುದರಿಂದ ನಾವಿಬ್ಬರೂ ಪಾಪಕ್ಕೆ ಗುರಿಯಾಗುವೆವು."

ಮೋಹಿನಿಯೆಂದಳು : "ಅಕ್ಕ, ನಿನಗೆ ಎಲ್ಲ ವಿಷಯ ತಿಳಿದಿಲ್ಲ. ಆದುದ ರಿಂದಲೆ ನೀನು ಹೀಗೆ ಆಡುತ್ತಿರುವೆ. ಆದರೆ ನನಗೂ ಧರ್ಮಾಧರ್ಮವಿದೆಯೊ ಇಲ್ಲವೊ ? ಯಮರಾಜನೆದುರು ನನ್ನ ಪಾಪ-ಪುಣ್ಯಗಳ ಲೆಕ್ಕ ಒಪ್ಪಿಸುವಾಗ ನಾನೇನೆಂದು ಉತ್ತರವೀಯಲಿ ?"

ಮತ್ತೊಂದು ಸಲ ಕಣ್ಣೊರಸಿ ವಿರಾಜಳು ತನ್ನನ್ನು ಸಾವರಿಸಿಕೊಂಡು ನುಡಿದಳು : "ತಂಗೀ, ನಾನು ಎಲ್ಲರನ್ನೂ ಚನ್ನಾಗಿ ಅರಿತಿದ್ದೇನೆ. ನಿನ್ನನ್ನು

ಮಾತ್ರ ಈ ವರೆಗೂ ಅರಿತಿರಲಿಲ್ಲ. ಯಮರಾಜನೆದುರು ನೀನೇನೂ ಕೈಫಿಯತ್ತು ಕೊಡುವ ಅಗತ್ಯಬೀಳುವುದಿಲ್ಲ! ನೀನಾಡಿದ ಮಾತುಗಳನ್ನೆಲ್ಲ ಸ್ವತಃ ಅಂತರ್ಯಾಮಿಯೆ ಬರೆದಿಟ್ಟುಕೊಂಡಿದ್ದಾನೆ. ಈಗ ರಾತ್ರಿ ಬಹಳವಾಯಿತು. ಹೋಗಿ ಮಲಗಮ್ಮ!"

ಹೀಗೆ ಹೇಳಿ ಓರಗಿತ್ತಿ ಉತ್ತರ ಹೇಳುವುದಕ್ಕೆ ಅವಕಾಶವೀಯದೆ ದ್ರುತ-ಗತಿಯಿಂದ ಹೊರಟುಹೋದಳು ವಿರಾಜ್. ಆದರೆ ಅವಳು ಕೋಣೆಯನ್ನು ಹೊಗದೆ ಕಗ್ಗತ್ತಲಲ್ಲಿ, ಅಂಗಳದ ಒಂದು ಮೂಲೆಯಲ್ಲಿ, ತನ್ನ ಸೆರಗು ಹಾಸಿ ಅಲ್ಲಿಯೆ ಒರಗಿಕೊಂಡಳು. ದಾವೆ-ಫಿರ್ಯಾದನ್ನು ಕುರಿತ ಚಿಂತೆ ಅವಳಿಗೇನೂ ಇರಲಿಲ್ಲ. ಆದರೆ ಮಿತಭಾಷಿಣಿಯೂ ಬಡಕಲು ಶರೀರದವಳೂ ಆದ ಓರಗಿತ್ತಿಯ ಮಾತನ್ನು ಯೋಚಿಸಿದಂತೆಲ್ಲ ಅವಳ ಕಣ್ಣುಗಳಿಂದ ನೀರಿನ ಕೋಡಿಯೆ ಹರಿಯಿತು. ಇಂದು ಅವಳ ಹೃದಯಕ್ಕೆ ಒಂದೇ ವ್ಯಥೆ: 'ಇಷ್ಟು ದಿನ ಇಷ್ಟೊಂದು ಹತ್ತಿರ ಇದ್ದುಕೊಂಡೂ ತಾನು ಅವಳನ್ನು ಗುರುತಿಸದೆ ಹೋದೆನಲ್ಲ—ಅವಳನ್ನು ಗುರುತಿಸಲು ತಾನೆಂದಿಗೂ ಯಾವ ಯತ್ನವನ್ನೂ ಮಾಡಲಿಲ್ಲವಲ್ಲ!' ಅಪರೋಕ್ಷದಲ್ಲಿ ಅವಳ ನಿಂದೆಯನ್ನಾಗಲಿ, ಪರೋಕ್ಷದಲ್ಲಿ ಅವಳ ಸ್ತುತಿಯನ್ನಾಗಲಿ ಅವಳೆಂದಿಗೂ ಮಾಡಿಲ್ಲವೆಂಬುದು ನಿಜ. ಅತ್ಯಂತ ಪ್ರಖರವಾದ ವಿದ್ಯುತ್ತಿನ ಬೆಳಕು ಕ್ಷಣ ಕಾಲ ಕತ್ತಲನ್ನು ಸೀಳುವಂತೆ ಇಂದು ಓರಗಿತ್ತಿಯು ಅಕ್ಕನ ಅಂತರಾಳವನ್ನು ಸೀಳಿ ಬೆಳಗುವಂತೆ ಮಾಡಿದಳು. ಯೋಚನೆಯಲ್ಲಿ ಯಾವಾಗ ನಿದ್ದೆ ಬಂದಿತೊ ವಿರಾಜಳಿಗೆ ಗೊತ್ತಾಗಲೇ ಇಲ್ಲ. ಒಮ್ಮೆ ಕರಸ್ಪರ್ಶದಿಂದ ಚಕಿತಳಾಗಿ ಎದ್ದು ಕುಳಿತಾಗ ತಲೆಯ ಬಳಿ ನೀಲಾಂಬರ ಕುಳಿತುದನ್ನು ಕಂಡಳು.

ನೀಲಾಂಬರ ಸಂಕ್ಷೇಪವಾಗಿ—"ಒಳಗೆ ನಡೆ ವಿರಾಜ್, ರಾತ್ರಿ ಬಹುಶಃ ಮುಗಿದಿರಬಹುದು" ಎಂದ.

ವಿರಾಜಳು ಅವಾಕ್ಕಾದಳು. ಗಂಡನ ದೇಹಕ್ಕೆ ಒರಗಿಕೊಂಡು ಒಳಗೆ ಬಂದು ನಿರ್ಜೀವಳಂತೆ ಬಿದ್ದುಕೊಂಡಳು.

೬

ಒಂದು ವರ್ಷ ಉರುಳಿತು. ಆ ವರುಷ ರೂಪಾಯಿಗೆ ಎರಡಾಣೆಯ ಬೆಳೆಯೂ ಬರಲಿಲ್ಲ. ನೀಲಾಂಬರನ ಸಂಸಾರದ ವೆಚ್ಚವೆಲ್ಲವೂ ಹೊಲದ ಬೆಳೆಯಿಂದಲೆ ಸಾಗಬೇಕು. ಆದರೆ ಅವನ ಹೊಲಗಳಲ್ಲಿ ಬಹುಭಾಗವನ್ನು ಹತ್ತಿರದ ಹಳ್ಳಿಯ ಮುಖರ್ಜಿ ಮಹಾಶಯ ಕೊಂಡುಬಿಟ್ಟಿದ್ದ. ವಾಸದ ಮನೆ ಸಹ ಒತ್ತೆಬಿದ್ದಿತ್ತು. ಪೀತಾಂಬರ ಆ ಒತ್ತೆಯ ಕಾಗದಪತ್ರ ವನ್ನು ಗುಪ್ತವಾಗಿ ತನ್ನ ಹೆಸರಿಗೆ ಬದಲಿಸಿದ ವರ್ತಮಾನವೂ ಪ್ರಕಟವಾಗಿತ್ತು. ನೀಲಾಂಬರನ ಹೊಡುವ ಎತ್ತು ಒಂದು ಸತ್ತುಹೋಯಿತು. ಇತ್ತ ಕೆರೆಯೂ ಒಣಗಿಹೋಯಿತು. ಯಾವ ದಿಕ್ಕಿಗೆ ನೋಡಿದರೂ ವಿರಾಜಳಿಗೆ ನಿರಾಶೆಯೇ ಎದುರುಗೊಳ್ಳುತ್ತಿತ್ತು. ದೇಹದ ಯಾವುದೇ ಭಾಗವನ್ನು ಬಹಳ ಹೊತ್ತಿನ ವರೆಗೆ ಬಂಧನದಲ್ಲಿಟ್ಟರೆ ಆ ಭಾಗದಲ್ಲಿ ಅವ್ಯಕ್ತವಾದ, ಅಸಹನೀಯ, ಪೀಡೆ ಯೊಂದು ಕಾಣಿಸಿಕೊಂಡು ಇಡಿಯ ದೇಹವೇ ಶಕ್ತಿಗುಂದಿ ಶಿಥಿಲವಾಗುವುದು. ಹಾಗೆಯೆ, ವಿರಾಜಳ ಸಾಂಸಾರಿಕ ವಿಷಯದಲ್ಲೂ ಕ್ರಮಶಃ ಶಿಥಿಲತೆ ಉಂಟಾಗ ತೊಡಗಿತು. ಮೊದಮೊದಲು ಅವಳು ನಗುತ್ತ ಕೆಲೆಯುತ್ತ ಇರುತ್ತಿದ್ದಳು. ಮಾತುಮಾತಿಗೆ ಬುದ್ಧಿಕೌಶಲ್ಯದೊಂದಿಗೆ ವಿನೋದವನ್ನೂ ಬೆರಸಿ ಎಲ್ಲರನ್ನೂ ನಗಿಸುತ್ತಿದ್ದಳು. ಆದರೆ ಇತ್ತೀಚೆ ಮನೆಯೇ ನಿರ್ಜನವಾದುದರಿಂದ ಅವಳ ಅಲ್ಪ ಸ್ವಲ್ಪ ಮಾತೂ ನಿಂತುಹೋಯಿತು. ಅಲ್ಲದೆ ನೆರೆಹೊರೆಯವರು ಬಂದು ಕ್ಷೇಮ ಸಮಾಚಾರ ಕೇಳಿದಾಗ ಅವಳು ಮನದಲ್ಲಿಯೇ ಬೇಸರಪಟ್ಟುಕೊಳ್ಳು ತ್ತಿದ್ದಳು.

ವಿರಾಜಳು ಅತ್ಯಂತ ಅಭಿಮಾನಿ. ನೆರೆಹೊರೆಯವರಾರೇ ಆಗಲಿ, ತನ್ನ ಮನಸ್ಸಿಗೆ ಪ್ರತಿಕೂಲವಾಗಿ ಮಾತನಾಡಿದರೆ ಅವಳು ಅವರ ವಿರೋಧ ಕಟ್ಟಿ ಕೊಳ್ಳದಿರುತ್ತಿದ್ದಿಲ್ಲ. ಮನೆಯ ಯಾವ ಕೆಲಸದಲ್ಲಿಯೂ ಕೊಂಚವೂ ಉತ್ಸಾಹ ವಿಲ್ಲವೆಂದು ಅವಳ ಕೆಲಸವನ್ನು ನೋಡುವುದರಿಂದಲೆ ಕಂಡುಕೊಳ್ಳಬಹುದಿತ್ತು. ಇತ್ತೀಚೆಗೆ ಅವಳು ಮಲಗುವ ಕೋಣೆಯನ್ನು ಕೂಡ ಅಷ್ಟೊಂದು ಚೊಕ್ಕಟ ವಾಗಿಡುತ್ತಿರಲಿಲ್ಲ. ಮಂಚದ ಮೇಲಿನ ಹಾಸಿಗೆ ಮಾಸಿರುತಿತ್ತು, ಅಸ್ತವ್ಯಸ್ತ

ಒಗೆದ ಬಟ್ಟೆಗಳನ್ನು ವ್ಯವಸ್ಥಿತವಾಗಿಯೂ ಇಡುತ್ತಿರಲಿಲ್ಲ. ಕೋಣೆಯೊಳಗಿನ ವಸ್ತುಗಳೆಲ್ಲವೂ ಧೂಳಿನಲ್ಲಿ ಮಲಿನವಾಗಿ ಚಲ್ಲಾಪಿಲ್ಲಿಯಾಗಿ ಬಿದ್ದಿರುತಿದ್ದವು. ಕೋಣೆ ಗುಡಿಸಿದರೂ ಕೂಡ ಕಸ-ಕಡ್ಡಿಯನ್ನು ಬಹುಶಃ ಮೂಲೆಯಲ್ಲಿಯೆ ಒಟ್ಟಿರುತ್ತಿದ್ದಳು. ಅದನ್ನು ಹೊರಚೆಲ್ಲಲೂ ಅವಳಿಗೆ ಶಕ್ತಿಯಿರಲಿಲ್ಲವೊ ಏನೊ! ಹೀಗೆಯೆ ದಿನಗಳು ಉರುಳುತ್ತಿದ್ದವು. ಈ ನಡುವೆ ಹರಿಮತಿಯನ್ನು ಕರೆದು ಕೊಂಡು ಬರಲು ನೀಲಾಂಬರ ಎರಡಾವರ್ತಿ ಪ್ರಯತ್ನಿಸಿದ್ದ. ಆದರೆ ಅವಳನ್ನು ಅತ್ತೆಯ ಮನೆಯವರು ಕಳುಹಿಸಿರಲಿಲ್ಲ. ಹದಿನೈದು ದಿನಗಳ ಹಿಂದೆ ಒಂದು ಕಾಗದವನ್ನೂ ಬರೆದಿದ್ದ. ಆದರೆ ಹರಿಮತಿಯ ಮಾವ ಅದಕ್ಕೆ ಉತ್ತರವೀಯು ವಷ್ಟೂ ಸೌಜನ್ಯತೋರಿಸಲಿಲ್ಲ. ಮೇಲಾಗಿ ಈ ವಿಷಯವಾಗಿ ವಿರಾಜಳೊಂದಿಗೆ, ಚಕಾರವೆತ್ತಲೂ ನೀಲಾಂಬರನಿಂದ ಸಾಧ್ಯವಿಲ್ಲ. ಹರಿಮತಿಯ ಹೆಸರು ತೆಗೆ ದರೂ ಸಾಕು, ಅವಳು ಉರಿದೇಳುತಿದ್ದಳು. ಅವಳೇ ಪುಟ್ಟಿಯ ಪಾಲನ-ಪೋಷಣೆ ಮಾಡಿದ್ದಾಳೆ; ಅವಳನ್ನು ತಾಯಿಯಂತೆ ಪ್ರೀತಿಸಿದ್ದಾಳೆ. ಆದರೂ ಇತ್ತೀಚೆ ಅವಳ ಸಂಪರ್ಕವೂ ವಿರಾಜಳಿಗೆ ವಿಷರೂಪವಾಗಿತ್ತು!

ಅಂದು ನಸುಕಿನಲ್ಲೇ ನೀಲಾಂಬರನು ಅಂಚೆಕಟ್ಟೆಗೆ ಹೋಗಿದ್ದ. ಮರಳಿ ಬಂದು ಖಿನ್ನವದನದಿಂದ ಮನೆಯನ್ನು ಪ್ರವೇಶಿಸಿ–"ಪುಟ್ಟಿಯ ಮಾವ ನನ್ನ ಕಾಗದಕ್ಕೆ ಉತ್ತರವನ್ನೂ ಬರೆಯಲಿಲ್ಲ. ಬಹುಶಃ ಈ ಸಲವೂ ಪೂಜಾದಿನ ಗಳಲ್ಲಿ ತಂಗಿಯ ಮುಖ ಕಾಣುವ ಸುಯೋಗವಿದ್ದಂತಿಲ್ಲ" ಎಂದ.

ಆಗ ವಿರಾಜಳು ಯಾವುದೊ ಕೆಲಸದಲ್ಲಿ ತೊಡಗಿದ್ದಳು. ಕೆಲಸ ಮಾಡು ಮಾಡುತ್ತಲೆ ಒಂದಾವರ್ತಿ ಮುಖವನ್ನು ಮೇಲೆ ಎತ್ತಿದಳು. ಏನೋ ಹೇಳ ಬೇಕೆಂದಿತ್ತು ಅವಳ ಮನಸ್ಸು. ಆದರೆ ಏನೂ ಹೇಳದೆ ಅಲ್ಲಿಂದ ಎದ್ದು ಹೋದಳು.

ಅಂದು ಮಧ್ಯಾಹ್ನ ಊಟ ಮಾಡುವಾಗ ನೀಲಾಂಬರ ಮೆಲ್ಲಗೆ ಹೇಳಿದ: "ಅವಳ ಹೆಸರು ತೆಗೆದರೂ ಸಾಕು, ನೀನು ಕೆರಳುತ್ತಿ! ನಿಜವಾಗಿ ಅದಕ್ಕೆ ಯಾವ ಕಾರಣವೂ ಇಲ್ಲ. ಅವಳಿಂದೇನಾದರೂ ಅಪರಾಧವಾಗಿದೆಯೆ?"

ಬಳಿಯಲ್ಲಿಯೇ ಕುಳಿತಿದ್ದ ವಿರಾಜಳು ದೃಷ್ಟಿ ಮೇಲಕ್ಕೆತ್ತಿ ಕೇಳಿದಳು: "ನಾನು ಕೆರಳುವೆನೆಂದು ನಿಮಗೆ ಯಾರು ಹೇಳಿದರು?"

"ಯಾರೇಕೆ ಹೇಳಬೇಕು? ತಾನೇ ಗೊತ್ತಾಗುವುದಿಲ್ಲವೆ?"

ವಿರಾಜಳು ಕ್ಷಣ ಹೊತ್ತು ಗಂಡನ ಮುಖವನ್ನೇ ದಿಟ್ಟಿಸಿ–"ಗೊತ್ತಾ-

ದರೆ ಚನ್ನಾಯಿತು” ಎಂದು ಹೋಗತೊಡಗಿದಳು. ನೀಲಾಂಬರ ಅವಳನ್ನು ಕೂಗಿ ಹೇಳಿದ: “ಏನೇ, ನೀನು ಇತ್ತೀಚೆ ಹೀಗೇಕೆ ಆಗುತ್ತಿರುವೆ? ಇದೇನಿದು ಒಮ್ಮೆಲೇ ವಿಚಿತ್ರ ಬದಲಾವಣೆ?” ಎಂದು ಕೇಳಿದ.

ವಿರಾಜಳು ಹೊರಳಿ ನಿಂತು ಗಂಡನ ಮಾತನ್ನು ಲಕ್ಷ್ಯವಿತ್ತು ಕೇಳಿದ ಬಳಿಕ– “ಕಾರಣವಿರುವುದರಿಂದಲೆ ಹೀಗೆ ಬದಲಾವಣೆ ಆಗಬೇಕಾಗುವುದು” ಎಂದು ಅಡುಗೆಮನೆಯಿಂದ ಹೊರಗೆ ಬಂದಳು. ಎರಡು ದಿನಗಳ ಬಳಿಕ ಮಧ್ಯಾಹ್ನ ಮೂರು ಗಂಟೆಯ ಸುಮಾರಿಗೆ ಹೊರಗೆ ದೇವೀ ಮಂದಿರದಲ್ಲಿ ನೀಲಾಂಬರನೊಬ್ಬನೇ ಕುಳಿತು ಗುಣು ಗುಣು .ಎಂದು ಹಾಡುತ್ತಲಿದ್ದ. ವಿರಾಜಳು ಬಂದು ಕೆಲ ಕ್ಷಣ ಅವನ ಹಿಂದೆ ನೀರವವಾಗಿ ನಿಂತಿದ್ದು ಬಳಿಕ ಮುಂದೆ ಬಂದು ನಿಂತಳು.

“ಏನು?”–ಎಂದು ನೀಲಾಂಬರ ಮೊಗವೆತ್ತಿ ಕೇಳಿದ.

ವಿರಾಜಳು ತೀಕ್ಷ್ಣದೃಷ್ಟಿಯಿಂದ ನೋಡುತ್ತ ನಿಂತಳು, ಉತ್ತರವನ್ನೇ ಕೊಡಲಿಲ್ಲ.

ನೀಲಾಂಬರ ನತಮುಖನಾಗುತ್ತಲೆ ವಿರಾಜಳು ಒಗರುದನಿಯಿಂದ– “ಒಂದು ಸಲ ನಿಮ್ಮ ಮುಖ ಮೇಲಕ್ಕೆತ್ತಿ, ನೋಡೋಣ” ಎಂದಳು.

ನೀಲಾಂಬರ ಮುಖವನ್ನೂ ಎತ್ತಲಿಲ್ಲ, ಹೆಂಡತಿಯ ಪ್ರಶ್ನೆಗೆ ಉತ್ತರವನ್ನೂ ಕೊಡಲಿಲ್ಲ; ಮೌನವಾಗಿ ಕುಳಿತುಬಿಟ್ಟ.

ವಿರಾಜಳು ಮೊದಲಿನಂತೆಯೆ ಕಠೋರವಾಣಿಯಿಂದ ಹೇಳಿದಳು: “ನೋಡಿ, ನಿಮ್ಮ ಕಣ್ಣು ಎಷ್ಟು ಕೆಂಪಾಗಿವೆ! ಮತ್ತೆ ಮಾದಕ ಸೇವನೆಗೆ ಪ್ರಾರಂಭಿಸಿದಿರಾ?”

ನೀಲಾಂಬರ ಮೌನ! ಭಯವಿಹ್ವಲನಾಗಿ ಕೆಳಗೆ ಮುಖಮಾಡಿ, ಕಟ್ಟಿಗೆಯ ಗೊಂಬೆಯಂತೆ ಕುಳಿತಿದ್ದ. ಅವನು ಮೊದಲಿನಿಂದಲೂ ವಿರಾಜಳಿಗೆ ಹೆದರುತ್ತಿದ್ದ. ಅಲ್ಲದೆ ಇತ್ತೀಚೆಗೆ ಅವಳು ಸಿಡಿಮದ್ದಿನ ಕುಡಿಕೆಯಂತಾಗಿದ್ದಳು. ಯಾವಾಗ, ಹೇಗೆ ಸಿಡಿಯುವಳು ಎಂಬುದನ್ನೂಹಿಸುವುದೂ ಕಷ್ಟವಾಗಿತ್ತು.

ವಿರಾಜಳು ಕೆಲ ಕ್ಷಣ ಸ್ಥಿರವಾಗಿ ಕುಳಿತು–“ಬಹಳ ಒಳ್ಳೆಯ ಕೆಲಸ! ಭಂಗಿ ತಿಕ್ಕಿ ಚನ್ನಾಗಿ ಸೇದಿ ಬಂ-ಭೋಲಾ ಬಾವಾಜಿಯಂತೆ ಕುಳಿತುಕೊಳ್ಳಲು ಇದು ತಕ್ಕ ಸಮಯ” ಎಂದು ಮೂದಲಿಸಿ ಒಳಗೆ ಹೋದಳು. ಆ ದಿನವೂ ಕಳೆಯಿತು. ಆದರೆ ಮಾರನೆಯ ದಿನ ಕಳೆಯಲು ನೀಲಾಂಬರ

ನಿಂದಾಗಲಿಲ್ಲ. ಆವನು ನಾಚಿಕೆ ಸಂಕೋಚಗಳನ್ನೆಲ್ಲ ತೊರೆದು ಪೀತಾಂಬರ ನನ್ನು ಕರೆಯಿಸಿ–'ಪುಟ್ಟಿಯ ಮಾವನಂತೂ ನನ್ನ ಕಾಗದಕ್ಕೆ ಉತ್ತರವನ್ನೂ ಕೊಡಲಿಲ್ಲ. ನೀನಾದರೂ ಸ್ವಲ್ಪ ಯತ್ನಿಸಿ ನೋಡು. ಹೇಗಾದರೂ ಮಾಡಿ ಪೂಜಾದಿನಗಳಲ್ಲಿ ಎರಡು ದಿನಗಳ ಮಟ್ಟಿಗೆ ನೀನು ತಂಗಿಯನ್ನು ಕರೆತಂದರೆ ತುಂಬ ಉಪಕಾರವಾಗುತ್ತದೆ" ಎಂದ.

ಅಣ್ಣನ ಮುಖವನ್ನೇ ನೋಡುತ್ತ ಪೀತಾಂಬರ–"ನೀನಿರುವ ವರೆಗೆ ನಾನು ಹೇಗೆ ಪ್ರಯತ್ನಮಾಡಲಿ ?" ಎಂದ.

ಪೀತಾಂಬರನ ಈ ವ್ಯಂಗ್ಯ ಮಾತು ಕೇಳಿ ನೀಲಾಂಬರ ಒಳಗೊಳಗೇ ಮುನಿದುಕೊಂಡ. ಆದರೆ ಕೋಪವನ್ನು ಯತ್ನಪೂರ್ವಕವಾಗಿ ಹತ್ತಿಕ್ಕಿ ಹೇಳಿದ: "ಇದೇನು ? ನೀನು ಹೀಗೆ ಮಾತಾಡುವುದು ತರವಲ್ಲ ! ಪುಟ್ಟಿ ನನಗೆ ಹೇಗೆ ತಂಗಿಯೋ ಹಾಗೆ ನಿನಗೂ ತಂಗಿಯೆ. ನಾನು ಈ ಲೋಕದಲ್ಲಿಲ್ಲವೆಂದೇ ತಿಳಿದುಕೋ."

ಪೀತಾಂಬರನೆಂದ : "ಸುಳ್ಳು ಸಂಗತಿಗಳನ್ನು ನಾನು ಯೋಚಿಸಲೂ ಆರೆ. ಮೇಲಾಗಿ ನಿನಗೇ ಮಾರೋಲೆ ಬರೆಯದಿದ್ದವರು ನನಗೆ ಬರೆದಾರೆ ?"

ನೀಲಾಂಬರ ತಮ್ಮನ ಈ ಮಾತನ್ನು ಸಹಿಸಿಕೊಂಡು ಹೇಳಿದ: "ಹಾಗಾದರೆ ನಾನು ಸುಳ್ಳು ಸಂಗತಿಗಳಿಗೆ ಆಸ್ಪದ ಕೊಡುವೆನೆಂದು ನಿನ್ನ ಭಾವನೆಯೆ? ಆಗಲಿ, ಹಾಗೆಯೇ ಭಾವಿಸು. ಈ ವಿಷಯವಾಗಿ ನಿನ್ನೊಡನೆ ನನಗೆ ಚರ್ಚೆ ಬೇಡ. ಆದರೆ ನನ್ನ ಕಾಗದಕ್ಕೆ ಉತ್ತರ ಬಾರದಿರಲು ಕಾರಣವಿಷ್ಟೇ–ಮದುವೆಯ ಕಾಲಕ್ಕೆ ಒಪ್ಪಿದ ಕರಾರುಗಳನ್ನು ನಾನು ಪೂರ್ಣಗೊಳಿಸಲಿಲ್ಲ. ಆ ಬಗೆಗೆ ಸಂಧಾನಕ್ಕಾಗಲಿ, ಆ ಕರಾರುಗಳನ್ನು ಪೂರ್ತಿಗೊಳಿಸಲು ನೆರವು ಪಡೆವುದಕ್ಕಾಗಲಿ ನಿನ್ನನ್ನು ನಾನು ಕರೆಸಿದುದಲ್ಲ. ನನ್ನ ಆದೇಶದಂತೆ ಮಾಡಲು ಸಿದ್ಧನಿರುವೆಯೊ ಇಲ್ಲವೊ ಎಂಬುದನ್ನು ನನಗೆ ಸ್ಪಷ್ಟವಾಗಿ ಹೇಳು."

ತಲೆಯಲ್ಲಾಡಿಸುತ್ತ ಪೀತಾಂಬರನೆಂದ : "ಇಲ್ಲ, ಸಾಧ್ಯವಿಲ್ಲ. ಲಗ್ನ ನಿಶ್ಚಯದ ಮುನ್ನ ಈ ವಿಷಯವಾಗಿ ನನ್ನ ಸಲಹೆ ಕೇಳಲು ಬಂದಿದ್ದೆಯಾ ?"

"ನಾನು ಸಲಹೆ ಕೇಳಲು ಬಂದಿದ್ದರೆ ಏನು ಮಾಡುತ್ತಿದ್ದೆ ?"

"ಒಳ್ಳೆಯ ಸಲಹೆ ಕೊಡುತ್ತಿದ್ದೆ."

ನೀಲಾಂಬರನ ತಲೆಗೆ ಬೆಂಕಿಯಿಟ್ಟಂತಾಯಿತು. ಅವನ ತುಟಿಗಳು ನಡುಗತೊಡಗಿದವು. ಆದರೂ ತನ್ನನ್ನು ಸಾವರಿಸಿಕೊಂಡು–"ಹಾಗಾದರೆ ಈ

ವಿಷಯವಾಗಿ ನೀನು ಏನೂ ಸಹಾಯ ಮಾಡಲಾರೆಯಾ ?" ಎಂದ.

ಪೀತಾಂಬರನೆಂದ: " ಇಲ್ಲ. ಅಲ್ಲದೆ ಅವರು ಪುಟ್ಟಿಗೆ ಮಾವನವರಾದಂತೆ ನನಗೂ ಮಾವನೇ, ನನಗೂ ಹಿರಿಯರೇ. ಪುಟ್ಟಿಯನ್ನು ಕಳುಹುವ ಇಚ್ಛೆ ಯಿಲ್ಲವೆಂದ ಮೇಲೆ ನಾನು ಅವರ ಮನಸ್ಸಿಗೆ ವಿರೋಧವಾಗಿ ನಡೆದುಕೊಳ್ಳಲಾರೆ. ಅಲ್ಲದೆ ಗುರುಹಿರಿಯರಿಗೆ ಒಗ್ಗದ ವಿಷಯವನ್ನು ಅವರಿಚ್ಛೆಗೆ ವಿರೋಧವಾಗಿ ಮಾಡುವುದು ನನ್ನ ಸ್ವಭಾವವೂ ಅಲ್ಲ."

ಪೀತಾಂಬರನ ಮಾತು ಕೇಳಿ, ಚಟ್ಟನೆದ್ದು ನುಚ್ಚುನೂರಾಗುವಂತೆ ಮುಖ ತಿವಿಯಲೆ ಎಂದೆನಿಸಿತು ನೀಲಾಂಬರನಿಗೆ. ಆದರೆ ಅವನು ಹೇಗೋ ಸಾವರಿಸಿ ಕೊಂಡ. ಕೊನೆಗೆ ಎದ್ದು ನಿಂತು–" ನಡೆ, ನನ್ನೆದುರಿನಿಂದ ದೂರ ಸರಿ. ಕೆಲ ಸಕ್ಕೆ ಬಾರದ ಹೆಬಗ " ಎಂದು ಸಿಡುಕಿದ.

ಪೀತಾಂಬರನೂ ಕೋಪಗೊಂಡ : " ಸುಮ್ಮಸುಮ್ಮನೆ ಇಷ್ಟೇಕೆ ರೇಗುವೆ ಅಣ್ಣಾ? ನಾನು ಇಲ್ಲಿಂದ ಹೋಗದಿದ್ದರೆ ಬಲಾತ್ಕಾರದಿಂದ ತಳ್ಳುವೆಯಾ ? "

ನೀಲಾಂಬರ ಬಾಗಿಲ ಕಡೆಗೆ ಬೆರಳುಮಾಡಿ–" ಈ ಇಳಿ ವಯಸ್ಸಿನಲ್ಲಿ ಪೆಟ್ಟು ತಿಂದು ಸಾಯಬಾರದೆಂದಿದ್ದರೆ ನನ್ನೆದುರಿನಿಂದ ಕಣ್ಮರೆಯಾಗು" ಎಂದ.

ಈ ಮಾತಿಗೆ ಪೀತಾಂಬರನೇನೋ ಹೇಳಬೇಕೆಂದಿದ್ದ. ಆದರೆ ನಡುವೆಯೆ ಬಾಯಿಹಾಕಿ ನೀಲಾಂಬರನೆಂದ : " ಎಚ್ಚರಿಕೆ, ಇನ್ನು ನಿನ್ನ ಬಾಯಿಯಿಂದ ಒಂದಕ್ಕರವೂ ಹೊರಬಂದರೆ ಜೋಕೆ ! ಸುಮ್ಮನೆ ಇಲ್ಲಿಂದ ಹೊರಟು ಹೋಗು."

ದೇಹದಾರ್ಢ್ಯದ ವಿಷಯವಾಗಿ ನೀಲಾಂಬರ ಹಳ್ಳಿಯಲ್ಲೆಲ್ಲ ಹೆಸರು ಪಡೆದಿದ್ದ. ಪೀತಾಂಬರ ಹೆದರಿಕೆಯಿಂದ ಒಂದು ಮಾತೂ ಆಡದಾದ; ಮೆಲ್ಲ ಮೆಲ್ಲನೆ ಕೋಣೆಯಿಂದ ಹೊರಬಿದ್ದು ಹೋದ.

ಸೋದರರಲ್ಲಿ ಮಾತಿನ ಕಿಡಿಹಾರುತ್ತಿರುವುದನ್ನು ನೋಡಿ ಮುಂದೆ ಜಗಳಕ್ಕೆ ಮೂಲವಾದೀತೆಂಬ ಶಂಕೆಯಿಂದ ವಿರಾಜಳು ಒಳಗಿನಿಂದ ಬಂದವಳೇ ಗಂಡನ ಕೈಹಿಡಿದು ಒಳಗೆ ಎಳೆದುಕೊಂಡು ಹೋದಳು : "ಛೀ ಛೀ, ಎಲ್ಲವನ್ನು ತಿಳಿದೂ ತಿಳಿದು ತಮ್ಮನೊಂದಿಗೆ ಹೀಗೆ ಏಕೆ ಕಾದಾಡುತ್ತೀರಿ ? " ಎಂದು ಛೀ ಹಾಕಿದಳು.

ನೀಲಾಂಬರನೂ ಒಗರು ದನಿಯಿಂದ ಹೇಳಿದ: " ನಾನೆಲ್ಲ ಬಲ್ಲೆ ವಿರಾಜ್. ಆದರೆ ಅಶಕ್ಯಾಗಿಯೆ ಕೈಕಟ್ಟಿಕೊಂಡು ಸುಮ್ಮನೆ ಕುಳಿತುಕೊಳ್ಳಲೆ?

ಎಲ್ಲವನ್ನೂ ಸಹಿಸಿಕೊಳ್ಳಬಲ್ಲೆ. ಆದರೆ ಈ ಷಂಡತನ ಮಾತ್ರ ನನಗೆಂದಿಗೂ ಒಗ್ಗುವುದಿಲ್ಲ."

ವಿರಾಜಳೆಂದಳು : "ಆದರೆ ನೀವು ಒಬ್ಬರೇ ಅಲ್ಲ ಇರುವವರು. ನಾಳೆ ಕತ್ತುಹಿಡಿದು ಈ ಮನೆಯಿಂದ ಹೊರದೂಡಿದರೆ ನೀವೆಲ್ಲಿ ನಿಲ್ಲುವಿರಿ, ತುಸು ಹೇಳಿ ನೋಡೋಣ ! ನೀವು ಇದನ್ನು ಒಮ್ಮೆಯಾದರೂ ಯೋಚಿಸಿದ್ದೀರಾ? "

ನೀಲಾಂಬರನೆಂದ : "ಇಲ್ಲ, ಯಾರಿಗೆ ಬೇಕೋ ಅವರು ಯೋಚಿಸಲಿ. ವ್ಯರ್ಥವಾಗಿ ಯೋಚಿಸಿ ನಾನೇಕೆ ತಲೆ ಕೆಡಿಸಿಕೊಳ್ಳಲಿ ? "

"ನಿಮ್ಮ ಮಾತೂ ಸರಿಯೆ. ಈ ಸಂಸಾರದ ಎಲ್ಲ ಕೆಲಸ-ಬೊಗಸೆ ಬಿಟ್ಟು ಕೇವಲ ಮೃದಂಗ ಬಾರಿಸುವ, ಮಹಾಭಾರತ ಓದುವ ಕೆಲಸವಿಟ್ಟು ಕೊಂಡವರಿಗೆ ಸಂಸಾರದ ವಿಷಯವಾಗಿ ಯೋಚಿಸುವುದೂ ಕಷ್ಟವೇ ಸರಿ."

ವಿರಾಜಳ ಈ ಮಾತಿನಲ್ಲಿ ಮಾಧುರ್ಯವೂ ಇರಲಿಲ್ಲ, ನೀಲಾಂಬರನ ಕಿವಿಗಳಲ್ಲಿ ಅದು ಸವಿಜೇನನ್ನೂ ಸುರಿಯಲಿಲ್ಲ. ಆದರೂ ಅವನು ಸ್ವಾಭಾವಿಕ ದನಿಯಿಂದಲೇ–"ಉಳಿದೆಲ್ಲವುಗಳಿಗಿಂತ ಈ ಕೆಲಸಗಳಿಗೆ ನಾನು ಹೆಚ್ಚು ಮಹತ್ವ ಕೊಡುತ್ತೇನೆಂಬುದು ನಿಜ. ಅಲ್ಲದೆ ನಿರಂತರವೂ ಚಿಂತಿಸುವುದರಿಂದ ಹಣೆಬರಹ ಅಳಿಸಿಹೋಗುವುದೆ ? " ಎಂದು ಹೇಳಿ ಒಂದಾವರ್ತಿ ಹಣೆಯನ್ನು ಮುಟ್ಟಿಕೊಳ್ಳುತ್ತ ಇನ್ನೂ ಮುಂದುವರಿದ: "ಸ್ವಲ್ಪ ಯೋಚಿಸಿ ನೋಡು ವಿರಾಜ್, ಭಗವಂತ ಮೊದಲೇ ಇಲ್ಲಿ ಬರೆದುಬಿಟ್ಟಿರುತ್ತಾನೆ. ಆದುದರಿಂದಲೆ ಎಷ್ಟೊ ರಾಜ-ಮಹಾರಾಜರಿಗೂ ಗಿಡದಡಿಯಲ್ಲಿ ಒರಗಿ ದಿನಗಳೆಯುವ ಸಂದರ್ಭ ಬಂದು ಹೋಗಿವೆ. ನಾನಂತೂ ಹೇಳಿ ಕೇಳಿ ಕ್ಷುದ್ರವ್ಯಕ್ತಿ."

ಕೋಪದಿಂದ ಒಳಗೇ ಕುದಿಯುತ್ತಿರುವ ವಿರಾಜಳು–"ಈ ಎಲ್ಲ ಮಾತುಗಳನ್ನು ಆಡುವುದೇನೋ ಸುಲಭ. ಆದರೆ ಸಂದರ್ಭ ಬಂದಾಗ ಅದರಂತೆ ನಡೆವುದು ಸುಲಭವಲ್ಲ. ಮೇಲಾಗಿ ನೀವೋ, ಗಿಡದಡಿಯಲ್ಲಿಯೆ ವಾಸಿಸಿ ದಿನ ಕಳೆಯಬಹುದು. ಆದರೆ ನನ್ನಿಂದ ಅದು ಸಾಧ್ಯವೆ? ನಾನು ಎಷ್ಟೆಂದರೂ ಹೆಣ್ಣು ಹೆಂಗುಸು. ಮಾನ-ಮರ್ಯಾದೆಯನ್ನು ಕುರಿತು ನಾನು ಯೋಚಿಸಲೇಬೇಕು. ಗುಣಗಾನ ಮಾಡಿಯೆ ಆಗಲಿ, ಸೇವೆ ಮಾಡಿಯೆ ಆಗಲಿ, ದಿನಗಳನ್ನು ದೂಡಲು ನನಗೊಂದು ಆಸರೆ ಬೇಕೇಬೇಕು. ನಿಮ್ಮ ತಮ್ಮನ ಗುಣಗಾನ ನಿಮ್ಮಿಂದ ಆಗದಿದ್ದರೆ ಬಿಟ್ಟುಬಿಡಿ. ಆದರೆ ಅವರ ಕೈಕಾಲು ಹಿಡಿದುಕೊಳ್ಳುವ ಸಂದರ್ಭ ತಂದುಕೊಳ್ಳದಂತೆ ನೀವು ವರ್ತಿಸಿದರೆ ಸಾಕು. ಅಂಥ ಅಪರಾಧಮಾಡಿ ಎಲ್ಲ

ವನ್ನೂ ಮಣ್ಣುಗೂಡಿಸಬೇಡಿ" ಎಂದು ಕಂಬನಿಗಳನ್ನು ಅದುಮಿಕೊಳ್ಳುತ್ತ ದ್ರುತಗತಿಯಿಂದ ಕೋಣೆಯಿಂದ ಹೊರಬಿದ್ದಳು.

ಈ ಮೊದಲೂ ಅನೇಕ ಸಲ ವಿರಾಜ್-ನೀಲಾಂಬರರ ನಡುವೆ ತೀಕ್ಷ್ಣ ವಾಗ್ಯುದ್ಧಗಳಾಗಿದ್ದವು, ವಾದ-ವಿವಾದಗಳೂ ಆಗಿದ್ದವು. ನೀಲಾಂಬರ ಆ ಘಟನೆಗಳನ್ನು ಮರೆತಿರಲಿಲ್ಲ. ಆದರೆ ಇಂದು ಜಗಳ ಚರ್ಚೆ ಯಾವುದೂ ಆಗ ಲಿಲ್ಲ. ವಿರಾಜಳ ಇಂದಿನ ಮೂರ್ತಿ ನೀಲಾಂಬರನಿಗೆ ಅತ್ಯಂತ ಹೊಸ ಬಗೆಯ ದಾಗಿ ತೋರಿತು. ಹೆಂಡತಿಯ ಈ ರೀತಿಯ ಮುಖವನ್ನು ಅವನು ಈ ವರೆಗೆ ಒಮ್ಮೆಯೂ ಕಂಡಿರಲಿಲ್ಲ. ಆದ್ದರಿಂದ ಪೆಚ್ಚನಂತಾಗಿ ಸುಮ್ಮನೆ ನಿಂತುಕೊಂಡ.

ಕೆಲ ಕ್ಷಣ ಸಂದ ಬಳಿಕ ಪುನಃ ಕೋಣೆಯನ್ನು ಪ್ರವೇಶಿಸಿ ವಿರಾಜ ಳೆಂದಳು: "ಹೀಗೇಕೆ ಬೆಪ್ಪಾಗಿ ನಿಂತುಕೊಂಡಿರುವಿರಿ? ಮಧ್ಯಾಹ್ನವಾಗಿ ಹೋಯಿತು. ಸ್ನಾನ ಸಂಧ್ಯಾವಂದನೆ ಮುಗಿಸಿಕೊಂಡು ಬೇಗ ಊಟಕ್ಕೇಳಿ ಎಷ್ಟು ದಿನ ಸಾಧ್ಯವೋ ಅಷ್ಟು ದಿನವಾದರೂ ತಿನ್ನೋಣ."

ತನ್ನ ಈ ನುಡಿಗಳಿಂದ ಗಂಡನ ಎದೆಯಲ್ಲಿ ಮತ್ತೊಂದು ಬಾಣ ಚುಚ್ಚಿ ವಿರಾಜಳು ಹೊರಟುಹೋದಳು. ಕೋಣೆಯ ಗೋಡೆಯ ಮೇಲೆ ರಾಧಾ-ಕೃಷ್ಣರ ತೈಲಚಿತ್ರವೊಂದಿತ್ತು. ಅದನ್ನು ನೋಡುತ್ತಲೆ ನೀಲಾಂಬರನಿಗೆ ಒಮ್ಮೆಲೇ ಅಳು ಉಕ್ಕಿಬಂತು. ತಾನು ಈ ರೀತಿ ಅಳುವುದನ್ನು ಯಾರಾ ದರೂ ಫಕ್ಕನೆ ಕಂಡಾರೆಂಬ ಭಯದಿಂದ ಕಣ್ಣುಗಳನ್ನೊರಸಿ ಅವನು ತಟ್ಟನೆ ಹೊರಟುಹೋದ.

ಮತ್ತೆ ವಿರಾಜ್?–ಅವಳಿಗೆ ಆ ದಿನ ಬಹುಶಃ ಅಳುವುದರಲ್ಲಿಯೆ ಕಳೆ ಯಿತು. ಅವಳ ಕಣ್ಣುಗಳಿಂದ ಕಂಬನಿ ಒಂದೇ ಸಮನೆ ಇಳಿಯುತ್ತಿತ್ತು. ತನ್ನ ಗಂಡ ಕೊಂಚ ಖಿನ್ನನಾದಾಗಲೂ ಅವಳು ನೊಂದುಕೊಳ್ಳುತ್ತಿದ್ದಳು. ಆದರೆ ಅದೇ ಗಂಡನಿಗೆ ಇಂದು ತನ್ನ ಬಾಯಿಯಿಂದಲೆ ಅತ್ಯಂತ ಕಟುಮಾತುಗಳನ್ನು ಆಡಿದಾಗಿನಿಂದ ಅವಳ ದುಃಖ ದುಮ್ಮಾನಗಳಿಗೆ ಮೇರೆ ಉಳಿಯಲಿಲ್ಲ. ಇಡಿಯ ದಿನ ಅವಳು ತುಟಿಗೆ ನೀರು ಸಹ ತಗಲಿಸಲಿಲ್ಲ. ಅಳುತ್ತಳುತ್ತಲೇ ಕೊಠಡಿ ಯಿಂದ ಕೊಠಡಿಗೆ ಸುಮ್ಮನೆ ಅಲೆಯುತ್ತಿದ್ದಳು. ಸಾಯಂಕಾಲವಾದ ಬಳಿಕ ತುಳಸೀಕಟ್ಟೆಯ ಮೇಲೆ ದೀಪವಿರಿಸಿ ಕೊರಳಿಗೆ ಸೆರಗು ಸುತ್ತಿ ಪ್ರಣಾಮ ಮಾಡಲು ಬಾಗಿದಾಗ ಅಳು ಉಕ್ಕಿಬಂದು ಕಂಬನಿ ಕೋಡಿಯಾಗಿ ಹರಿಯಿತು. ಮನೆಯಲ್ಲಿ ಆಗ ಯಾರೂ ಇರಲಿಲ್ಲ. ಎಲ್ಲ ಕಡೆಯೂ ನೀರವತೆ ಮುತ್ತಿತ್ತು.

ನೀಲಾಂಬರನೂ ಇರಲಿಲ್ಲ. ಮಧ್ಯಾಹ್ನ ಊಟಕ್ಕಾಗಿ ತಟ್ಟೆಯ ಮುಂದೆ ಕುಳಿತುಕೊಳ್ಳುವ ಶಾಸ್ತ್ರಮಾಡಿ ಮನೆಯಿಂದ ಹೊರಬಿದ್ದು ಹೋದವನು ಈ ವರೆಗೂ ಮರಳಿ ಬಂದಿರಲಿಲ್ಲ.

ಇಂದು ವಿರಾಜಳ ಬುದ್ಧಿ ಸ್ವಲ್ಪವೂ ಕೆಲಸ ಮಾಡುತ್ತಿಲ್ಲ. ತಾನೇನು ಮಾಡಬೇಕು, ಎಲ್ಲಿಗೆ ಹೋಗಬೇಕು, ಯಾರಿಗೆ ಏನು ಹೇಳಬೇಕು—ಯಾವುದೂ ಅವಳಿಗೆ ಹೊಳೆಯಲಿಲ್ಲ. ಬಳಿಕ ಉಪಾಯಗಾಣದೆ ಕಗ್ಗತ್ತಲೆಯ ಅದೇ ಅಂಗಳದ ಒಂದು ಬದಿಗೆ ಬೋರಲು ಬಿದ್ದು ಬಿಟ್ಟೂಬಿಡದೆ ಅಳತೊಡಗಿದಳು. ಅಳುತ್ತಿದ್ದಂತೆಯೇ ಅವಳು ಬೇಡಿಕೊಳ್ಳತೊಡಗಿದಳು : "ಹೇ ಅಂತರ್ಯಾಮಿ, ಒಂದು ಸಲ ಮುಖವೆತ್ತಿ ನಮ್ಮನ್ನು ನೋಡು ! ಹೇ ಭಗವಂತ, ದೋಷವನ್ನಾಗಲಿ ಪಾಪವನ್ನಾಗಲಿ ಮಾಡಲರಿಯದ ನನ್ನ ಪತಿಗೆ ದುಃಖ ಕೊಡಬೇಡ. ಇನ್ನು ನಾನು ಸಹಿಸಲಾರೆ."

ಆಗ ರಾತ್ರಿ ಒಂಬತ್ತು ಗಂಟೆಯಾಗಿರಬೇಕು. ನೀಲಾಂಬರ ಮರಳಿ ಬಂದವನು ಸುಮ್ಮನೆ ಚಾಪೆಯ ಮೇಲೆ ಮಲಗಿದ. ಗಂಡ ಬಂದ ನಂತರವೇ ವಿರಾಜಳು ಕೋಣೆಯನ್ನು ಪ್ರವೇಶಿಸಿ ಅವನ ಅಡಿಯ ಬಳಿ ಕುಳಿತಳು. ನೀಲಾಂಬರನು ಮಾತನಾಡಲೂ ಇಲ್ಲ, ಅವಳನ್ನು ಕಣ್ಣೆತ್ತಿ ನೋಡಲೂ ಇಲ್ಲ.

ಸ್ವಲ್ಪ ಹೊತ್ತಿನ ಮೇಲೆ ವಿರಾಜಳು ಗಂಡನ ಪಾದಗಳ ಮೇಲೆ ಕೈಯಿಟ್ಟಳು. ನೀಲಾಂಬರ ತಟ್ಟನೆ ತನ್ನ ಕಾಲುಗಳನ್ನೆಳೆದುಕೊಂಡ. ಮತ್ತೆ ಐದು ನಿಮಿಷ ನೀರವತೆಯಿಂದ ಕಳೆಯಿತು. ಲುಪ್ತವಾಗಿ ಹೋಗಿದ್ದ ವಿರಾಜಳ ಅಭಿಮಾನ ಮತ್ತೆ ಮೆಲ್ಲಗೆ ಜಾಗ್ರತವಾಗತೊಡಗಿತು. ಆದರೂ ಅವಳು ಮೃದು ಧನಿಯಿಂದ—"ಏಳಿ, ಸ್ವಲ್ಪ ಊಟ ಮಾಡಿ" ಎಂದಳು.

ನೀಲಾಂಬರ ಸುಮ್ಮನೆ ಇದ್ದ. "ಇಡಿಯ ದಿನ ನೀವೇನೂ ತಿಂದಿಲ್ಲ. ಯಾರ ಮೇಲೆ ಕೋಪಗೊಂಡು ಹೀಗೆ ಮಾಡುತ್ತಿದ್ದೀರಿ?" ಎಂದಳು ವಿರಾಜ್.

ಇದಕ್ಕೂ ನೀಲಾಂಬರ ಉತ್ತರವೀಯಲಿಲ್ಲ.

ಆಗ ವಿರಾಜಳೆಂದಳು : "ಮಾತನ್ನೇಕೆ ಆಡುವುದಿಲ್ಲ? ಸ್ವಲ್ಪ ಹೇಳಬಾರದೆ?"

ನೀಲಾಂಬರ ಉದಾಸೀನನಾಗಿ—"ಹೇಳುವುದರಿಂದೇನು ಲಾಭ ?" ಎಂದು ಕೇಳಿದ.

"ಆದರೂ ನಾನು ತಿಳಿದುಕೊಳ್ಳಬೇಕಾಗಿದೆ."

ನೀಲಾಂಬರ ಆಗ ಒಮ್ಮೆಲೇ ಎದ್ದು ಕುಳಿತ. ತನ್ನ ಕಣ್ಣುಗಳೆರಡನ್ನೂ ವಿರಾಜಳ ಮುಖದ ಕಡೆಗೆ ತೀಕ್ಷ್ಣ ಶಲ್ಯದಂತೆ ನಾಟಿಸಿ—"ನಾನು ನಿನ್ನ ಯಜಮಾನ ವಿರಾಜ್, ನಿನ್ನ ಆಟದ ಗೊಂಬೆಯಲ್ಲ !" ಎಂದ.

ಗಂಡನ ಕಣ್ಣು ನೋಡಿ, ದನಿಯಾಲಿಸಿ, ವಿರಾಜಳು ಕಕ್ಕಾವಿಕ್ಕಿಯಾದಳು; ಚಕಿತಳಾಗಿ ಗಂಡನನ್ನು ಮೂಕಳಂತೆ ದಿಟ್ಟಿಸುತ್ತ ನಿಂತಳು.

ಗಂಡನ ಈ ರೀತಿಯ ಆರ್ತವಾಣಿ, ಈ ರೀತಿಯ ಗಂಭೀರ ದನಿ, ಅವಳು ಈ ಮೊದಲು ಒಮ್ಮೆಯೂ ಕೇಳಿರಲಿಲ್ಲ.

## ೭

ಮಗ್ರಾರ್‌ಗಂಜಿನಲ್ಲಿ ಹಿತ್ತಾಳೆ ಪಾತ್ರೆ ಮಾಡುವ ಅನೇಕ ಕಾರಖಾನೆಗಳಿದ್ದವು. ಸಪ್ತಗ್ರಾಮದಲ್ಲಿಯ ಮಾದಿಗರ ಹೆಂಗುಸರೆಲ್ಲರೂ ಪಾತ್ರೆಯ ಮಣ್ಣಿನ್ನ ಪಡಿಯಚ್ಚುಗಳನ್ನು ಮಾಡಿ ಆ ಕಾರಖಾನೆಗಳಿಗೆ ಮಾರುತ್ತಿದ್ದರು. ಇತ್ತ ವಿರಾಜಳಿಗೆ ಮನೆಯ ವೆಚ್ಚ ನಡೆಸಲು ಯಾವ ಉಪಾಯವೂ ತೋರಲಿಲ್ಲ. ಮೇಲಾಗಿ, ಹಣದ ಅಭಾವದಿಂದ ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಆಗ ಅವಳು ಒಬ್ಬ ಮಾದಿಗರ ಹೆಣ್ಣನ್ನು ಕರೆಸಿ ಅವಳಿಂದ ಮಣ್ಣಿನ ಪಡಿಯಚ್ಚು ಮಾಡಲು ಕಲಿತಳು. ವಿರಾಜಳು ಬಹು ಚುರುಕುಬುದ್ಧಿಯವಳು. ಅಲ್ಲದೆ ಅವಳಲ್ಲಿ ಅಗಾಧ ಕಾರ್ಯಕುಶಲತೆಯೂ ಇದ್ದಿತು. ಆದುದರಿಂದ ಅವಳು ಎರಡೇ ದಿನಗಳಲ್ಲಿ ಪಡಿಯಚ್ಚು ಮಾಡಲು ಕಲಿತಳಲ್ಲದೆ ಅತಿ ಉತ್ತಮ ಮಟ್ಟದ ಒಡವೆಗಳನ್ನು ಸಿದ್ಧಪಡಿಸತೊಡಗಿದಳು. ಅನೇಕ ಜನ ವ್ಯಾಪಾರಸ್ಥರು ಅವಳಲ್ಲಿಗೆ ಬಂದು ತಕ್ಕ ಬೆಲೆ ಕೊಟ್ಟು ಕೊಂಡುಕೊಳ್ಳುತಿದ್ದರು. ಹೀಗೆ ಅವಳು ದಿನಂಪ್ರತಿ ೮–೧೦ ಆಣೆ ಗಳಿಸುತ್ತಿದ್ದಳು. ಆದರೆ ನಾಚಿಕೆಯಿಂದ ಈ ವಿಷಯವನ್ನು ಗಂಡನಿಗೆ ತಿಳಿಸಲಿಲ್ಲ. ರಾತ್ರಿಯ ಬಹುಭಾಗ ಸಂದಬಳಿಕ, ಗಂಡ ನಿದ್ದೆಹೋದಾಗ ಅವಳು ಚಾಪೆಯಿಂದ ಸದ್ದಿಲ್ಲದೆ ಎದ್ದು ಪಡಿಯಚ್ಚು ಮಾಡುತಿದ್ದಳು. ಅಂದು ರಾತ್ರಿ ಸಹ ಅವಳು ನಿತ್ಯದಂತೆ ಎದ್ದು ಪಡಿಯಚ್ಚು ಮಾಡತೊಡಗಿದಳು. ಆದರೆ ಅವಳು ಮೊದಲೇ ಬಹಳ ಆಯಾಸಗೊಂಡಿದ್ದರಿಂದ ಅಚ್ಚು ಮಾಡುಮಾಡುತ್ತಲೆ ನಿದ್ದೆಹೋದಳು.

ಅಕಸ್ಮಾತ್ತಾಗಿ ನೀಲಾಂಬರ ನಿದ್ದೆಯಿಂದ ಎಚ್ಚತ್ತ. ಹಾಸಿಗೆಯ ಮೇಲೆ ಯಾರೂ ಇಲ್ಲದಿದ್ದುದನ್ನು ಕಂಡು ಅವನು ಎದ್ದು ಹೊರಗೆ ಬಂದ.

ವಿರಾಜಳು ನೆಲದ ಮೇಲೆಯೇ ನಿದ್ದೆಹೋಗಿದ್ದಳು. ಅವಳ ಎರಡೂ ಕೈಗಳಿಗೆ ಅರಿಲು ಮೆತ್ತಿಕೊಂಡಿತ್ತು. ಅವಳು ಮಾಡಿಟ್ಟಿದ್ದ ಪಡಿಯಚ್ಚುಗಳೂ ಬಳಿಯಲ್ಲಿಯೇ ಬಿದ್ದಿದ್ದವು. ಅವಳ ದೇಹ ಮಂಜಿನಿಂದ ತೊಯ್ದಿತ್ತು.

ಮೂರು ದಿನಗಳಿಂದ ಗಂಡಹೆಂಡಿರಲ್ಲಿ ಮಾತುಕತೆ ಇರಲಿಲ್ಲ. ಹೆಂಡತಿಯ ಅವಸ್ಥೆ ನೋಡಿ ನೀಲಾಂಬರ ಸಂತಾಪಪಟ್ಟ. ಅವನ ಕಣ್ಣುಗಳಲ್ಲಿ ಬಿಸಿ ಕಂಬನಿಗಳು ತುಂಬಿದವು. ಅವನು ತಟ್ಟನೆ ಕುಳಿತು, ನೆಲದ ಮೇಲೆ ನಿದ್ದೆ ಹೋಗಿದ್ದ ಹೆಂಡತಿಯ ತಲೆಯನ್ನು ಸಾವಧಾನವಾಗಿ ತನ್ನ ತೊಡೆಯ ಮೇಲಿಟ್ಟುಕೊಂಡ. ವಿರಾಜಳಿಗೆ ಇದಾವುದರ ಅರಿವೂ ಇರಲಿಲ್ಲ. ಅವಳು ಒಂದು ಸಲ ಅತ್ತಿತ್ತ ಹೊರಳಾಡಿ ಮತ್ತೆ ಕಾಲುಗಳನ್ನು ನೀಡಿ ಸುಖವಾಗಿ ಒರಗಿದಳು. ನೀಲಾಂಬರನು ಎಡಗೈಯಿಂದ ಕಂಬನಿಗಳನ್ನು ಒರಸಿಕೊಂಡ. ಹತ್ತಿರವೇ ಮಿಣಿಮಿಣಿಯಾಗಿ ಉರಿಯುತ್ತಿದ್ದ ದೀವಿಗೆಯನ್ನು ದೊಡ್ಡದುಮಾಡಿ ಹೆಂಡತಿಯನ್ನು ನೆಟ್ಟ ನೋಟದಿಂದ ನೋಡತೊಡಗಿದ. ಅವನು ಒಮ್ಮೆಲೆ ಮನದಲ್ಲಿ— "ಇದೇನಿದು ? ಇಷ್ಟು ದಿನಗಳ ವರೆಗೆ ಇದು ನನ್ನ ದೃಷ್ಟಿಗೆ ಬಿದ್ದಿರಲಿಲ್ಲವಲ್ಲ ? ವಿರಾಜಳ ಕಣ್ಣುಗಳ ಸುತ್ತಲೂ ಇದೆಂತಹ ಕಪ್ಪು ! ಹುಬ್ಬುಗಳ ಮೇಲೆ, ಸುಂದರವಾದ ಮಾಟವಾದ ಹಣೆಯ ಮೇಲೆ, ಭಾರವಾದ ಚಿಂತೆಯ ಗೆರೆಗಳು ಎಷ್ಟು ಸ್ಪಷ್ಟವಾಗಿ ಎದ್ದುಕಾಣುತ್ತಿವೆಯಲ್ಲ ?" ಎಂದುಕೊಂಡ. ಹೆಂಡತಿಯ ಈ ಅವಸ್ಥೆಯಿಂದ ನೀಲಾಂಬರನ ಅಂತರಾಳವು ಅವ್ಯಕ್ತವಾದ ಅಸೀಮ ವೇದನೆಯಿಂದ ಮಥಿಸಿದಂತಾಯಿತು. ಸ್ವತಃ ತನ್ನನ್ನು ಸಾವರಿಸಿಕೊಳ್ಳುವಷ್ಟು ಶಕ್ತಿಯೂ ಅವನಲ್ಲಿ ಉಳಿಯಲಿಲ್ಲ. ಕಣ್ಣಿನಿಂದ ದೊಡ್ಡ ಕಂಬನಿಯೊಂದು ಜಾರಿ ವಿರಾಜಳ ಮುಚ್ಚಿದ ಕಣ್ಣುರೆಪ್ಪೆಯ ಮೇಲೆಯೆ ಬಿದ್ದಿತು. ಆಗ ಅವಳು ಚಟ್ಟನೆ ಎಚ್ಚತ್ತು ಕಣ್ತೆರೆದಳು. ಕೆಲ ಕ್ಷಣ ಗಂಡನ ಮುಖವನ್ನೇ ಮೌನವಾಗಿ ನೋಡಿ ಕೈಕೊಡಹಿ, ಮೈಮುರಿದು, ಪುನಃ ಗಂಡನ ತೊಡೆಯಲ್ಲಿ ಮುಖಮುಚ್ಚಿ ನಿದ್ದೆ ಹೋದಳು. ನೀಲಾಂಬರ ಹಾಗೆಯೇ ಕುಳಿತು ಅಳತೊಡಗಿದ.

ಹೀಗೆ ಬಹಳ ಹೊತ್ತು ಸಂದುಹೋಯಿತು. ದಂಪತಿಗಳಲ್ಲಿ ಯಾರ ಬಾಯಿಯಿಂದಲೂ ಮಾತು ಹೊರಬೀಳಲಿಲ್ಲ. ರಾತ್ರಿಯೆಲ್ಲವೂ ಕಳೆದು ಪೂರ್ವ ದಿಗಂತವು ಶುಭ್ರವಾದಾಗ ನೀಲಾಂಬರ ತನ್ನನ್ನು ಸಾವರಿಸಿಕೊಂಡ. ಹೆಂಡತಿಯ

ತಲೆಯ ಮೇಲೆ ಕೈಯಿಟ್ಟು ಸ್ನೇಹದಿಂದ– " ಈ ಚಳಿಯಲ್ಲಿ ಬಿದ್ದಿರಬೇಡ ವಿರಾಜ್, ಒಳಗೆ ನಡೆ " ಎಂದ.

" ನಡೆಯಿರಿ. "

ವಿರಾಜಳು ಎದ್ದುನಿಂತು ಗಂಡನ ಕೈಹಿಡಿದು ಒಳಗೆ ಬಂದು ಮಲಗಿದಳು.

ಬೆಳಗಾದ ಮೇಲೆ ನೀಲಾಂಬರ–" ವಿರಾಜ್, ನೀನು ಕೆಲ ದಿನಗಳ ಮಟ್ಟಿಗೆ ಸೋದರಮಾವನ ಮನೆಗೆ ಹೋಗಿ ಬಾ. ನಾನೂ ಕೆಲವು ದಿನ ಕಲ್ಕತ್ತೆಗೆ ಹೋಗುವ ಯೋಚನೆಯಲ್ಲಿದ್ದೇನೆ " ಎಂದ.

" ಕಲ್ಕತ್ತೆಗೆ ಹೋಗಿ ಏನು ಮಾಡುವಿರಿ ? "

" ಅಲ್ಲಿ ವ್ಯಾಪಾರ ಉದ್ಯೋಗಗಳಿಗೆ ಕೊರತೆಯಿಲ್ಲ. ಯಾವುದೊಂದು ಉದ್ಯೋಗದಲ್ಲಿ ತೊಡಗುತ್ತೇನೆ. ಆದ್ದರಿಂದ ನನ್ನ ಮಾತನ್ನಿಷ್ಟು ಕೇಳು. ಕೆಲ ದಿನಗಳ ಮಟ್ಟಿಗೆ ನಿನ್ನ ಮಾವನ ಬಳಿ ಹೋಗಿರು. "

" ನನ್ನನ್ನು ಎಷ್ಟು ದಿನಗಳಲ್ಲಿ ಕರೆದುಕೊಂಡು ಹೋಗಲು ಬರುವಿರಿ ? "

" ನಿನ್ನಾಣೆ, ಆರು ತಿಂಗಳಲ್ಲಿ ನಿನ್ನನ್ನು ಖಂಡಿತವಾಗಿ ಕರೆದೊಯ್ಯುತ್ತೇನೆ" ಎಂದ ನೀಲಾಂಬರ.

" ಹಾಗೆಯೆ ಆಗಲಿ " ಎಂದು ವಿರಾಜಳು ಸಮ್ಮತಿಸಿದಳು.

ನಾಲ್ಕೈದು ದಿನಗಳ ಮೇಲೆ ಒಂದು ಎತ್ತಿನ ಬಂಡಿ ಸಿದ್ಧವಾಗಿ ಬಂತು. ವಿರಾಜಳ ಸೋದರಮಾವನ ಮನೆ ಸಪ್ತಗ್ರಾಮದಿಂದ ೫–೬ ಹರದಾರಿ ದೂರ ವಿತ್ತು. ಅಲ್ಲಿಗೆ ಹೋಗಲು ಎತ್ತಿನ ಬಂಡಿಯೇ ಗತಿ. ಬಂಡಿಯಂತೂ ಅಣಿ ಯಾಗಿತ್ತು. ವಿರಾಜಳ ಮಾತುಕತೆಯಿಂದ ಅವಳು ಈ ಪಯಣಕ್ಕೆ ಸಿದ್ಧಳಿದ್ದಂತೆ ತೋರಲಿಲ್ಲ.

ಕಳವಳಗೊಂಡ ನೀಲಾಂಬರ– " ಹೊತ್ತು ಕಳೆಯುವುದರಲ್ಲಿ ಹುರುಳಿಲ್ಲ. ಬೇಗನೆ ಗಂಟುಮೂಟೆಗಳನ್ನು ಕಟ್ಟಿ ಸಿದ್ಧಳಾಗು" ಎಂದು ವಿರಾಜಳಿಗೆ ಆಗ್ರಹ ಪಡಿಸಿದ.

ವಿರಾಜಳು ತನ್ನ ನಿತ್ಯದ ಕೆಲಸಗಳಲ್ಲೇ ತೊಡಗಿದ್ದಳು. ಅವಳು " ಇಂದು ನಾನು ಹೋಗಲಾರೆ. ನನ್ನ ಮೈಯಲ್ಲಿ ಚನ್ನಾಗಿಲ್ಲ " ಎಂದುಬಿಟ್ಟಳು.

ನೀಲಾಂಬರ ಸೋಜಿಗಗೊಂಡು–" ಏನೆಂದೆ? ಮೈಯಲ್ಲಿ ಚನ್ನಾಗಿಲ್ಲವೆ !" ಎಂದ.

" ಹುಂ, ಚನ್ನಾಗಿಲ್ಲ. ಈ ಹೊತ್ತು ನನ್ನ ಮೈಯೆಲ್ಲ ನೋಯಿಸುತ್ತಿದೆ "

ಎನ್ನುತ್ತ ವಿರಾಜಳು ಸೊಂಟದ ಮೇಲೆ ಹಿತ್ತಾಳೆ ಕೊಡವನ್ನಿಟ್ಟುಕೊಂಡು ನೀರು ತರಲು ಹೊಳೆಗೆ ಹೋದಳು.

ಎತ್ತಿನ ಬಂಡಿ ಮರಳಿ ಹೋಯಿತು. ರಾತ್ರಿ ಗಂಡಹೆಂಡಿರಲ್ಲಿ ಬಹಳಷ್ಟು ಮಾತುಕತೆ ಬುದ್ಧಿವಾದ ನಡೆದ ಬಳಿಕ, ಎರಡು ದಿನಗಳ ತರುವಾಯ ಮಾವನ ಮನೆಗೆ ಹೋಗಲು ವಿರಾಜಳು ಒಪ್ಪಿದಳು. ಮೂರನೆಯ ದಿನ ಎತ್ತಿನ ಬಂಡಿ ಪುನಃ ಮನೆಯ ಬಾಗಿಲೆದುರಿಗೆ ಬಂದು ನಿಂತಿತು.

ಪ್ರಯಾಣದ ಪೂರ್ವಸಿದ್ಧತೆ ಮಾಡಲು ವಿರಾಜಳಿಗೆ ನೀಲಾಂಬರ ಹೇಳಿದ. ಗಂಡನ ಈ ಮಾತು ಕಿವಿಗೆ ಬಿದ್ದುದೇ ತಡ–" ಇಲ್ಲ, ನಾನೆಂದಿಗೂ ಹೋಗುವುದಿಲ್ಲ " ಎಂದು ಸ್ಪಷ್ಟವಾಗಿ ನುಡಿದಳು ವಿರಾಜ್.

ನೀಲಾಂಬರ ಮತ್ತಿಷ್ಟು ಅಚ್ಚರಿಯಿಂದ : " ಏಕೆ, ನೀನೇಕೆ ಹೋಗುವುದಿಲ್ಲ ? " ಎಂದು ಕೇಳಿದ.

ವಿರಾಜಳು ಅಳತೊಡಗಿದಳು. ಅವಳು ಕಂಬನಿ ಮಿಡಿಯುತ್ತ–" ಇಲ್ಲ ನಾನು ಹೋಗುವುದಿಲ್ಲ. ನನ್ನಲ್ಲಿ ಆಭರಣಗಳಿಲ್ಲ, ಬಟ್ಟೆಬರೆಗಳಿಲ್ಲ. ತಿರುಕಿಯಂತೆ ದೀನದರಿದ್ರಳಂತೆ ನಾನೆಂದಿಗೂ ಅಲ್ಲಿ ಕಾಲಿಡಲಾರೆ " ಎಂದಳು.

ನೀಲಾಂಬರ ಕಡುಕೋಪದಿಂದ ಬುಸುಗುಟ್ಟಿದ : " ಇಂದು ನಿನ್ನಲ್ಲಿ ಆಭರಣಗಳಿಲ್ಲವೆಂಬುದು ನಿಜ. ಆದರೆ ಇದ್ದಾಗ ಒಂದು ದಿನವಾದರೂ ನಿನ್ನ ದೃಷ್ಟಿ ಅವುಗಳ ಕಡೆಗಿರಲಿಲ್ಲವಲ್ಲ ! "

ವಿರಾಜಳು ಮೌನದಿಂದ ತನ್ನ ಕಣ್ಣುಗಳನ್ನೊರಸತೊಡಗಿದಳು.

ನೀಲಾಂಬರ ಪುನಃ–" ಈ ನೆವನಗಳನ್ನೇಕೆ ಒಡ್ಡುವೆಯೆಂದು ಈಗ ನನಗೆ ಚನ್ನಾಗಿ ತಿಳಿಯಿತು. ನನಗೆ ಮೊದಲಿನಿಂದಲೂ ಸಂದೇಹವಿದ್ದೇ ಇತ್ತು. ಆದರೂ ದುಃಖ ದುಮ್ಮಾನಗಳನ್ನು ಸಹಿಸಿದ ಮೇಲಾದರೂ ನಿನ್ನ ಬುದ್ಧಿ ಸ್ಥಿಮಿತಕ್ಕೆ ಬರುವುದೆಂದು ಆಗ ಎಣಿಸಿದ್ದೆ. ಆದರೆ ಹಾಗೇನೂ ಆಗಲಿಲ್ಲ. ಒಳ್ಳೆಯದು ! ನೀನೂ ಒಣಗಿ ಒಣಗಿ ಸಾಯು. ನನ್ನನ್ನೂ ಸಾಯಲು ಬಿಡು " ಎಂದು ಸಿಡುಕುತ್ತ ಎತ್ತಿನ ಬಂಡಿಯನ್ನು ಮರಳಿ ಕಳಿಸಿದ.

ಮಧ್ಯಾಹ್ನ ನೀಲಾಂಬರ ಕೋಣೆಯಲ್ಲಿ ಮಲಗಿದ್ದ. ಪೀತಾಂಬರನು ಕೆಲಸಕ್ಕೆ ಹೋಗಿದ್ದ. ಮೋಹಿನಿ ತಟ್ಟೆಯ ಸಂದಿನಿಂದ ಕರೆದು ಮೆಲುದನಿಯಿಂದ–" ಕ್ಷಮಿಸು ಅಕ್ಕಾ, ನಿನಗೆ ತಿಳಿಹೇಳುವ ಯೋಗ್ಯತೆ ನನ್ನದಲ್ಲ. ಆದರೆ ಎರಡು ದಿನಗಳ ಮಟ್ಟಿಗೆ ನೀನೇಕೆ ಹೋಗಲಿಲ್ಲ ? " ಎಂದಳು.

ವಿರಾಜಳು ಮೌನವಾಗಿಯೆ ಇದ್ದಳು.

ಆಗ ಮೋಹಿನಿ ಹೇಳತೊಡಗಿದಳು : " ಭಾವನವರನ್ನು ಮನೆಯಲ್ಲಿಯೆ ಕಟ್ಟಿಹಾಕಬೇಡ ಅಕ್ಕಾ! ಕಷ್ಟದ ದಿನಗಳಿವು. ಒಂದು ಸಲ ನಿನ್ನ ಹೃದಯ ವನ್ನಿಷ್ಟು ಗಟ್ಟಿಮಾಡಿಕೊ. ಇಂದಿಲ್ಲ ನಾಳೆಯಾದರೂ ದೇವರು ಖಂಡಿತ ಕಣ್ಣೆತ್ತಿ ನೋಡುವುದರಲ್ಲಿ ಸಂದೇಹವಿಲ್ಲ. "

"ನಾನಂತೂ ನನ್ನ ಹೃದಯವನ್ನು ಕಲ್ಲುಮಾಡಿಕೊಂಡಿದ್ದೇನೆ ತಂಗೀ ! " –ವಿರಾಜಳು ಮೆಲ್ಲನೆ ನುಡಿದಳು.

ಮೋಹಿನಿ ಸ್ವಲ್ಪ ಒತ್ತಿನುಡಿದಳು : " ಹಾಗಾದರೆ ನೀನೊಮ್ಮೆ ಹೋಗಿ ಬಾ ಅಕ್ಕಾ ! ಭಾವನವರು ನಾಲ್ಕು ಜನಗಳಂತೆ ಕೈಯಲ್ಲಿ ಸ್ವಲ್ಪ ಕಾಸು ಮಾಡಲಿ. ನನಗೆ ತುಂಬ ವಿಶ್ವಾಸವಿದೆ–ದೇವರು ಇನ್ನು ಸ್ವಲ್ಪ ದಿನಗಳಲ್ಲೇ ನಿಮ್ಮ ಮೇಲೆ ಪ್ರಸನ್ನನಾಗುತ್ತಾನೆ. "

ವಿರಾಜಳು ಒಂದು ಸಲ ಮೊಗವೆತ್ತಿ ಏನೋ ಹೇಳಬೇಕೆಂದಳು. ಆದರೆ ಪುನಃ ಮುಖ ಕೆಳಗೆಹಾಕಿ ಸುಮ್ಮನೆ ನಿಂತುಬಿಟ್ಟಳು.

ಮೋಹಿನಿ ಪುನಃ–" ಹೋಗುವೆಯಲ್ಲವೆ ಅಕ್ಕ ? " ಎಂದಳು. ಈಗ ವಿರಾಜಳಿಗೆ ಉತ್ತರ ಕೊಡದೆ ಗತ್ಯಂತರ ಉಳಿಯಲಿಲ್ಲ. ಅವಳು ತಲೆಯ ನ್ನಲ್ಲಾಡಿಸುತ್ತ–" ಇಲ್ಲ, ನಿದ್ರೆಯಿಂದೆಚ್ಚತ್ತ ಬಳಿಕ ಅವರ ಮುಖವನ್ನು ಒಂದು ಸಲವಾದರೂ ನೋಡದೆ ನನ್ನ ಮನಸ್ಸಿಗೆ ತೃಪ್ತಿಯಾಗುವುದಿಲ್ಲ. ಅವರ ಮುಖ ನೋಡದೆ ನಾನೊಂದು ದಿನವೂ ಕಳೆಯಲಾರೆ. ಆದುದರಿಂದ ತಂಗೀ, ನನ್ನಿಂದ ಅಸಾಧ್ಯವಾದುದನ್ನು ಮಾಡಲು ನನ್ನನ್ನು ಒತ್ತಾಯಪಡಿಸಬೇಡ " ಎಂದು ಹೋಗತೊಡಗಿದಳು. ಆದರೆ ಅವಳ ಹಿಂದೆಯೆ ಹೆಜ್ಜೆಹಾಕುತ್ತ ಬಂದು ಮೋಹಿನಿ ಅಳುಮೊಗದಿಂದ ಕೂಗಿ ಹೇಳಿದಳು: ಇದು ಸರಿಯಲ್ಲ ಅಕ್ಕಾ. ಕೆಲ ದಿನಗಳ ಮಟ್ಟಿಗೆ ನೀನು ಇಲ್ಲಿಂದ ಹೋಗಲೇಬೇಕು. ನೀನು ಹೋಗುವ ವರೆಗೆ ನನಗೆ ನೆಮ್ಮದಿಯೆಂಬುದೇ ಇಲ್ಲ. "

ವಿರಾಜಳು ತಿರುಗಿ ನಿಂತಳು. ಒಂದು ಗಳಿಗೆ ಸ್ಥಿರತೆಯಿಂದಿದ್ದು–"ಓಹೋ, ಈಗೆಲ್ಲ ಗೊತ್ತಾಯಿತು; ಬಹುಶಃ ಸುಂದರಿ ಬಂದಿದ್ದಳೆಂದು ತೋರುತ್ತೆ" ಎಂದಳು.

ತಲೆಹಾಕುತ್ತ –" ಹೌದು, ಬಂದಿದ್ದಳು " ಎಂದಳು ಮೋಹಿನಿ.

" ಆದ್ದರಿಂದ ನಾನು ಇಲ್ಲಿಂದ ಹೊರಡಬೇಕೆನ್ನುತ್ತಿಯಾ ? "

"ಹೌದಕ್ಕ, ಅದಕ್ಕಾಗಿಯೆ ಹೇಳುತ್ತಿದ್ದೇನೆ. ನೀನು ಹೋಗಿ ಬಾ ಅಕ್ಕ."

ವಿರಾಜಳು ಮತ್ತೆ ಕ್ಷಣ ಹೊತ್ತು ಮೌನವಾಗಿದ್ದು–"ನಾಯಿಗೆ ಹೆದರಿ ನಾನು ಮನೆಬಿಟ್ಟು ಹೋಗಲೆ ?" ಎಂದಳು.

ಮೋಹಿನಿ ಒಡನುಡಿದಳು : "ನಾಯಿಗೆ ಹುಚ್ಚುಹಿಡಿಯಿತೆಂದರೆ ಅದಕ್ಕೂ ಹೆದರಲೇಬೇಕು ಅಕ್ಕಾ ! ಅಲ್ಲದೆ ಆ ಹೆದರಿಕೆ ನಿನ್ನ ಮಟ್ಟಿಗಾಗಿ ಮಾತ್ರವಲ್ಲ. ಸ್ವಲ್ಪ ಯೋಚಿಸಿ ನೋಡು–ಅದರಿಂದ ಇನ್ನು ಎಷ್ಟು ಅನಿಷ್ಟಗಳು ಕಾದಿರುವವೆಂದು."

ವಿರಾಜಳು ಕ್ಷಣ ಕಾಲ ಸುಮ್ಮನುಳಿದಳು. ಬಳಿಕ ಮೊಗವೆತ್ತಿ ಒಗರು ದನಿಯಿಂದ–"ಇಲ್ಲ, ನಾನು ಯಾವ ಕಾರಣಕ್ಕೂ ಇಲ್ಲಿಂದ ಹೆಜ್ಜೆಕೀಳಲಾರೆ" ಎಂದವಳೇ ಓರಗಿತ್ತಿ ಉತ್ತರ ಹೇಳುವ ಮೊದಲೆ ವೇಗವಾಗಿ ಹೊರಟು ಹೋದಳು. ಆದರೆ ಅವಳಿಗೆ ಯಾವುದೋ ಒಂದು ಭಯದ ಅರಿವಾಯಿತು. ಅವಳು ನಿತ್ಯ ನೀರು ತರುವ ಘಟ್ಟದೆದುರಿಗೇ ಮತ್ತೊಂದು ಘಟ್ಟವು ಸಿದ್ಧವಾಗ ತೊಡಗಿತ್ತು. ನದಿಯಲ್ಲಿ ನೀರು ಕಡಿಮೆಯಾಗಿದ್ದರೂ ಮೀನು ಹಿಡಿಯುವ ಮಂಚವೊಂದು ಸಿದ್ಧವಾಗತೊಡಗಿತ್ತು. ಈ ಎಲ್ಲ ಕಾರ್ಯಗಳ ಮೂಲೋದ್ದೇಶ ವಿರಾಜಳಿಗೆ ತಿಳಿಯದಿರಲಿಲ್ಲ.

ನೀಲಾಂಬರ ಒಂದು ದಿನ ಸ್ನಾನಮಾಡಿಕೊಂಡು ಬಂದ ಬಳಿಕ–"ಆ ಬದಿಗೆ ಘಟ್ಟವನ್ನು ಯಾರು ಕಟ್ಟಿಸಿದರು ವಿರಾಜ್ ?" ಎಂದು ಕೇಳಿದ.

ವಿರಾಜಳು ಒಮ್ಮೆಲೆ ಒಗರುದನಿಯಿಂದ–"ನಾನೇನು ಬಲ್ಲೆ ?" ಎಂದು ಸಿಟ್ಟಿನಿಂದ ಹೊರಟುಹೋದಳು.

ಹೆಂಡತಿಯ ಮುಖಭಾವ ನೋಡಿ ನೀಲಾಂಬರ ಅವಾಕ್ಕಾದ. ವಿರಾಜಳು ಆ ದಿನದಿಂದಲೇ ಹೊತ್ತು ವೇಳೆ ನೋಡದೆ ನೀರು ತರಲು ಘಟ್ಟಕ್ಕೆ ಹೋಗುವುದನ್ನು ನಿಲ್ಲಿಸಿದಳು. ಅವಳು ತೀರ ನಸುಕಿನಲ್ಲಿ ಇಲ್ಲವೆ ಕತ್ತಲಾದ ಬಳಿಕ ನದಿಗೆ ಹೋಗುತ್ತಿದ್ದಳಲ್ಲದೆ ಸಾವಿರ ಕೆಲಸ ಹಾಳಾದರೂ ನದಿಯ ಕಡೆಗೆ ಹೆಜ್ಜೆ ಹಾಕುತ್ತಿದ್ದಿಲ್ಲ. ಆದರೆ ಅವಳ ಹೃದಯವು ಜುಗುಪ್ಸೆ ನಾಚಿಕೆ ಕೋಪಗಳಿಂದ ಅಂತರಂಗದಲ್ಲಿಯೆ ತುಂಬಿಹೋಗಿತ್ತು. ಇದರಿಂದ ತನ್ನನ್ನು ಸಂಬಾಳಿಸಿಕೊಳ್ಳಲು ಅವಳಿಗೆ ಅತ್ಯಂತ ಕಠಿಣವಾಗುತ್ತಿತ್ತು. ಅಲ್ಲದೆ, ಗಂಡನ ಈ ಅತ್ಯಂತ ಅಸಭ್ಯವರ್ತನೆಯನ್ನೆದುರಿಸಿ ಬಾಯಿಬಿಚ್ಚಿ ಮಾತನಾಡುವ ಧೈರ್ಯವೂ ಅವಳಿಗೆ ಆಗ ಆಗಲಿಲ್ಲ.

ನಾಲ್ಕು ದಿನಗಳ ಬಳಿಕ ಒಂದು ದಿನ ಘಟ್ಟದ ಬಳಿ ಸ್ನಾನಮಾಡಿ ಮರಳಿ ಬರುವಾಗ ನೀಲಾಂಬರ ಮುಗುಳು ನಗುತ್ತ–"ವಿರಾಜ್, ನೀನು ಆ ಹೊಸ ಜಮೀನುದಾರನ ಆಡಂಬರ ನೋಡಿದೆಯಾ ?" ಎಂದು ಕೇಳಿದ.

ವಿರಾಜಳು ಗಂಡನ ಮನೋಭಾವವನ್ನರಿತಳು. ಏನೋ ಯೋಚಿಸುತ್ತ– "ನೋಡುತ್ತಲೇ ಇದ್ದೇನೆ" ಎಂದಳು.

ನೀಲಾಂಬರ ಹಾಗೆಯೇ ಮುಗುಳುನಗುತ್ತ–"ಆ ಜಮೀನುದಾರ ಸ್ವಲ್ಪ ಹುಚ್ಚನಿರಬೇಕೆಂದು ತೋರುತ್ತದೆ. ನದಿಯಲ್ಲಿ ನಾಲ್ಕಾರು ಚಿಕ್ಕ ಮೀನಿಗೆ ಸಾಕಾಗುವಷ್ಟು ನೀರಿಲ್ಲ. ಆದರೂ ಆತ ನಸುಕಿನಲ್ಲಿಯೇ, ಪಟವನ್ನು ಬಿಚ್ಚಿ ದೋಣಿಯಲ್ಲಿ ಕುಳಿತಿದ್ದಾನೆ" ಎಂದ.

ವಿರಾಜಳು ಸುಮ್ಮನಿದ್ದಳು. ಜಮೀನುದಾರನನ್ನು ಗೇಲಿಮಾಡುವುದರಲ್ಲಿ ಅವಳು ಗಂಡನೊಂದಿಗೆ ಸಹಕರಿಸಲಿಲ್ಲ.

ನೀಲಾಂಬರ ಹೇಳತೊಡಗಿದ: "ಆದರೆ ಅವನ ಈ ನಡತೆ ಸರಿಯಲ್ಲ. ಒಳ್ಳೆಯ ಮನೆತನವವರ ಮನೆಯ ಎದುರಿನಲ್ಲಿರುವ ಘಟ್ಟದ ಬಳಿ ಪರ ಪುರುಷನು ಇಡಿಯ ದಿನ ಹೀಗೆ ಕುಳಿತುಬಿಟ್ಟರೆ ಆ ಮನೆಯ ಹೆಂಗುಸರು ಅಲ್ಲಿ ಬಂದು ಹೋಗುವುದು ಹೇಗೆ ? ನಿನಗಂತೂ ಬಹಳ ಅನಾನುಕೂಲವಾಗು ವುದು, ಅಲ್ಲವೆ ?"

"ಅನಾನುಕೂಲವಾಗುವುದೆಂದೇ ಇಟ್ಟುಕೊಳ್ಳಿ. ಆದರೆ ಅದರಲ್ಲಿ ನಮ್ಮ ದೇನು ಅಧಿಕಾರ ?" ಎಂದಳು ವಿರಾಜ್.

ನೀಲಾಂಬರನಿಗೂ ಸ್ವಲ್ಪ ಕಾವೇರಿತು. "ಅಧಿಕಾರವೇಕಿಲ್ಲ ? ನದಿ ಯೊಳಗೆ ಬೇರೆ ಸ್ಥಳವಿಲ್ಲವೆ, ಇಡಿಯ ದಿನ ದೋಣಿಯಲ್ಲಿ ಕುಳಿತು ತನ್ನ ಹುಚ್ಚು ತನ ಪೂರೈಸಿಕೊಳ್ಳಲು ? ಇಲ್ಲ ಇಲ್ಲ, ನಾಳೆಯಿಂದ ಹಾಗೆಂದಿಗೂ ಮಾಡ ಗೊಡಲಾರೆ. ನಾಳೆ ನಸುಕಿಗೇ ಅವನ ಬಿಡಾರಕ್ಕೆ ಹೋಗಿ 'ದೋಣಿಯಲ್ಲಿ ಕುಳಿತು ಮೋಜುಮಾಡುವ ಮನಸ್ಸಿದ್ದರೆ ಬೇರೆ ಸ್ಥಳಕ್ಕೆ ಹೋಗುವ ಕೃಪೆ ಮಾಡಬೇಕು. ನನ್ನ ಮನೆಯೆದುರು ಹೀಗೆ ಕುಳಿತುಕೊಳ್ಳಲಾಗದು' ಎಂದು ಸ್ಪಷ್ಟವಾಗಿ ಹೇಳಿಯೆ ಬಿಡುತ್ತೇನೆ"–ಎಂದ ಅವನು.

ಗಂಡನ ಮಾತು ಕೇಳಿ ವಿರಾಜಳ ಮನದಲ್ಲಿ ಭಯಸಂಚಾರವಾಯಿತು. ಅವಳು ಗಾಬರಿಯಿಂದ–"ಇಲ್ಲ ಇಲ್ಲ, ಅಲ್ಲಿ ಹೋಗಿ ಹಾಗೆ ಹೇಳುವುದು ಬೇಡ. ಅವರನ್ನು ತಡೆಯಲು ನದಿಯೇನು ನಮ್ಮದಷ್ಟೇ ಏನು ?" ಎಂದಳು.

ಹೆಂಡತಿಯ ಮಾತು ಕೇಳಿ ನೀಲಾಂಬರ ನಸು ಆಶ್ಚರ್ಯಗೊಂಡ. "ಇದೇನು ಹೇಳುತ್ತಿರುವೆ ವಿರಾಜ್ ? ನದಿ ನಮ್ಮದಲ್ಲದಿದ್ದರೆ ಅಲ್ಲ. ಆದರೆ ತಾನು ಮಾಡುವ ಕೆಲಸ ಉಚಿತವೊ ಅನುಚಿತವೊ ಎಂಬುದನ್ನು ಸ್ವಲ್ಪವೂ ಯೋಚನೆಮಾಡದೆ ಅವನು ಮನಬಂದಂತೆ ನಡೆಯಬಹುದೆ? ನಾನು ನಾಳೆಯೇ ಹೋಗಿ ಹೇಳಿಬರುತ್ತೇನೆ. ಆತ ಕಿವಿಗೊಡದೆ ಹೋದರೆ ಆ ಮೀನು ಹಿಡಿಯುವ ಮಂಚವನ್ನು ನನ್ನ ಕೈಯಿಂದಲೇ ಕೆಡವಿಬಿಡುತ್ತೇನೆ. ಮುಂದೆ ಏನು ಮಾಡುತ್ತಾನೋ ಮಾಡಲಿ. "

ಗಂಡನ ಮಾತು ಕೇಳಿ ವಿರಾಜಳು ದಂಗಾದಳು. ಬಳಿಕ ಮೆಲ್ಲಮೆಲ್ಲನೆ– "ಹಾಗಾದರೆ ನೀವು ಜಮೀನುದಾರನೊಂದಿಗೆ ಜಗಳಕಾಯಲು ಹೋಗುವಿರಾ ? " ಎಂದಳು.

"ಏಕೆ ಕೂಡದು ? ತಾನು ಸಿರಿವಂತನೆಂದು ಅವನು ಮನಬಂದಂತೆ ಅನ್ಯಾಯ ಮಾಡಬೇಕೆ ? ಆ ಅನ್ಯಾಯವನ್ನು ನಾವು ತೆಪ್ಪಗೆ ಸಹಿಸುತ್ತಿರಬೇಕೇ ? "

"ಅವನು ಅನ್ಯಾಯ ಮಾಡುತ್ತಿದ್ದಾನೆಂದು ನೀವು ಪ್ರಮಾಣಿಸಿಕೊಡಬಲ್ಲಿರಾ ?"

ನೀಲಾಂಬರ ನಸುಕೋಪದಿಂದ–"ಈ ಗೊಡ್ಡುಮಾತಿಗೆ ಅಳುಕುವ ವ್ಯಕ್ತಿ ನಾನಲ್ಲ ವಿರಾಜ್ ! ಅವನು ಅನ್ಯಾಯಮಾಡುತ್ತಿರುವುದನ್ನು ಕಂಣಾರೆ ನೋಡುತ್ತಿದ್ದೇನೆ. ಮತ್ತೆ ನೀನು ಕೆದರಿ ಕೇಳುತ್ತಿರುವೆ—ಅದನ್ನು ಪ್ರಮಾಣಿಸಿಕೊಡಬಹುದೆ ಹೇಗೆ ಎಂದು. ಪ್ರಮಾಣಿಸಿಕೊಡುವುದು ಬಿಡುವುದು ನನ್ನ ಕೆಲಸ" ಎಂದ.

ವಿರಾಜಳು ಗಳಿಗೆ ಹೊತ್ತು ಸ್ಥಿರಭಾವದಿಂದ ಗಂಡನನ್ನು ದಿಟ್ಟಿಸಿ ನೋಡಿ– "ನೋಡಿ, ಮೊದಲು ನಿಮ್ಮ ತಲೆಯನ್ನು ಶಾಂತವಾಗಿಟ್ಟುಕೊಳ್ಳಿ. ದಿನದ ಎರಡೂ ವೇಳೆಗೆ ಊಟಕ್ಕಿಲ್ಲದವರ ಬಾಯಿಂದ ಇಂಥ ಮಾತು ಹೊರಬಿದ್ದರೆ ಜನ ಉಗುಳಿಬಿಟ್ಟಾರು !" ಎಂದಳು.

"ಆದೇಕೆ ?"

"ಆದೇಕೆಂದರೆ ? ಹೇಳಿ, ನಿಮ್ಮಿಂದ ಸಾಧ್ಯವೆ– ಜಮೀನುದಾರನ ಮಗನೊಂದಿಗೆ ಜಗಳಕಾಯಲು ?"

ವಿರಾಜಳ ಬಾಯಿಂದ ಈ ಮಾತು ಅತಿ ಕಟುವಾಗಿ ಬಂದಿತು. ನೀಲಾಂ-

ಬರನಿಗೆ ತಾಳ್ಮೆ ಉಳಿಯಲಿಲ್ಲ. ಅವನು ಒಮ್ಮೆಲೆ ದಳ್ಳುರಿಯಂತಾಗಿ ಗರ್ಜಿಸಿದ: "ನಾನೇನು ನಾಯಿ ಬೆಕ್ಕು ಎಂದು ತಿಳಿದೆಯಾ, ಮಾತು ಮಾತಿಗೆ ಊಟಕ್ಕಿಲ್ಲ, ಊಟಕ್ಕಿಲ್ಲ ಎಂದು ಹಂಗಿಸಿಕೊಳ್ಳಲು ? ಮನಸ್ಸಿಗೆ ಬರುವುದೇ ತಡ,ಹೇಳಿದಳೇ—ಎರಡೂ ಹೊತ್ತು ಊಟಕ್ಕಿಲ್ಲ ಎಂದು ! ಕೊಂಚ ಹೇಳು ನೋಡೋಣ, ನಿನಗೆ ಯಾವ ದಿನ ಎರಡೂ ಹೊತ್ತು ಊಟಕ್ಕೆ ಸಿಗಲಿಲ್ಲ ? "

ದುಃಖ ದುಮ್ಮಾನಗಳೊಂದಿಗೆ ನಿರಂತರ ದ್ವಂದ್ವಯುದ್ಧ ಹೂಡಿ ಹೂಡಿ ವಿರಾಜಳ ಶರೀರ ಹಣ್ಣು ಹಣ್ಣಾಗಿತ್ತು. ಅವಳಲ್ಲಿ ಮೊದಲಿನಂತೆ ಧೈರ್ಯವಾಗಲಿ ತಾಳ್ಮೆಯಾಗಲಿ ಇರಲಿಲ್ಲ. ಆದುದರಿಂದ ಅವಳು ಕೆರಳಿ ಚೀರುದನಿಯಿಂದ— "ಸುಮ್ಮನೆ ಬೊಬ್ಬೆಹೊಡೆಯುವುದೇಕೆ ? ಎರಡೂ ಹೊತ್ತಿನ ಊಟದ ವ್ಯವಸ್ಥೆ ಹೇಗೆ ನಡೆದಿದೆಯೆಂದು ನಿಮಗೆ ಗೊತ್ತಿರಲಿಕ್ಕಿಲ್ಲ. ಆದರೆ ನಾನು ಬಲ್ಲೆ. ಮತ್ತಾರಿಗಾದರೂ ಗೊತ್ತಿದ್ದರೆ ಆ ಅಂತರ್ಯಾಮಿಗೆ ಮಾತ್ರ. ಈ ವಿಷಯದಲ್ಲಿ ನೀವೆಂದಾದರೂ ಏನಾದರೂ ಆಡಿದರೆ ನಾನು ವಿಷತಿಂದು ಸಾಯುತ್ತೇನೆ'' ಎಂದು ಮೊಗವೆತ್ತಿ ನೋಡಿದಾಗ ನೀಲಾಂಬರನ ಮುಖ ಅತ್ಯಂತ ಕಳೆಗುಂದಿತ್ತು. ಅವನ ಕಣ್ಣುಗಳಲ್ಲಿ ವಿಹ್ವಲತೆ ಮೂಡಿತ್ತು. ನೋಡಿದರೆ ಏನು ಮಾಡಲೂ ತಿಳಿಯದವನಾಗಿ ಪೆಚ್ಚನಂತಾಗಿದ್ದಾನೆಂದು ಯಾರಿಗೂ ತಿಳಿಯುವಂತಿತ್ತು. ಗಂಡನ ಈ ಅವಸ್ಥೆ ನೋಡಿದೊಡನೆಯೆ ವಿರಾಜಳು ಭೂಮಿಗೇ ಇಳಿದುಹೋದಳು- ಅವಳು ಹೆಚ್ಚಿಗೇನೂ ಮಾತನಾಡದೆ ಮೆಲ್ಲಮೆಲ್ಲನೆ ಹೊರಟುಹೋದಳು.

ಅವಳು ಹೊರಟುಹೋದ ನಂತರವೂ ನೀಲಾಂಬರ ಹಾಗೇಯೆ ನಿಂತಿದ್ದ. ಬಳಿಕ ನಿಡಿದಾದ ಒಂದು ಉಸಿರೆಳೆದು ಹೊರಗೆ ದೇವೀಮಂದಿರದ ಒಂದು ಮೂಲೆಗೆ ಹೋಗಿ ಕುಳಿತ. ಅತಿ ಎತ್ತರವಲ್ಲದ ಗೂಡಿನಡಿಯಲ್ಲಿ ಕುಳಿತ ವ್ಯಕ್ತಿ ಯೋಚನಾಪರನಾಗಿ ಚಟ್ಟನೆ ಎದ್ದಾಗ, ಗೂಡು ತಲೆಗೆ ತಾಕಿ ಬವಳಿಬಂದ. ವನ ಸ್ಥಿತಿಯಂತೆ ನೀಲಾಂಬರನ ಪಾಡಾಯಿತು. ಅವನ ಕೋಪ ಏಟು ತಿಂದು ಕುಸಿದುಬಿತ್ತು. ಅಲ್ಲದೆ ಏಟೂ ಅಸಹನೀಯವಾದುದರಿಂದ ಮೃತಪ್ರಾಯವಾದಂತಾಯಿತು. ಆಗ ಒಂದೇ ಸಮನಾಗಿ—"ಹೊಟ್ಟೆ ಹೇಗೆ ಸಾಗಿದೆ? " ಎಂಬ ವಿರಾಜಳ ಮಾತು ಅವನ ಕಿವಿಯಲ್ಲಿ ಸುತ್ತತೊಡಗಿತು. ಜೊತೆಗೆ, ಅಂದು ಅಂಧ:ಕಾರಮಯವಾದ ಗಭೀರ ರಾತ್ರಿಯಲ್ಲಿ ಕೋಣೆಯ ನೆಲದ ಮೇಲೆ ಮಲಗಿದ ವಿರಾಜಳ ಕ್ಲಾಂತಿಯುಕ್ತ ಮುಖದ ನೆನಪೂ ಬಿಟ್ಟುಬಿಡದೆ ಆಗತೊಡಗಿತು. ಇತ್ತೀಚೆ ಮನೆಯ ವೆಚ್ಚ ಹೇಗೆ ಸಾಗಿದೆಯೆಂದೂ ಸಹಾಯಹೀನಳಾದ ತನ್ನ

ಹೆಂಡತಿ ಮನೆಯ ವೆಚ್ಚವನ್ನು ಹೇಗೆ ಸಾಗಿಸುತ್ತಿದ್ದಾಳೆಂದೂ ತಿಳಿದುಕೊಳ್ಳಲು ನೀಲಾಂಬರನಿಗೆ ಆಗ ವೇಳೆ ಹಿಡಿಯಲಿಲ್ಲ! ಸ್ವಲ್ಪ ಹೊತ್ತಿಗೆ ಮೊದಲು ವಿರಾಜ ಆಡಿದ ಮೊನೆಮಾತುಗಳು ಅವನ ಹೃದಯವನ್ನು ಸೂಜಿಯಂತೆ ಚುಚ್ಚಿದ್ದವು. ಅಲ್ಲಿಯೆ ಕುಳಿತು ಪರಿಸ್ಥಿತಿಯನ್ನು ಯೋಚಿಸಿದಂತೆಲ್ಲ ಅವನ ಹೃದಯದ ನೋವು ಕಡಿಮೆಯಾಯಿತು, ಅವನ ಶೋಕ ಶಾಂತವಾಯಿತು. ಅಲ್ಲದೆ, ಮೆಲ್ಲ ಮೆಲ್ಲನೆ ಅವನ ಮುಖದ ಮೇಲೆ ವಿರಾಜಳ ವಿಷಯವಾಗಿ ಶ್ರದ್ಧೆ ವಿಸ್ಮಯಗಳು ಮೂಡಿದವು. ಅವನ ವಿರಾಜಳು ಕೇವಲ ಅಂದಿನ ವಿರಾಜಳಾಗಿರಲಿಲ್ಲ; ಅದೆಷ್ಟೋ ಕಾಲದಿಂದ, ಅದೆಷ್ಟೋ ಯುಗಗಳಿಂದ ಅವನ ವಿರಾಜಳೇ ಆಗಿದ್ದಳು. ಕೇವಲ ಎರಡು ದಿನಗಳ ವ್ಯವಹಾರವನ್ನು ಲಕ್ಷಿಸಿ, ಇಲ್ಲವೆ ಮನಸ್ತಾಪದಲ್ಲಿ ಆಡಿಕೊಂಡ ಒಂದೆರಡು ಮಾತುಗಳನ್ನಾಲಿಸಿ ಅವಳ ವಿಷಯವಾಗಿ ಯೋಚನೆ ಮಾಡುವಂತಿಲ್ಲ ಅವನು! ವಿರಾಜಳ ಹೃದಯ ಎಂಥ ಕೆಚ್ಚಿನಿಂದ ತುಂಬಿದೆ ಯೆಂಬುದು ಅವನಷ್ಟು ಬೇರೆ ಯಾರಿಗೂ ಗೊತ್ತಿರಲಿಲ್ಲ.

ಹೆಂಡತಿಯ ವಿಷಯವಾಗಿ ಯೋಚಿಸಿದಂತೆಲ್ಲ ನೀಲಾಂಬರನ ಕಣ್ಣು ಗಳಿಂದ ಅಶ್ರುಗಳು ಪಳಪಳನೆ ಉದುರತೊಡಗಿದವು. ಅವನು ಒಮ್ಮೆಲೆ ಕೈಗ ಳೆರಡನ್ನೂ ಜೋಡಿಸಿ ಅಳುದನಿಯಿಂದ–"ಹೇ ಭಗವಂತ, ನನ್ನಲ್ಲಿದ್ದ ಎಲ್ಲ ವಸ್ತುಗಳನ್ನೂ ಕಸಿದುಕೊ. ಆದರೆ ನನ್ನ ವಿರಾಜಳನ್ನು ಮಾತ್ರ ಕಸಿದುಕೊಳ್ಳ ಬೇಡ "ಎಂದು ಬೇಡಿಕೊಳ್ಳುವಾಗ, ಒಮ್ಮೆಲೆ ಯಾವುದೊ ಒಂದು ಪ್ರಬಲ ಆಕಾಂಕ್ಷೆ ಅವನ ಅಂತಃಕರಣದಲ್ಲಿ ತಟ್ಟನೆ ತಲೆಯೆತ್ತಿ, ತನ್ನ ಪ್ರಿಯತಮೆಯನ್ನು ಒಂದು ಸಲ ತಬ್ಬಿಕೊಳ್ಳೋಣವೆನ್ನಿಸಿತು ಅವನಿಗೆ. ಅವನು ಓಡುತ್ತಲೆ ಬಂದು ವಿರಾಜಳ ಕೋಣೆಯ ಬಾಗಿಲು ಬಳಿ ನಿಂತುಕೊಂಡ. ಬಾಗಿಲು ಒಳಗಣಿಂದ ಇಕ್ಕಿತ್ತು. ಆದ್ದರಿಂದ ಅವನು ಹೊರಗೆ ನಿಲ್ಲಬೇಕಾಯಿತು. ನಿಂತಲ್ಲಿಂದಲೇ ಬಾಗಿಲು ತಟ್ಟುತ್ತ ಆವೇಗದಿಂದ ಕಂಪಿಸುವ ದನಿಯಿಂದ–"ವಿರಾಜ್!" ಎಂದು ಕೂಗಿದ ಅವನು.

ವಿರಾಜಳು ಬೋರಲು ಬಿದ್ದು ಅಳುತ್ತಲಿದ್ದಳು. ಗಂಡನ ಕೊರಲದನಿ ಆಲಿಸಿದೊಡನೆಯೆ ಅವಳು ಎದ್ದು ಕುಳಿತಳು.

"ಏನು ಮಾಡುತ್ತಿರುವೆ ವಿರಾಜ್? ಬಾಗಿಲು ತೆರೆ" ಎಂದು ನೀಲಾಂಬರ ಪುನಃ ಕೂಗಿದ.

ವಿರಾಜಳು ಹೆದರುತ್ತಾ ಬಾಗಿಲು ಬಳಿ ಬಂದು ನಿಂತಳು.

ನೀಲಾಂಬರ ವ್ಯಸ್ತನಾಗಿ–“ ಬಾಗಿಲನ್ನೇಕೆ ತೆರೆಯುವುದಿಲ್ಲ ವಿರಾಜ್ ? ” ಎಂದ.

ಆಗ ಅವಳು ಬಿಗಿದ ಕಂಠದಿಂದ–“ ನೀವು ಹೊಡೆಯುವುದಿಲ್ಲ ತಾನೆ ! ” ಎಂದಳು.

“ ನಾನು ಹೊಡೆಯುವೆನೆ ? ”

ಹೆಂಡತಿಯ ಈ ಮಾತಿನಿಂದ, ಹರಿತ ಕತ್ತಿಯಿಂದ ಅವನಿಗೆ ಹೃತ್ಪಿಂಡ ವನ್ನು ತಿವಿದಂತಾಯಿತು. ವೇದನೆ, ಲಜ್ಜೆ, ಹಾಗೂ ಅಭಿಮಾನಗಳ ಮೂಲಕ ಅವನ ಗಂಟಲು ಬಿಗಿದುಕೊಂಡಿತು. ಬವಳಿ ಬಂದಂತಾಗಿ ಅವನು ಚೌಕ ಟ್ಟಿಗೆ ಒರಗಿಕೊಂಡು ನಿಂತುಬಿಟ್ಟ. ವಿರಾಜಳಿಗೆ ಇದಾವುದೂ ತಿಳಿಯಲಿಲ್ಲ. ಇರಿತದ ಮೇಲೆ ಇರಿತ ಹಾಕುತ್ತ–“ಇನ್ನು ನಾನೆಂದಿಗೂ ಇಂಥ ಮಾತುಗಳ ನ್ನಾಡುವುದಿಲ್ಲ. ಹೇಳಿ, ಹೊಡೆಯುವುದಿಲ್ಲವಷ್ಟೆ!” ಎಂದು ಅಂಗಲಾಚಿಕೊಂಡಳು ವಿರಾಜ್.

ತೊದಲುವ ನಾಲಗೆಯಿಂದ–‘ ಇಲ್ಲ ’ ಎನ್ನುವುದರಲ್ಲಿ ನೀಲಾಂಬರನಿಗೆ ಸಾಕುಬೇಕಾಯಿತು. ವಿರಾಜಳೂ ಅಳುಕುತ್ತ ಅಳುಕುತ್ತ ಮೆಲ್ಲನೆ ಬಾಗಿಲ ಕೊಂಡಿ ಸಡಲಿಸಿದಳು. ಬಾಗಿಲು ತೆರೆದೊಡನೆಯೆ ನೀಲಾಂಬರ ನಡುಗುವ ಹೆಜ್ಜೆಯಿಂದ ಓಲುತ್ತಾ ಓಲುತ್ತಾ ಚಾಪೆಯ ಬಳಿ ಬಂದು ಕುಪ್ಪಳಿಸಿ ಬಿದ್ದ. ಅವನ ಕಣ್ಣುಗಳೆರಡೂ ಮುಚ್ಚಿದ್ದವು. ನಿಮೀಲಿತ ನೇತ್ರಗಳೆರಡರಿಂದಲೂ ಅಶ್ರುಧಾರೆ ಒಂದೇ ಸಮನೆ ಹರಿಯತೊಡಗಿತು. ಗಂಡನ ಇಂತಹ ಮುಖ ದೃಶ್ಯವು ವಿರಾಜಳಿಗೆ ಈ ವರೆಗೂ ಕಂಡಿರಲಿಲ್ಲ. ಈಗ ಅವಳಿಗೆ ಎಲ್ಲವೂ ಚನ್ನಾಗಿ ಅರ್ಥವಾಯಿತು. ಅವಳು ಎದ್ದು ಗಂಡನ ತಲೆಯ ಬಳಿ ಕುಳಿತಳು. ಅತ್ಯಂತ ನೇಹದಿಂದ ಅವನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ಸೀರೆ ಯಿಂದ ಅವನ ಕಂಬನಿಯೊರಸತೊಡಗಿದಳು. ಸಂಜೆಯ ಕತ್ತಲು ಮೆಲ್ಲನೆ ಕೋಣೆಯಲ್ಲಿ ಗಾಢವಾಗತೊಡಗಿತು. ಆದರೂ ದಂಪತಿಗಳಲ್ಲಿ ಯಾರ ಬಾಯಿಯೂ ತೆರೆಯಲಿಲ್ಲ, ಯಾರೂ ಮಾತಾಡಲಿಲ್ಲ. ಕತ್ತಲಲ್ಲಿ ಹಾಸಿಗೆಯ ಮೇಲೆ ಇಬ್ಬರೂ ಮೌನವಾಗಿ ಕುಳಿತಿದ್ದರು. ಆದರೆ ಅವರುಗಳು ಮನದೊಳಗೇ ಯಾವ ಯಾವ ಮಾತುಗಳನ್ನಾಡಿಕೊಂಡರೋ ಅಂತರ್ಯಾಮಿಯೆ ಬಲ್ಲ. ನೀಲಾಂಬರನಾದರೋ ಯೋಚಿಸತೊಡಗಿದ: “ ವಿರಾಜಳು ಇಂಥ ಮಾತು ಗಳನ್ನು ಆಡಿದಳಾದರೂ ಹೇಗೆ ? ನಾನು ಅವಳನ್ನು ಹೊಡೆಯಬಹುದೆಂಬ

ಯೋಚನೆ ಅವಳ ಮನದಲ್ಲಿ ಮೂಡಿತಾದರೂ ಹೇಗೆ? ನಾನು ಅಷ್ಟು ನೀಚನೆಂದು ಹೇಗೆ ಬಗೆದಳು ಅವಳು? ಇತ್ತೀಚೆ ನಮ್ಮ ದಾಂಪತ್ಯಜೀವನ ಅತ್ಯಂತ ದುಃಖಮಯವಾಗಿದೆ. ನಿತ್ಯವೂ ಒಂದಿಲ್ಲೊಂದು ತೊಂದರೆ ಇದ್ದೇ ಇರುತ್ತದೆ. ಸಾಲದ್ದಕ್ಕೆ ಇದೊಂದು ಬೇರೆ ಏನೋ ಪ್ರಾರಂಭವಾಗಿವೆಯಲ್ಲ! ಸರಿಯಾಗಿ ಎರಡು ದಿನ ಕಳೆಯುವಷ್ಟರಲ್ಲಿ ಯಾವುದಾದರೊಂದು ವಿಷಯವಾಗಿ ನಮ್ಮಿಬ್ಬರಲ್ಲಿ ಜಗಳವೆ ಹುಟ್ಟುತ್ತಿದೆಯಲ್ಲ! ಇತ್ತಿತ್ತ ನಮ್ಮಲ್ಲಿ ಮಾತಿಗೆ ಮಾತು ವ್ಯಥೆಗೆ ಕಾರಣವಾಗುತ್ತಿದೆ, ನೋಟ ಕೂಡಿದಾಗ ಜಗಳಕ್ಕೆ ಮೂಲವಾಗುತ್ತದೆ. ಹೆಜ್ಜೆ ಹೆಜ್ಜೆಗೆ ಮತಭೇದ ಹೆಚ್ಚುತ್ತಿದೆ." ನೀಲಾಂಬರನಿಗೆ ಒಂದೇ ಒಂದು ದೊಡ್ಡ ಚಿಂತೆ–"ನನ್ನ ವಿರಾಜಳು ಇತ್ತೀಚೆ ಹೇಗೋ ಆಗುತ್ತಿದ್ದಾಳಲ್ಲ! ಅವಳ ಆರೋಗ್ಯವೂ ಸೌಂದರ್ಯವೂ ದಿನದಿನಕ್ಕೂ ಕ್ಷೀಣಿಸಿದಂತೆ ಅವಳ ಮಧುರ ಸ್ವಭಾವವೂ ಕಟುವಾಗುತ್ತಿದೆ" ಎಂಬುದು. ಈ ಎಲ್ಲವನ್ನೂ ಯೋಚನೆಮಾಡುತ್ತ ಮಾಡುತ್ತ ನೀಲಾಂಬರನಿಗೆ ತನ್ನ ಬನ್ನದ ಮುನ್ನೀರಿನ ಕೊನೆಯೆ ತೋಚಲಿಲ್ಲ.

ಭಗವಂತನಲ್ಲಿ ನೀಲಾಂಬರನ ಭಕ್ತಿ ಅತುಲವಾದುದು, ನಿಶ್ಚಲವಾದುದು. ಭಗವಂತನ ಲೀಲೆಯಲ್ಲಿ ಅವನಿಗೆ ಇನ್ನಿಲ್ಲದ ವಿಶ್ವಾಸ. ಆದುದರಿಂದ ಅವನು ತನ್ನ ದುರ್ದೈವವನ್ನು ಹಳಿದುಕೊಂಡನೇ ಅಲ್ಲದೆ ಮನದಲ್ಲಿ ಕೂಡ ಯಾರನ್ನೂ ನಿಂದಿಸಲಿಲ್ಲ, ಯಾರ ಮೇಲೂ ದೋಷಾರೋಪಣೆ ಮಾಡಲಿಲ್ಲ. ದೇವೀಮಂದಿರದ ಗೋಡೆಯ ಮೇಲೆ ರಾಧಾಕೃಷ್ಣರ ಸುಂದರ ಮೂರ್ತಿಯ ಚಿತ್ರಪಟವೊಂದು ತೂಗುಬಿದ್ದಿತ್ತು. ಆ ಮೂರ್ತಿಯ ಎದುರು ನಿಂತು ಒಂದೇಸಮನೆ ಅಳುತ್ತ–"ಹೇ ಭಗವಂತ, ನನ್ನನ್ನು ಇಂಥ ದುಃಖದಲ್ಲಿ ಮುಳುಗಿಸುವುದೇ ನಿನ್ನ ಇಚ್ಛೆಯಾಗಿದ್ದರೆ ನನ್ನನ್ನಿಷ್ಟು ನಿರುತ್ಸಾಹಿಯನ್ನಾಗಿ ಏಕೆ ಹುಟ್ಟಿಸಿದೆ? ನಾನು ಎಷ್ಟು ಸಹಾಯಹೀನ, ಎಷ್ಟು ಅಸಮರ್ಥನಿರುವೆನೆಂದು ನಾನಲ್ಲದೆ ಬೇರೆ ಯಾರು ಬಲ್ಲರು?" ಎಂದ.

ನೀಲಾಂಬರನಿಗೆ ಓದೂ ಬಾರದು; ಕಸುಬು ಕೈಗಾರಿಕೆಗಳೂ ತಿಳಿಯದು. ಅವನಿಗೆ ಗೊತ್ತಿದ್ದುದೆಂದರೆ ದೀನದರಿದ್ರರ ಸೇವೆ; ಕಲಿತಿದ್ದೆಂದರೆ ದೇವರ ನಾಮಸ್ಮರಣೆ ಮಾತ್ರ. ಇದರಿಂದ ಪರರ ದುಃಖ ದೂರಾಗುವುದೇನೋ ನಿಜ. ಆದರೆ ಈ ಸಂಕಟಕಾಲದಲ್ಲಿ ತನ್ನ ದುಃಖ ನಿವಾರಣೆಯಾಗುವುದು ಹೇಗೆ? ಇಂದು ಅವನಲ್ಲಿ ಏನೂ ಇಲ್ಲ. ಅವನು ಪೂರಾ ಬೋರೇಗೌಡ. ಆದುದರಿಂದ ದುಃಖಪೀಡೆ ಸಹಿಸಲು ಅಸಮರ್ಥನಾಗಿ ಅನೇಕ ಸಲ ಮನದಲ್ಲಿಯೆ–"ಇನ್ನು

ನಾನಿಲ್ಲಿರಲಾರೆ. ದಿಕ್ಕು ತೋಚಿದ ಕಡೆಗೆ ವಿರಾಜಳೊಂದಿಗೆ ಹೊರಟುಹೋಗುತ್ತೇನೆ. ಆದರೆ ಈ ಏಳು ತಲೆಗಳ ವಾಸಸ್ಥಾನವನ್ನು ತೊರೆದು ಯಾವ ಗಿಡದ ನೆರಳು ಆಶ್ರಯಿಸಲಿ! ಈ ಚಿಕ್ಕ ನದಿ, ಗಿಡ ಬಳ್ಳಿಗಳಿಂದ ಸುತ್ತುವರಿದ ಈ ಮನೆ, ಹುಟ್ಟಿದಾರಭ್ಯ ಪರಿಚಿತವಾದ ಮುಖ, ಇವೆಲ್ಲವುಗಳನ್ನೂ ತೊರೆದು ಎಂಥ ದೇಶಕ್ಕೂ, ಅದೇಕೆ ಸ್ವರ್ಗಕ್ಕೆ ಹೋದರೂ ಒಂದು ದಿನವೂ ಬದುಕಲಾರೆ! ನನ್ನ ತಾಯಿ ಸ್ವರ್ಗವಾಸಿಯಾದುದೂ ಇದೇ ಮನೆಯಲ್ಲಿ. ಮೃತ್ಯುಶಯ್ಯೆಯಲ್ಲಿ ಒರಗಿದ ತಂದೆಯ ಸೇವೆಯನ್ನು ಮಾಡಿದ್ದು ಇದೇ ಮನೆಯಲ್ಲಿ. ತಂದೆಯು ಕಾಲವಾದ ಬಳಿಕ ಅವರ ಅಂತ್ಯಕ್ರಿಯೆ ಮಾಡಿದ್ದೂ ಇದೇ ಗಂಗೆಯ ತಟದಲ್ಲಿ. ಪುಟ್ಟಿಯ ಪಾಲನೆ ಪೋಷಣೆ ಮಾಡಿದ್ದೂ ಈ ಮನೆಯಲ್ಲೇ. ಅವಳ ಮದುವೆ ಆದುದೂ ಇದೇ ಮನೆಯಲ್ಲಿ. ಎಂದಮೇಲೆ ಈ ಮನೆಯ ಮೋಹವನ್ನು ಇಂದು ಹೇಗೆ ತೊರೆಯಲಿ ? " ಎಂದು ಹಂಬಲಿಸಿದ.

ನೀಲಾಂಬರ ಅಲ್ಲಿಯೇ ಕುಳಿತು ಕೈಗಳಿಂದ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದ. ಅವನಿಗಿರುವ ದುಃಖ ಇಷ್ಟೇ ಏನು ? ತಂಗಿಯ ಮದುವೆಯಾದಂದಿನಿಂದ ಈ ವರೆಗೆ ಅವಳ ಕ್ಷೇಮ ಸಮಾಚಾರವೂ ಅವನಿಗೆ ತಿಳಿದಿಲ್ಲ ಎಷ್ಟೋ ದಿನಗಳಿಂದ ಅವಳ ಮುಖದರ್ಶನವಂತೂ ಇಲ್ಲವೇ ಇಲ್ಲ. ' ಅಂಣಾ ಅಂಣಾ ' ಎಂಬ ಅವಳ ಏರುದನಿಯ ಕರೆಯನ್ನೂ ಆಲಿಸಿಲ್ಲ.

ಆಗ ಅವನಿಗೆ ತಂಗಿಯ ಸ್ಮರಣೆಯಲ್ಲದೆ ಬೇರೆ ಯಾವುದೂ ತಲೆಯಲ್ಲಿ ಸುಳಿಯುತ್ತಿರಲಿಲ್ಲ. ಒಂದೇ ಯೋಚನೆ ಅವನಿಗೆ-ತನ್ನ ತಂಗಿ ಅತ್ತೆಯ ಮನೆಯಲ್ಲಿ ಅದೆಷ್ಟು ಕಷ್ಟಪಡುತ್ತಿದ್ದಾಳೊ, ಅದೆಷ್ಟು ಅಳುತ್ತಿದ್ದಾಳೊ ! ಆದರೆ ಅದು ಅವನ ಭಾವನೆ ಮಾತ್ರ. ನಿಜವಾಗಿ ಹರಿಮತಿಯ ವಿಷಯವಾಗಿ ಅವನಿಗೆ ಯಾವ ವರ್ತಮಾನವೂ ಇರಲಿಲ್ಲ. ಅವಳ ವಿಷಯವಾಗಿ ತಾನು ವಿರಾಜಳೆದುರು ಒಂದು ಮಾತೂ ಆಡುವಂತಿಲ್ಲವಲ್ಲವೆಂಬುದೇ ಅವನ ಹೆಚ್ಚಿನ ಚಿಂತೆಗೆ ಕಾರಣ. ಅವಳ ಪಾಲನೆ-ಪೋಷಣೆಯನ್ನು ವಿರಾಜಳೇ ಮಾಡಿದಳೆಂಬುದು ನಿಜ. ಆದರೂ ಅವಳು ಪುಟ್ಟಿಯನ್ನು ಮರೆತಳು. ಆದರೆ ನೀಲಾಂಬರ ತನ್ನ ತಂಗಿಯನ್ನು ಹೇಗೆ ಮರೆತಾನು ? ಎಷ್ಟೆಂದರೂ ಅವರು ಒಡಹುಟ್ಟಿದವರಲ್ಲವೆ ? ಹರಿಮತಿ ಚಿಕ್ಕವಳಿರುವಾಗ ಅವಳನ್ನು ಕಂಕುಳಲ್ಲಿ, ಹೆಗಲ ಮೇಲೆ, ಎತ್ತಿಕೊಂಡೇ ಅವನು ಕೆಲಸಕ್ಕೆ ಹೋಗುತಿದ್ದ. ತಾನು ಎಲ್ಲಿಗೆ ಹೋದರೂ ತನ್ನೊಂದಿಗೆ ಅವಳನ್ನು ಕರೆದುಕೊಂಡೇ ಹೋಗುತಿದ್ದ. ಇದಕ್ಕಾಗಿ ನೀಲಾಂ-

ಬರ ಅದೆಷ್ಟೋ ಚುಚ್ಚುಮಾತುಗಳನ್ನೂ ಅಪಹಾಸ್ಯಗಳನ್ನೂ ಸಹಿಸಿಕೊಳ್ಳ ಬೇಕಾಯಿತು. ಆದರೆ ಆತನೆಂದೂ ಯಾವ ಕಾರಣದಿಂದಲೂ ಪುಟ್ಟಿಗೆ ಅಳುವು ದಕ್ಕೆ ಆಸ್ಪದವೀಯಲಿಲ್ಲ. ಮನೆಯಲ್ಲಿ ಅವಳನ್ನು ಅಳುವುದಕ್ಕೆ ಬಿಟ್ಟು ಹೊರಗೆ ಕಾಲಿಡಲೂ ಅವನಿಂದಾಗುತ್ತಿದ್ದಿಲ್ಲ. ಇವೆಲ್ಲ ಕೇವಲ ಅಂಣತಂಗಿಯರಿಗಲ್ಲದೆ ಅನ್ಯರಾರಿಗೂ ಗೊತ್ತಿಲ್ಲ.

ವಿರಾಜ ಇದನ್ನು ಅರಿತೂ ಅರಿಯದವಳಂತಿದ್ದಳು. ಈ ವಿಷಯವಾಗಿ ಅವ ಳೆಂದೂ ಚಕಾರ ಶಬ್ದನ್ನೆತ್ತುತ್ತಿರಲಿಲ್ಲ. ಹರಿಮತಿಯ ವಿಷಯವಾಗಿ ಅವಳು ಕಲ್ಲುಮೂರ್ತಿಯಂತೆ, ಮೂಕಿಯಂತೆ ಇರುತ್ತಿದ್ದಳು. ನಿರಪರಾಧಿಯಾದ ನಾದಿನಿಯನ್ನು ಅಪರಾಧಿಯಂತೆ ಕಾಣುತ್ತಿದ್ದಳು. ಇದು ನೀಲಾಂಬರನ ಎದೆ ಯಲ್ಲಿ ಬಾಣದಂತೆ ಚುಚ್ಚುತ್ತಿತ್ತು. ಆದರೆ ಈ ಬಗೆಗೆ ಚಕಾರವೆತ್ತಲೂ ಅವನಿಗೆ ಯಾವ ದಾರಿಯೂ ಇರಲಿಲ್ಲ. ತಾನೇ ಎಂದಾದರೂ ಈ ವಿಷಯವಾಗಿ ಮಾತ ನ್ನೆತ್ತಿದಾಗ ವಿರಾಜಳು ಒಮ್ಮೆಗೇ ನಡುವೆ ಬಾಯಿಹಾಕಿ – "ಆ ಮಾತೆಲ್ಲ ಇರಲಿ. ಅವಳು ಮಹಾರಾಣಿಯೇ ಆಗಲಿ. ನಮಗೇಕೆ ಆ ಚರ್ಚೆ ?" ಎಂದುಬಿಡುತ್ತಿ ದ್ದಳು. ಈ 'ಮಹಾರಾಣಿ' ಎಂಬ ಶಬ್ದವನ್ನು ವಿರಾಜಳು ವಿಚಿತ್ರವಾಗಿ ಉಚ್ಚ ರಿಸುವಾಗ ನೀಲಾಂಬರನ ಅಂತರಾತ್ಮವು ಕೂಡ ಉರಿದೇಳುತಿತ್ತು. ತಂಗಿಯು ಹಿರಿಯರ ಶಾಪಕ್ಕೆ ಗುರಿಯಾದಾಳು, ಅವಳಿಗೇನಾದರೂ ಅನಿಷ್ಟ ಒದಗೀತು. ಎಂಬ ಶಂಕೆಯಿಂದ ಅವನು ಮನದಲ್ಲೆ ವ್ಯಾಕುಲಗೊಳ್ಳುತ್ತಿದ್ದ. ಅವಳ ಕಲ್ಯಾಣ ಕ್ಕಾಗಿ ಮನದಲ್ಲೇ ದೇವನಿಗೆ ಮೊರೆಯಿಡುತ್ತಿದ್ದ. ಸಾಧ್ಯವಾದಾಗ ಹೆಂಡತಿಗೆ ಕಾಣದಂತೆ ಪೂಜೆ ಅನುಷ್ಠಾನಗಳನ್ನೂ ಮಾಡುತ್ತಿದ್ದ. ಈ ರೀತಿ ನೀಲಾಂಬರನ ದಿನಗಳು ಸಾಗಿದ್ದವು.

ದುರ್ಗಾಪೂಜೆಯ ಸಮಯ ಬಂದಿತು. ಈಗ ನೀಲಾಂಬರನಿಂದ ತಡೆಯ ಲಾಗಲಿಲ್ಲ. ಹೆಂಡತಿಗೆ ತಿಳಿಯದಂತೆ ಎಲ್ಲಿಂದಲೋ ಸ್ವಲ್ಪ ಹಣ ದೊರಕಿಸಿ ಕಡಿಮೆ ಬೆಲೆಯ ಒಂದು ಸೀರೆಯನ್ನೂ ಸ್ವಲ್ಪ ಮಿಠಾಯಿಯನ್ನೂ ಕೊಂಡು ಸುಂದರಿಯ ಬಳಿಗೆ ಬಂದ.

ಸುಂದರಿ ಮಣೆ ಹಾಕಿದಳು. ಚಿಲುಮೆಗೆ ಹೊಗೆಸೊಪ್ಪು ಹಾಕಿ ತಂದು ಕೊಟ್ಟಳು. ಮಣೆಯ ಮೇಲೆ ಕುಳಿತು ನೀಲಾಂಬರ ತನ್ನ ಹರುಕು ಸೆಲ್ಲೆಯದಿಂದ ಸೀರೆಯನ್ನೂ ಮಿಠಾಯಿಯನ್ನೂ ಹೊರದೆಗೆದು ಸುಂದರಿಯ ಇದಿರಿಗಿಟ್ಟು– "ಸುಂದರೀ, ನೀನು ಅವಳನ್ನು ಸಾಕಿ ಇಷ್ಟು ದೊಡ್ಡವಳನ್ನಾಗಿ ಮಾಡಿದೆ !

ಹೋಗು, ಒಮ್ಮೆ ಅವಳನ್ನು ನೋಡಿಕೊಂಡು ಬಾ" ಎಂದ.

ನೀಲಾಂಬರನಿಂದ ಇದಕ್ಕಿಂತ ಹೆಚ್ಚು ಮಾತನಾಡಲಾಗಲಿಲ್ಲ. ಅವನು ಮುಖ ಹೊರಳಿಸಿ ಸೆಲ್ಲೆಯುದಿಂದ ಕಂಬೊರೆಸತೊಡಗಿದ.

ಇತ್ತೀಚೆ ನೀಲಾಂಬರನ ಸಂಸಾರ ಹೇಗೆ ಸಾಗಿದೆ ಎಂದು ಸುಂದರಿ ಬಲ್ಲಳು. ಸುಂದರಿಯಷ್ಟೇ ಅಲ್ಲ, ಹಳ್ಳಿಯವರೆಲ್ಲರೂ ಬಲ್ಲರು. "ಅವಳು ಈಗ ಹೇಗಿದ್ದಾಳೆ ಒಡೆಯಾ ?" ಎಂದು ಸುಂದರಿ ಕೇಳಿದಳು.

"ಏನೂ ಗೊತ್ತಿಲ್ಲ" ಎಂದ ನೀಲಾಂಬರ ತಲೆಯಲ್ಲಾಡಿಸುತ್ತ. ಸುಂದರಿ ತಿಳಿವಳಿಕೆಯಿಲ್ಲದ ಹೆಂಗುಸಲ್ಲ. ಪರಿಸ್ಥಿತಿಯನ್ನು ಅರಿಯುವಷ್ಟು ಬುದ್ಧಿಶಕ್ತಿ ಅವಳಿಗಿತ್ತು. ಆದುದರಿಂದ ಅವಳೂ ಹೆಚ್ಚಿನ ಗೋಜಿಗೆ ಹೋಗದೆ–"ಆಗಲಿ ತಂದೆ, ನಾನು ನಾಳೆಯೇ ಹೊರಡುತ್ತೇನೆ" ಎಂದಳು. ನೀಲಾಂಬರ ಅವಳಿಗೆ ದಾರಿಯ ವೆಚ್ಚಕ್ಕಾಗಿ ಹಣ ಕೊಡಲು ಹೋದ. "ಬೇಡ ಒಡೆಯಾ, ಬೇಡ. ನಾನು ತೆಗೆದುಕೊಳ್ಳಲಾರೆ. ನೀವು ಸೀರೆ ಕೊಂಡು ತಂದಿರಿ. ಇಲ್ಲದಿದ್ದರೆ ಅದನ್ನೂ ತೆಗೆದುಕೊಳ್ಳುತ್ತಿದ್ದಿಲ್ಲ. ನಿಮ್ಮಂತೆ ನಾನೂ ಅವಳನ್ನು ಸಲಹಿ ದೊಡ್ಡವಳನ್ನಾಗಿ ಮಾಡಿದ್ದೇನೆ" ಎಂದಳು.

ನೀಲಾಂಬರನ ಕಂಣುಗಳಿಂದ ಪುನಃ ಕಂಬನಿಗಳುದುರ ತೊಡಗಿದವು. ಮುಖ ಹೊರಳಿಸಿ ಕಂಣುಗಳನ್ನೊರೆಸತೊಡಗಿದ. ಇಂಥ ಸಹಾನುಭೂತಿಯ ಮಾತನ್ನು ಅವನು ಈ ವರೆಗೆ ಯಾರ ಬಾಯಿಂದಲೂ ಕೇಳಿರಲಿಲ್ಲ. ಎಲ್ಲರೂ ಹೇಳುವುದೊಂದೇ : "ನೀಲಾಂಬರ ಬಹು ದೊಡ್ಡ ತಪ್ಪು ಮಾಡಿದ, ಅನ್ಯಾಯ ಮಾಡಿದ. ಹರಿಮತಿಯ ಕಾರಣದಿಂದಲೇ ನೀಲಾಂಬರ ದಂಪತಿಗಳ ಸರ್ವಸ್ವವೂ ಹಾಳಾಯಿತು." ನೀಲಾಂಬರ ಏಳುವ ಸಿದ್ಧತೆ ಮಾಡುತ್ತ – "ನಮ್ಮ ಕಷ್ಟ ನಷ್ಟಗಳ ಬಗೆಗೆ ಪುಟ್ಟಿಗೆ ಸ್ವಲ್ಪವೂ ತಿಳಿಯಕೂಡದು" ಎಂದು ವಿಶೇಷವಾಗಿ ಎಚ್ಚರಿಕೆಕೊಟ್ಟ.

ನೀಲಾಂಬರ ಹೊರಟುಹೋದ. ಸುಂದರಿ ಸೆರಗಿನಿಂದ ಕಂಣನ್ನು ಒರೆಸಿಕೊಂಡಳು. ನೀಲಾಂಬರನ ಗುಣವೇ ಅಂತಹದು. ಎಲ್ಲರೂ ಅವನನ್ನು ಮನಸ್ಸಿನಲ್ಲಿ ಪ್ರೀತಿಸುವವರೇ. ಅವನ ಬಗೆಗೆ ಎಲ್ಲರಿಗೂ ಅಪಾರ ಶ್ರದ್ಧೆ ಇತ್ತು.

ವಿಜಯ ದಶಮಿಯ ಮಧ್ಯಾಹ್ನ ವಿರಾಜಳು ಮಲಗುವ ಕೋಣೆ ಹೊಕ್ಕು ಬಾಗಿಲಿಕ್ಕಿಕೊಂಡಳು. ಸಂಜೆಗೆ ಅನೇಕ ಜನರು ಅವಳ ಮನೆಗೆ ಬಂದರು. ನೀಲೂ ಕಕ್ಕಾ ಎಂದು ಕೆಲವರು, ನೀಲೂ ಅಂಣಾ ಎಂದು ಹಲವರು ಕರೆಯುತ್ತ ಒಳಗೆ ನುಗ್ಗಿದರು. ಹಲವರು ಹೊರಗಿನಿಂದಲೇ ಕೂಗತೊಡಗಿದರು.

ನೀಲಾಂಬರ ಸುಕ್ಕುಬಿದ್ದ ಮುಖದೊಂದಿಗೆ ದೇವೀ ಮಂದಿರದಿಂದ ಹೊರ ಬಂದು ಅವರೆದುರು ನಿಂತ. ಅವರು ಪದ್ಧತಿಯಂತೆ ಅವನಿಗೆ ನಮಸ್ಕಾರ ಮಾಡಿ, ತಬ್ಬಿಕೊಂಡು, ಅನಂತರ ಮನೆಯೊಡತಿಗೆ ನಮಸ್ಕಾರ ಮಾಡಲು ಒಳಗೆ ಸಾಗಿದರು. ನೀಲಾಂಬರನೂ ಅವರ ಜೊತೆಗೆ ಒಳಗೆ ಬಂದ. ವಿರಾಜಳು ಅಡುಗೆ ಮನೆಯಲ್ಲಿಲ್ಲದುದನ್ನೂ ಮಲಗುವ ಕೋಣೆ ಇಕ್ಕಿದುದನ್ನೂ ನೋಡಿ ಬಾಗಿಲು ತಟ್ಟುತ್ತ – "ವಿರಾಜ್, ಮಕ್ಕಳು ನಮಸ್ಕರಿಸಲು ಬಂದಿದ್ದಾರೆ" ಎಂದ.

ವಿರಾಜಳು ಒಳಗಿನಿಂದಲೇ – "ನನಗೆ ಬಹಳ ಜ್ವರ ಬಂದಿದೆ. ಬಹಳ ನಿತ್ರಾಣ" ಎಂದಳು.

ಅವರೆಲ್ಲರೂ ಹೊರಟುಹೋದ ಬಳಿಕ ಸ್ವಲ್ಪ ಹೊತ್ತಿನ ಮೇಲೆ ಪುನಃ ಬಾಗಿಲು ತಟ್ಟುವ ಸದ್ದಾಯಿತು. ವಿರಾಜಳು ಉತ್ತರವೀಯಲೇ ಇಲ್ಲ. ಹೊರಗಿನಿಂದಲೇ ಕೋಮಲ ಕಂಠವೊಂದು ಕೇಳಿಬಂತು: "ಅಕ್ಕಾ, ನಾನು ಮೋಹಿನಿ. ಸ್ವಲ್ಪ ಬಾಗಿಲು ತೆರೆ."

ವಿರಾಜಳು ಸುಮ್ಮನಿದ್ದಳು.

ಮೋಹಿನಿ ಮತ್ತೆ – "ಆದಾಗದು ಅಕ್ಕಾ–ಬಾಗಿಲ ಬಳಿ ರಾತ್ರಿಯೆಲ್ಲಾ ಬೇಕಾದರೆ ನಿಲ್ಲುತ್ತೇನೆ. ಇಲ್ಲಿಂದ ಹೆಜ್ಜೆ ಕೀಳಲಾರೆ. ನಿನ್ನ ಆಶೀರ್ವಾದ ಪಡೆದ ಬಳಿಕವೇ ನಾನು ಇಲ್ಲಿಂದ ಹೋಗುವುದು" ಎಂದಳು.

ವಿರಾಜಳು ಬಾಗಿಲು ತೆರೆದು ಅವಳೆದುರಿಗೆ ನಿಂತಳು. ಮೋಹಿನಿ ಒಂದು ಕೈಯಲ್ಲಿ ತಿಂಡಿ ತಿನಿಸಿನ ತಟ್ಟೆಯನ್ನೂ ಇನ್ನೊಂದರಲ್ಲಿ ಹಾಲು ತುಂಬಿದ ಲೋಟವನ್ನೂ ಹಿಡಿದು ನಿಂತಿದ್ದಳು. ಅವುಗಳನ್ನು ವಿರಾಜಳ ಕಾಲು ಬಳಿಯಿಟ್ಟು ತನ್ನ ಹಣೆಯನ್ನು ಅಕ್ಕನ ಪಾದಗಳಿಗೆ ಮುಟ್ಟಿಸಿ ನಮಸ್ಕಾರ ಮಾಡಿ–

"ಅಕ್ಕ, ನಾನೂ ನಿನ್ನಂತೆಯೇ ಆಗಲೆಂದು ಹರಸು. ನಾನು ನಿನ್ನಿಂದ ಬೇರಾವ ಆಶೀರ್ವಾದವನ್ನೂ ಪಡೆಯಲಿಚ್ಛಿಸುವುದಿಲ್ಲ" ಎಂದಳು.

ವಿರಾಜಳು ತನ್ನ ಸಜಲ ನೇತ್ರಗಳನ್ನು ಒರಸಿಕೊಂಡು ನೀರವವಾಗಿ ಮೋಹಿನಿಯ ಬಾಗಿದ ಶಿರದ ಮೇಲೆ ಹಸ್ತವನ್ನಿಟ್ಟಳು.

ಮೋಹಿನಿ ಎದ್ದು ನಿಂತು – "ಅಕ್ಕ, ಈ ದಿನ ಕಣ್ಣೀರು ಸುರಿಸಕೂಡದು. ಆದರೆ ಈ ಮಾತನ್ನು ನಿನಗೆ ಹೇಳುವುದು ನನ್ನಂಥವಳಿಗೆ ಯೋಗ್ಯವಲ್ಲ. ಆದರೆ ನಿನ್ನ ದೇಹಕ್ಕೆ ಸೋಂಕಿದ ಗಾಳಿ ನನ್ನ ದೇಹಕ್ಕೆ ಸೋಂಕಿದರೂ ಸಾಕು, ಅದರ ಬಲದಿಂದಲೇ ಮುಂದಿನ ವರುಷ ಇದೇ ದಿನ ಏನು ನಡೆಯಬಹುದೆಂದು ಇಂದೇ ಹೇಳಬಲ್ಲೆ ಅಕ್ಕಾ!" ಎಂದಳು.

ಮೋಹಿನಿ ಹೋದ ಬಳಿಕ ವಿರಾಜಳು ಆ ತಿಂಡಿ ತಿನಿಸನ್ನು ಕೋಣೆಯೊಳಗಿಟ್ಟು ಗಂಭೀರಳಾಗಿ ಕುಳಿತುಬಿಟ್ಟಳು. ಮೋಹಿನಿ ತನ್ನ ಮೇಲೆ ಪೂರ್ಣ ಲಕ್ಷ್ಯವಿಟ್ಟಿದ್ದಾಳೆಂದು ವಿರಾಜಳಿಗಿಂದು ಸ್ಪಷ್ಟವಾಯಿತು. ಬಳಿಕ ಅದೆಷ್ಟೋ ಹುಡುಗರು ಬಂದು ಹೋದರು. ಆದರೆ ವಿರಾಜಳು ಪುನಃ ಬಾಗಿಲು ಇಕ್ಕಿಕೊಳ್ಳಲಿಲ್ಲ. ಓರಗಿತ್ತಿ ಕೊಟ್ಟುಹೋದ ತಿಂಡಿಯನ್ನು ಪ್ರಸಾದವೆಂದು ಹಂಚಿ ಅವಳು ವಿಜಯ ದಶಮಿಯನ್ನು ಆಚರಿಸಿದಳು.

ಮಾರನೆಯ ದಿನ ವಿರಾಜಳು ಆಯಾಸಗೊಂಡವಳಾಗಿ ಜಗುಲಿಯ ಮೇಲೆ ಪಲ್ಲೆ ಆರಿಸುತ್ತಲಿದ್ದಳು. ಆಗ ಸುಂದರಿ ಬಂದು ನಮಸ್ಕರಿಸಿದಳು. ವಿರಾಜಳು ಅವಳನ್ನು ಆಶೀರ್ವದಿಸಿ ಕುಳಿತುಕೊಳ್ಳಲು ಹೇಳಿದಳು.

ನೆಲದ ಮೇಲೆ ಕುಳಿತುಕೊಳ್ಳುತ್ತಲೇ ಸುಂದರಿ ನುಡಿದಳು : "ನಿನ್ನೆಯೇ ಹೇಳಬೇಕೆಂದಿದ್ದೆ ತಾಯಿ, ರಾತ್ರಿ ಬಹಳವಾದ್ದರಿಂದ ಈಗ ಬೆಳಗಾದ ಕೂಡಲೇ ಬಂದೆ. ನೀವೇನೇ ಹೇಳಿ ತಾಯಿ, ನನಗೆ ಅದೆಲ್ಲ ಮೊದಲೇ ಗೊತ್ತಿದ್ದರೆ ನಾನೆಂದಿಗೂ ಅಲ್ಲಿ ಕಾಲಿಡುತ್ತಿದ್ದಿಲ್ಲ."

ವಿರಾಜಳಿಗೆ ಸುಂದರಿಯ ಮಾತಿನ ಅರ್ಥವೇ ಆಗಲಿಲ್ಲ. ಅವಳು ಸುಂದರಿಯ ಮುಖವನ್ನೇ ದಿಟ್ಟಿಸತೊಡಗಿದಳು.

ಸುಂದರಿ ಹೇಳತೊಡಗಿದಳು : "ಮನೆಯಲ್ಲಿ ಯಾರೂ ಇರಲಿಲ್ಲ. ಮುದಿ ಸೋದರತ್ತೆಯೊಬ್ಬಳ ಹೊರತು ಉಳಿದವರೆಲ್ಲರೂ ಪಶ್ಚಿಮ ದೇಶಕ್ಕೆ ತಿರುಗಾಡಲು ಹೋಗಿದ್ದಾರೆ. ಆ ಮುದಿ ಸೋದರತ್ತೆ ಎಂಥ ಮಾತುಗಳನ್ನಾಡಿದಳಮ್ಮಾ! –ಕೇಳಿ ದಂಗಾದೆ. 'ತೆಗೆದುಕೊಂಡು ಹೋಗು ನಿನ್ನ ಈ ಸೀರೆಯನ್ನು.

ಅಳಿಯನಿಗೊಂದು ಒಳ್ಳೆಯ ಪಂಚೆ ಸಹ ಕಳುಹಿಸಲಿಲ್ಲ. ಸಾದಾ ನೂಲಿನ ಸೀರೆಯಿಂದ ಹಬ್ಬದ ಕಾಣಿಕೆ ಕೊಡಲು ಬಂದಿದ್ದಾಳೆ ಇವಳು!' ಎಂದು ಸಿಡುಕಿ ಬಾಯಿಗೆ ಬಂದಂತೆ ಆಡಿದಳು. ಅವೆಲ್ಲ ನನಗೀಗ ನೆನಪಿಲ್ಲ. ಅಲ್ಲದೆ ಅವುಗಳ ಪುನರುಕ್ತಿ ಮಾಡಲೂ ಮನಸ್ಸಿಲ್ಲ."

ವಿರಾಜಳು ವಿಸ್ಮಯದಿಂದ–"ಇದನ್ನೆಲ್ಲ ಯಾರು ಯಾರನ್ನು ಕುರಿತು ಹೇಳಿದ್ದೇ ಸುಂದರಿ?" ಎಂದು ಕೇಳಿದಳು.

"ಹಾಗೆಂದರೇನು? ನಮ್ಮ ಒಡೆಯನನ್ನೇ ಕುರಿತು ಹೇಳಿದ್ದು. ಅಲ್ಲದೆ ಮತ್ತಾರಿಗೆ ಹೇಳಬೇಕು?"

ವಿರಾಜಳು ಅಧೀರಳಾದಳು. ಅವಳಿಗೊಂದೂ ಗೊತ್ತಿರಲಿಲ್ಲವಾದ್ದರಿಂದ ಏನೂ ಅರ್ಥವಾಗಲಿಲ್ಲ. "ನಮ್ಮ ಯಜಮಾನರನ್ನು ಕುರಿತು ಯಾರು ಏನೆಂದರು? ಸ್ವಲ್ಪ ವಿವರವಾಗಿ ತಿಳಿಸು" ಎಂದಳು.

ವಿರಾಜಳ ಈ ಮಾತು ಕೇಳಿ ಸುಂದರಿಗೆ ಕೊಂಚ ಅಚ್ಚರಿಯಾಯಿತು. ಅವಳು–"ಈ ವರೆಗೆ ನಾನು ಹೇಳುತ್ತಿದ್ದದ್ದು ಅದೇ ವಿಷಯ ತಾಯಿ! ಪುಟ್ಟಿಯ ಮುದಿ ಸೋದರತ್ತೆಗೆ ಅದೆಷ್ಟು ಜಂಬವಮ್ಮಾ! ಮಹಾ ಸಿಡುಕಿನ ಸ್ವಭಾವದವಳು. ಅವಳು ಸೀರೆ ತೆಗೆದುಕೊಳ್ಳಲೇ ಇಲ್ಲ; ಹಿಂದಿರುಗಿ ಕೊಟ್ಟು ಬಿಟ್ಟಳು" ಎಂದು ಉಡಿಯಿಂದ ಸೀರೆಯನ್ನು ಹೊರದೆಗೆದು ವಿರಾಜಳ ಮುಂದೆ ಇಟ್ಟಳು.

ವಿರಾಜಳಿಗೆ ಈಗ ಎಲ್ಲವೂ ಅರ್ಥವಾಯಿತು. ನೆಟ್ಟನೋಟದಿಂದ ಆ ಸೀರೆಯನ್ನೇ ನೋಡತೊಡಗಿದಳು. ಅವಳ ಸರ್ವಾಂಗವೂ ಉರಿಯತೊಡಗಿತು.

ನೀಲಾಂಬರ ಎಲ್ಲಿಗೋ ಹೋಗಿದ್ದ. ಯಾವಾಗ ಮರಳಿ ಬರುವನೆಂಬುದೂ ಗೊತ್ತಿರಲಿಲ್ಲ. ಆದುದರಿಂದ ಸುಂದರಿ ಅವನ ನಿರೀಕ್ಷಣೆಮಾಡದೆ ಹೊರಟು ಹೋದಳು.

ಮಧ್ಯಾಹ್ನ ನೀಲಾಂಬರ ಊಟ ಮಾಡುತ್ತ ಕುಳಿತಿದ್ದ. ವಿರಾಜಳು ಕೋಣೆಯಿಂದ ಆ ಸೀರೆ ತಂದು ಅವನೆದುರಿಗಿಡುತ್ತ–"ಸುಂದರಿ ಇವನ್ನು ಕೊಟ್ಟು ಹೋದಳು" ಎಂದಳು.

ನೀಲಾಂಬರ ಮೊಗವೆತ್ತಿ ನೋಡುತ್ತಲೆ ಒಮ್ಮೆಲೇ ಬೆದರಿದ. ವಿರಾಜಳ ಎದುರು ಈ ವಿಷಯ ಈ ಬಗೆಯಾಗಿ ಹೊರಬಿದ್ದೀತೆಂದು ಆತ ಕನಸಿನಲ್ಲಿಯೂ ಬಗೆದಿರಲಿಲ್ಲ. ಅವನು ಹೆಚ್ಚಿನ ಗೊಡವೆಗೆ ಹೋಗದೆ ಕೆಳಗೆ ಮುಖಮಾಡಿ

ಕುಳಿತುಬಿಟ್ಟ.

ವಿರಾಜಳು ನುಡಿದಳು : " ಈ ಸೀರೆಯನ್ನು ಅವರೇಕೆ ಸ್ವೀಕರಿಸಲಿಲ್ಲ? ಏಕೆ ಹಿಂದಿರುಗಿ ಕೊಟ್ಟರು ? . ಸಾಲದ್ದಕ್ಕೆ ಮೇಲೆ ಏನೆಂದು ಉಡುಗೊರೆ ಕೊಟ್ಟುಕಳುಹಿದ್ದಾರೆ–ಎಂಬುದೆಲ್ಲಾ ಸುಂದರಿಯ ಬಳಿಗೆ ಹೋದಾಗ ನಿಮಗೆ ತಿಳಿಯುವುದು."

ಆದರೂ ನೀಲಾಂಬರ ಮುಖವೆತ್ತಲಿಲ್ಲ. ಈ ವಿಷಯವಾಗಿ ಒಂದೂ ಮಾತು ಕೇಳುವ ಇಚ್ಛೆ ಇಲ್ಲವೆನ್ನುವಂತಿತ್ತು ಅವನ ಮುಖಭಾವ. ವಿರಾಜಳೂ ಸುಮ್ಮನುಳಿದಳು.

ನೀಲಾಂಬರನ ಹಸಿವು ಬಾಯಾರಿಕೆ ಒಮ್ಮೆಲೇ ಇಂಗಿಹೋಯಿತು. ತಾನು ಭಯಭೀತನಾಗಿ ಮುಖ ಕೆಳಗೆಮಾಡಿ ಕುಳಿತಾಗ ವಿರಾಜಳು ಸ್ಥಿರನೋಟ ದಿಂದ ತನ್ನನ್ನೇ ನಿರುಕಿಸುತಿದ್ದಾಳೆಂದೂ ಅವಳ ಕಣ್ಣುಗಳಿಂದ ಬೆಂಕಿಯ ಮಳೆ ಸುರಿಯುತ್ತಿದೆಯೆಂದೂ ಅವನಿಗೆನಿಸಿತು.

ಸಾಯಂಕಾಲ ಸುಂದರಿಯ ಮನೆಗೆ ಹೋಗಿ ನೀಲಾಂಬರ ಎಲ್ಲವನ್ನೂ ಕೇಳಿ ತಿಳಿದುಕೊಂಡ. ಬಳಿಕ– " ಆ ಜನ ಪಶ್ಚಿಮಕ್ಕೆ ತಿರುಗಾಡಲು ಹೋಗಿ ದ್ದಾರೆಂದ ಮೇಲೆ ಎಲ್ಲರೂ ಸೌಖ್ಯವಾಗಿರಬೇಕಲ್ಲವೆ ಸುಂದರಿ ? " ಎಂದ.

ಸುಂದರಿ ತಲೆದೂಗುತ್ತ– " ಹೌದು ಒಡೆಯಾ, ಅವರು ಸುಖವಾಗಿರಲೇ ಬೇಕು " ಎಂದಳು.

ನೀಲಾಂಬರನ ಮುಖದ ಮೇಲೆ ಸಂತೋಷದ ಚಿಹ್ನೆ ಮಿನುಗಿತು. " ಅವ ಳೆಷ್ಟು ದೊಡ್ಡವಳಾಗಿರಬಹುದು ಸುಂದರಿ ! ನೀನು ಅವಳನ್ನು ಕಂಡೆಯಾ ? "

ಸುಂದರಿ ನಗುತ್ತಲೆ– " ಇಲ್ಲ ಒಡೆಯಾ, ಅವಳು ನನಗೆ ನೋಡಲು ಸಿಗಲೇ ಇಲ್ಲ " ಎಂದಳು.

ಈ ಪ್ರಶ್ನೆ ಕೇಳಿದ್ದಕ್ಕಾಗಿ ನಾಚಿಕೊಂಡು ನೀಲಾಂಬರನೆಂದ: "ಹುಂ, ನಿನಗೆ ಅವಳು ನೋಡಲು ಸಿಕ್ಕಿರಲಿಕ್ಕಿಲ್ಲ. ಆದರೆ ಅವಳ ಕ್ಷೇಮ ಸಮಾಚಾರವನ್ನು ಆಳು ಹೋಳುಗಳಿಂದ ತಿಳಿದುಕೊಳ್ಳಲಿಲ್ಲವೆ ? "

" ಇಲ್ಲ ಒಡೆಯಾ, ಇಲ್ಲ ! ಅವಳ ಸೋದರತ್ತೆ ವಿಚಿತ್ರವಾಗಿ ಕೈ ಮುರಿದು ಮೈ ಕೊಂಕಿಸಿ ಕಟುಮಾತುಗಳನ್ನಾಡಿದ್ದರಿಂದ ಕ್ಷೇಮ ಸಮಾಚಾರವನ್ನಾದರೂ ತಿಳಿದುಕೊಳ್ಳಬೇಕೆಂಬುದು ಕೂಡ ನನಗೆ ಹೊಳೆಯಲಿಲ್ಲ. ಅಲ್ಲದೆ ನನಗೆ ಅಲ್ಲಿಂದ ಸುಸೂತ್ರ ಪಾರಾಗಿ ಬಂದರೆ ಸಾಕು ಎನಿಸಿತು. "

ನೀಲಾಂಬರನ ಮುಖ ಕೋಪದಿಂದ ಕಪ್ಪಿಟ್ಟಿತು. ಅವನು ಕೊಂಚ ಹೊತ್ತು ಸ್ಥಿರವಾಗಿ ಕುಳಿತು – "ಹೌದು ಸುಂದರಿ. ನಮ್ಮ ಪುಟ್ಟಿ ಹೇಗಿರಬಹುದು? ಸೊರಗಿರಬಹುದೊ, ಅಥವಾ ಹೃಷ್ಟಪುಷ್ಟಳಾಗಿರಬಹುದೊ?" ಎಂದು ಕೇಳಿದ:

ಉತ್ತರ ಕೊಟ್ಟು ಕೊಟ್ಟು ಸುಂದರಿಗೆ ಸಾಕಾಗಿಹೋಗಿದ್ದಿತು. ಆದುದರಿಂದ "ಹೃಷ್ಟ ಪುಷ್ಟಳಾಗಿರಬೇಕು" ಎಂದು ಸಂಕ್ಷಿಪ್ತವಾಗಿ ಉತ್ತರಕೊಟ್ಟಳು.

ನೀಲಾಂಬರ ಆಶಾನ್ವಿತನಾದ. "ಬಹುಶಃ ನೀನು ಈ ವಿಷಯ ಕೇಳಿ ಬಂದಿರಬೇಕು ಅಲ್ಲವೆ?" ಎಂದ.

ತಲೆಯಲ್ಲಾಡಿಸುತ್ತ ಸುಂದರಿಯೆಂದಳು: "ಇಲ್ಲ ಒಡೆಯಾ, ನಾನು ಯಾರೊಂದಿಗೂ ಏನೂ ಮಾತಾಡಲಿಲ್ಲ."

"ಹಾಗಾದರೆ ನಿನಗೆ ಇದು ಹೇಗೆ ಗೊತ್ತಾಯಿತು?"

ಈ ಸಲ ಸುಂದರಿ ಸ್ವಲ್ಪ ಸಿಡಿಮಿಡಿಗೊಂಡು – "ನಾನು ವಿಚಾರಿಸಿದ್ದರೆ ತಾನೆ? ಅವಳು ಹೇಗಿರಬಹುದೆಂದು ಕೇಳಿದಿರಿ. ಹೃಷ್ಟಪುಷ್ಟಳಾಗಿರಬಹುದೆಂದು ಹೇಳಿದೆ" ಎಂದಳು.

ನೀಲಾಂಬರ ತಲೆಯಲ್ಲಾಡಿಸುತ್ತ ಕೋಮಲದನಿಯಿಂದ– "ಓ: ಹಾಗೇನು?" ಎಂದು ಸುಂದರಿಯ ಮುಖವನ್ನು ನಿಟ್ಟಿಸಿ ನೋಡತೊಡಗಿದ. ಬಳಿಕ ಉಸಿರ್ಗರೆದು – "ಸರಿ, ಈಗ ಹೋಗುತ್ತೇನೆ ಸುಂದರಿ, ಮತ್ತಾವಾಗಾದರೂ ಬರುತ್ತೇನೆ" ಎಂದು ಎದ್ದು ನಿಂತ.

ಈಗ ಸುಂದರಿ ಸಮಾಧಾನದ ಉಸಿರುಗರೆದಳು. ಇದರಲ್ಲಿ ನಿಜವಾಗಿ ಅವಳದೇನೂ ಅಪರಾಧವಿರಲಿಲ್ಲ. ಒಂದು, ಅದರಲ್ಲಿ ಹೇಳಿಕೊಳ್ಳುವಂತಹ ವಿಷಯವೇನೂ ಇರಲಿಲ್ಲ. ಅಲ್ಲದೆ, ಒಂದೇ ಮಾತನ್ನು ನೂರಾರು ರೀತಿ ಹೇಳಿದರೂ ನೀಲಾಂಬರನ ಕುತೂಹಲವು ಕಡಿಮೆಯಾಗುವಂತಿರಲಿಲ್ಲ. ಹೀಗೆ ಒಂದೇ ಸಮನೆ ಎರಡು ಗಂಟೆ ಕಾಲ ಚರ್ವಿತಚರ್ವಣ ಮಾಡಿ ಸುಂದರಿ ಬೇಸತ್ತಿದ್ದಳು ಆದ್ದರಿಂದ ನೀಲಾಂಬರ ಹೋಗುವ ಮಾತು ಆಡಿದಾಗ ಅವಳು ತ್ವರಿತವಾಗಿ– "ಹಾಗೇ ಆಗಲಿ ಒಡೆಯಾ, ಈಗ ರಾತ್ರಿಯಾಯಿತು. ಮತ್ತಾವಾಗಾದರೂ ಸ್ವಲ್ಪ ಬೇಗ ಬನ್ನಿ. ಸಾಕಷ್ಟು ಮಾತನಾಡೋಣವಂತೆ" ಎಂದಳು.

ಇಷ್ಟು ಹೊತ್ತಾದ ಬಳಿಕ ಸುಂದರಿಯ ವಿಶೇಷ ವ್ಯಗ್ರತೆಯು ಕಡೆಗೆ ನೀಲಾಂಬರನ ಲಕ್ಷ್ಯ ವೇಧಿಸಿತು. 'ಸರಿ, ನಾನು ಬರುತ್ತೇನೆ' ಎಂದವನೇ ಹೊರಟುಹೋದ ಅವನು.

ಸುಂದರಿಯ ಈ ಉತ್ಕಂಠತೆಗೆ ಒಂದು ವಿಶೇಷ ಕಾರಣವೂ ಇತ್ತು. ಈ ಮಾತುಕತೆ ನಡೆದ ಸಮಯಕ್ಕೇ ನಿತಾಯಿ ಗಂಗೊಳ್ಳಿ ಅವಳ ಮನೆಗೆ ಬರುವ ಸಮಯ. ನಿತಾಯಿ ಹತ್ತಿರದ ಕೇರಿಯಲ್ಲಿರುತ್ತಿದ್ದ. ಸುಂದರಿಯ ಯೋಗ ಕ್ಷೇಮ ಕೇಳುವುದಕ್ಕೂ, ತನ್ನ ಪಾದಧೂಳಿ ಕೆಡಹುವುದಕ್ಕೂ ನಿತ್ಯ ಅವನು ಅವಳ ಮನೆಗೆ ಬರುತ್ತಿದ್ದ. ತನ್ನ ಒಡೆಯ ಮನೆಯಲ್ಲಿರುವಾಗಲೇ ನಿತಾಯಿ ಎಲ್ಲಿ ಬಂದುಬಿಡುವನೋ ಎಂಬ ಶಂಕೆ ಸುಂದರಿಯ ಎದೆಯನ್ನು ಸುಡುತ್ತಿತ್ತು. ಇತ್ತೀತ್ತಲಾಗಿ ಅನೇಕ ಕಾರಣಗಳಿಂದ ಸುಂದರಿಯ ಕಣ್ಣು ನೆತ್ತಿಗೇರಿದ್ದವು. ಜಮೀನುದಾರನ ಅನುಗ್ರಹಕ್ಕೆ ಪಾತ್ರಳಾದುದರಿಂದ ಅವಳ ಲಜ್ಜೆ ಗರ್ವದ ರೂಪಕ್ಕೆ ಪರಿವರ್ತನವಾಗುತ್ತಲಿತ್ತು. ಆದರೂ ಈ ನಿಷ್ಕಲಂಕ ಸದ್ಬ್ರಾಹ್ಮಣ ನೆದುರು ತನ್ನ ನಿಜಸ್ವರೂಪ ತೋರಿಸುವ ಧೈರ್ಯ ಅವಳಿಗಾಗಲಿಲ್ಲ. ಈ ಕಾರಣ ದಿಂದಲೇ, ನೀಲಾಂಬರನು ಬಹಳ ಸಮಯ ಕುಳಿತಾಗ ಅವನ ಸಮ್ಮುಖದಲ್ಲೇ ನಿತಾಯಿಯ ಆಗಮನವೆಲ್ಲಿ ಆಗುವುದೋ ಎಂದು ಶಂಕಾಪೀಡಿತಳಾಗಿ, ನಾಚಿಕೆ ಯಿಂದ ಸಾಯುವಂತಾದಳು ಅವಳು.

ನೀಲಾಂಬರ ಹೊರಬಿದ್ದ ಕೂಡಲೆ ಸುಂದರಿ ಹರ್ಷಗೊಂಡು ಬಾಗಿಲು ಮುಚ್ಚಲು ಎದ್ದು ಬಂದಳು. ಆದರೆ ಕಣ್ಣೆತ್ತಿ ನೋಡಲಾಗಿ ನೀಲಾಂಬರ ಮರಳಿ ಬರುತ್ತಿದ್ದುದನ್ನು ಕಂಡಳು. ಆದ್ದರಿಂದ ಬಾಗಿಲಿಗೆ ಒರಗಿಕೊಂಡು ಇಳಿ ಮೊಗದಿಂದ ಅಲ್ಲಿಯೇ ನಿಂತಳು.

ಹತ್ತಿರ ಬಂದು ನೀಲಾಂಬರ ಒಂದು ಸಲ ಅನುಮಾನಿಸಿದ. ಬಳಿಕ ಸೆಲ್ಲೆಯ ದಿಂದ ಅರ್ಧಾಣೆ ನಾಣ್ಯವೊಂದನ್ನು ಹೊರತೆಗೆದು ಲಜ್ಜಾಯುಕ್ತ ಕೋಮಲ ಕಂಠದಿಂದ– " ಸುಂದರಿ, ನಿನ್ನಲ್ಲಿ ಏನು ಹೇಳಲೂ ನಾನು ಸಂಕೋಚಪಡುವ ಕಾರಣವಿಲ್ಲ. ನಿನಗೆ ನನ್ನ ಪರಿಸ್ಥಿತಿ ಗೊತ್ತಿಲ್ಲದಿಲ್ಲ. ನನ್ನ ಬಳಿ ಇರುವುದು ಇದೊಂದೇ ಅರ್ಧಾಣೆ ನಾಣ್ಯ. ಇದನ್ನು ತೆಗೆದುಕೋ " ಎಂದು ಅದನ್ನು ಕೊಡಲು ಕೈ ಮುಂದೆಮಾಡಿದ. ಆದರೆ ಸುಂದರಿ ನಾಲಗೆ ಕಚ್ಚಿ ಹಿಂದೆ ಸರಿದಳು.

ನೀಲಾಂಬರ ವೈನ್ಯದಿಂದ– " ಸುಂದರಿ, ನಾನು ನಿನಗೆ ಬಹಳ ತೊಂದರೆ ಕೊಟ್ಟೆ. ಆದರೆ ಹೋಗಿ ಬರುವ ವೆಚ್ಚವನ್ನೂ ಕೊಡಲಿಲ್ಲ " ಎಂದ. ಹೆಚ್ಚು ಮಾತಾಡಲು ಅವನಿಂದಾಗಲಿಲ್ಲ. ಅವನ ಕುತ್ತಿಗೆ ಬಿಗಿದುಕೊಂಡಿತು.

ಸುಂದರಿ ಗಳಿಗೆ ಹೊತ್ತು ಯೋಚಿಸಿ ಬಳಿಕ ಕೈಯೊಡ್ಡಿದಳು. " ಇಲ್ಲಿ

ಕೊಡಿ. ನಿಮ್ಮ ಪಾಡು ಹೇಗಿದ್ದರೂ ನೀವು ನನಗೆ ಯಾವಾಗಲೂ ಒಡೆಯರೇ. ನಿಮ್ಮ ಮಾತನ್ನು ಮೀರುವುದು ನನಗೆ ಭೂಷಣವಲ್ಲ" ಎಂದು ಅರ್ಧಾಣೆ ನಾಣ್ಯ ತೆಗೆದುಕೊಂಡಳು. ಬಳಿಕ ಅದನ್ನು ತಲೆಗೆ ಸವರಿಕೊಂಡು, ಸೆರಗಿನಲ್ಲಿ ಕಟ್ಟಿಕೊಳ್ಳುತ್ತಾ–"ಸ್ವಲ್ಪ ಒಳಗೆ ಬನ್ನಿ" ಎಂದು ಒಳಗೆ ಹೋದಳು. ನೀಲಾಂಬರನೂ ಅವಳ ಹಿಂದೆಯೆ ಪಡುಸಾಲೆಗೆ ನಡೆದ.

ಸುಂದರಿ ಕೋಣೆಗೆ ಹೋಗಿ ನಿಮಿಷಾರ್ಧದಲ್ಲಿ ಮುಷ್ಟಿತುಂಬ ರೂಪಾಯಿ ತಂದು ನೀಲಾಂಬರನ ಕಾಲುಬಳಿ ಇಟ್ಟಳು. ತರುವಾಯ ಸಾಷ್ಟಾಂಗ ನಮಸ್ಕಾರ ಮಾಡಿ ಪಾದಧೂಳಿ ಕೊಂಡು ಎದ್ದುನಿಂತಳು.

ನೀಲಾಂಬರ ಅಚ್ಚರಿಯಿಂದ ಪೆಚ್ಚನಂತಾದುದನ್ನು ಕಂಡು ನಸುಮುಗುಳುನಗೆಯಿಂದ ಹೇಳಿದಳು: "ಹೀಗೆ ದಿಟ್ಟಿಸಿ ನೋಡುತ್ತ ನಿಲ್ಲುವುದರಿಂದ ಕೆಲಸವಾಗದು. ನಾನು ಚಿರಕಾಲದಿಂದಲೂ ನಿಮ್ಮ ದಾಸಿ. ನಾನು ಶೂದ್ರಳಿರಬಹುದು. ಆದರೂ ಹೀಗೆ ಮಾಡುವ ಅಧಿಕಾರ ನನಗೆ ಇದ್ದೇ ಇದೆ."

ಬಳಿಕ ಸುಂದರಿ ನೀಲಾಂಬರನ ಚರಣದ ಬಳಿ ಬಾಗಿ ಹಣದ ಗಂಟನ್ನೆತ್ತಿ ಅದನ್ನು ಅವನ ಸೆಲ್ಲೆಯುದಲ್ಲಿ ಕಟ್ಟುತ್ತಿರುವಾಗಲೇ ಹೇಳಿದಳು : "ಒಡೆಯಾ, ಇವು ನನಗೆ ನೀವು ಕೊಟ್ಟ ರೂಪಾಯಿಗಳು. ನಾನು ತೀರ್ಥಯಾತ್ರೆ ಮಾಡಬೇಕೆಂದಿದ್ದೆ. ದೇವತಾಕಾರ್ಯಕ್ಕೆ ವಿನಿಯೋಗಿಸಬೇಕೆಂದು ಬಗೆದು ಈ ಹಣವನ್ನು ಶೇಖರಿಸಿಟ್ಟಿದ್ದೆ. ಆದರೆ ನನಗೆ ಯಾತ್ರೆ ಮಾಡುವುದಾಗಲಿಲ್ಲ. ಅಲ್ಲದೆ, ಈಗ ನನ್ನ ಮನೆಗೆ ಭಗವಂತ ಬಂದಿದ್ದಾನೆ. ಅವನಿಗೆ ಸಮರ್ಪಿಸಲು ಮೀಸಲಾಗಿಟ್ಟ ಧನವನ್ನು ಈಗ ಅವನಿಗೇ ಅರ್ಪಿಸುತ್ತಿದ್ದೇನೆ."

ಸುಂದರಿಯ ಈ ಮಾತು ಕೇಳಿಯೂ ನೀಲಾಂಬರನ ಬಾಯಿಂದ ಒಂದಕ್ಷರವೂ ಹೊರಬೀಳಲಿಲ್ಲ. ಸುಂದರಿ ಸೆಲ್ಲೆಯುದಲ್ಲಿ ಹಣವನ್ನು ಗಟ್ಟಿಯಾಗಿ ಕಟ್ಟಿ– "ಮನೆಯಲ್ಲಿ ತಾಯಿಯೊಬ್ಬರೆ ಇದ್ದಾರೆ. ಇನ್ನು ಇಲ್ಲಿ ನಿಂತಿರಬೇಡಿ. ಬೇಗ ಹೋಗಿ. ಆದರೆ ಈ ವಿಷಯ ಮಾತ್ರ ಅವರಿಗೆ ಖಂಡಿತ ತಿಳಿಯದಂತೆ ನೋಡಿಕೊಳ್ಳಬೇಕು" ಎಂದು ಬೇಡಿಕೊಂಡಳು.

ನೀಲಾಂಬರನೇನೋ ಹೇಳಲುದ್ಯುಕ್ತನಾಗಿದ್ದ. ಆದರೆ ನಡುವೆಯೇ ಅವನನ್ನು ತಡೆದು ಸುಂದರಿ– "ನೀವು ಸಾವಿರ ಮಾತು ಹೇಳಿದರೂ ನಾನು ಕೇಳುವವಳಲ್ಲ. ಇಂದು ನೀವು ನನ್ನ ಮಾನರಕ್ಷಣೆ ಮಾಡದೆ ಹೋದರೆ ನಾನು ಹಣೆ ಚಚ್ಚಿಕೊಂಡು ಪ್ರಾಣ ಬಿಡುವುದೇ ಸರಿ" ಎಂದಳು.

ನೀಲಾಂಬರನ ಸೆಲ್ಲೆಯದ ಅಂಚು ಇನ್ನೂ ಸುಂದರಿಯ ಕೈಯಲ್ಲೇ ಇತ್ತು. ಅಷ್ಟರಲ್ಲಿ– "ಏನು ನಡೆದಿದೆ?" ಎನ್ನುತ್ತ ತೆರೆದ ಬಾಗಿಲಿನಿಂದ ನಿತಾಯಿ ಗಂಗೊಳ್ಳಿ ಮೊಗಸಾಲೆಗೆ ಕಾಲಿಟ್ಟ.

ಸುಂದರಿ ನೀಲಾಂಬರನ ಸೆಲ್ಲೆಯ ಬಿಟ್ಟುಬಿಟ್ಟಳು. ನೀಲಾಂಬರನೂ ಸುಂದರಿಯ ಮನೆಯಿಂದ ಹೊರಬಿದ್ದು ಹೋದ.

ನಿತಾಯಿ ಕ್ಷಣ ಹೊತ್ತು ಅವಾಕ್ಕಾಗಿ ನಿಂತು – "ನೀಲೂ! ಬದಮಾಷ್ ಅಲ್ಲವೆ ಈತ?" ಎಂದ.

ಸುಂದರಿ ಮನದಲ್ಲೇ ಕೆರಳಿದಳು. ಆದರೂ ಸ್ವಾಭಾವಿಕ ದನಿಯಿಂದ– "ಹೌದು, ಅವರು ನನ್ನ ಒಡೆಯರು" ಎಂದಳು.

"ಇತ್ತೀಚೆ ಅವನಿಗೆ ಹೊಟ್ಟೆಹೊರೆಯುವುದೂ ಕಷ್ಟವಾಗಿದೆಯೆಂದು ಕೇಳಿದ್ದೆ. ಆದರೆ ಇಷ್ಟು ರಾತ್ರಿ ನಿನ್ನ ಮನೆಗೆ ಏಕೆ ಬಂದಿದ್ದ?"

"ಸ್ವಲ್ಪ ಕೆಲಸವಿತ್ತು; ಬಂದಿದ್ದರು."

"ಅಬ್ಬ–ಅವನ ಕೆಲಸವೆ!" ಎನ್ನುತ್ತ ನಿತಾಯಿ ಮುಖ ಹೊರಳಿಸಿ ನಗತೊಡಗಿದ. ಅವನ ಹಾಸ್ಯದ ಅರ್ಥವಿಷ್ಟೆ––ತನ್ನಂತಹ ಅನುಭವಿಕನ ಕಂಣಿನಲ್ಲಿ ಧೂಳೆರಚುವ ಕಾರ್ಯ ಸುಲಭವಲ್ಲ – ಎಂದು.

ನಿತಾಯಿ ಯಾವ ಅಭಿಪ್ರಾಯದಿಂದ ನಕ್ಕನೆಂದು ಸುಂದರಿಗೂ ತಿಳಿಯು ದಿರಲಿಲ್ಲ. ನಿತಾಯಿಯ ವಯಸ್ಸು ಐಂಕ್ಕೆ ಮೀರಿತ್ತು. ಅವನ ತಲೆಗೂದಲು ಹನ್ನೆರಡಾಣೆ ಭಾಗ ಬೆಳ್ಳಗಾಗಿದ್ದವು. ಮೀಸೆ ಗಡ್ಡಗಳೆಲ್ಲವೂ ಸಪಾಟಾಗಿದ್ದವು. ತಲೆಯ ಮೇಲೆ ಚಂಡಿಕೆ ಇತ್ತು. ಹಣೆಯ ಮೇಲೆ ಬೆಳಿಗ್ಗೆ ಹಚ್ಚಿದ ಚಂದನದ ಬೊಟ್ಟು ಆ ವರೆಗೂ ಇತ್ತು. ಸುಂದರಿ ಅವನನ್ನೇ ಎವೆಯಿಕ್ಕದೆ ನೋಡು ತ್ತಿದ್ದಳು. ಅವಳ ಆ ನೋಟದ ಅರ್ಥ ಊಹಿಸುವುದು ನಿತಾಯಿಯ ಬುದ್ಧಿ ಶಕ್ತಿಗೆ ನಿಲುಕದ ಮಾತು. ಆದುದರಿಂದ ಸ್ವಲ್ಪ ಬಿಸಿಯಾಗಿ – "ನೀನು ಹೀಗೇಕೆ ನನ್ನನ್ನು ದಿಟ್ಟಿಸುತ್ತಿರುವೆ?" ಎಂದ ಅವನು.

"ಸುಮ್ಮನೆ."

"ನೀನು ಯೋಚಿಸುತ್ತಿರುವುದಾದರೂ ಏನು?"

"ನಾನು ಯೋಚಿಸುತ್ತಿರುವುದಿಷ್ಟೇ: ನೀವೂ ಬ್ರಾಹ್ಮಣರು, ಇದೀಗ ಇಲ್ಲಿಂದ ಹೋದವರೂ ಬ್ರಾಹ್ಮಣರೇ. ಆದರೆ ನಿಮ್ಮಿಬ್ಬರಲ್ಲಿ ಭೂಮ್ಯಾಕಾಶದಷ್ಟು ಅಂತರವಿದೆ" ಎಂದು ನುಡಿದಳು ಸುಂದರಿ. ಈ ಮಾತಿನ ಅಭಿಪ್ರಾಯ ತಿಳಿ

ಯಲು ಅಸಮರ್ಥನಾಗಿ ನಿತಾಯಿಯೆಂದ–"ಯಾವ ವಿಷಯದಲ್ಲಿ ಅಂತರವಿದೆ ಯೆಂದೆ?"

ಸುಂದರಿ ನಸುನಕ್ಕು– "ಮುದಿ ಮನುಷ್ಯರು ನೀವು. ಚಳಿಯಲ್ಲಿ ನಿಂತು ಕೊಳ್ಳಬೇಡಿ. ಜಗುಲಿಯ ಮೇಲೆ ಬಂದು ಕುಳಿತುಕೊಳ್ಳಿ. ಯಾವ ವಿಷಯ ದಲ್ಲಿ ಅಂತರವಿದೆಯೆಂದು ಕೇಳುವಿರಲ್ಲವೆ? ನಮ್ಮ ಒಡೆಯನ ಚರಣಧೂಳಿಯ ಒಂದು ಕಣದಿಂದ ನಿಮ್ಮಂತಹ ಎಷ್ಟು ಜನ ಗಂಗೊಳ್ಳಿಗಳ ಎಷ್ಟು ಜನ್ಮ ಸಾರ್ಥಕವಾಗುವವೆಂದು ನಾನು ನಿಮ್ಮನ್ನು ದಿಟ್ಟಿಸಿ ದಿಟ್ಟಿಸಿ ಯೋಚಿಸುತ್ತಿದ್ದೆ" ಎಂದಳು.

ಸುಂದರಿಯ ಮಾತು ಕೇಳಿ ನಿತಾಯಿಯ ಕೋಪ ವಿಸ್ಮಯಗಳಿಗೆ ಸೀಮೆಯೇ ಉಳಿಯಲಿಲ್ಲ. ಅವನು ಅವಾಕ್ಕಾಗಿ ಸುಂದರಿಯನ್ನೇ ನಿಟ್ಟಿಸುತ್ತ ನಿಂತುಕೊಂಡ. ಸುಂದರಿ ಗುಡುಗುಡಿಯಲ್ಲಿ ಹೊಗೆಸೊಪ್ಪು ತುಂಬುತ್ತ ಅತ್ಯಂತ ಸ್ವಾಭಾವಿಕ ದನಿಯಿಂದ– "ತಪ್ಪು ತಿಳಿದುಕೊಳ್ಳಬೇಡಿ ನನ್ನ ದೇವರೆ, ನಾನಾಡಿದ ಮಾತು ಸತ್ಯವಾದುದು. ಇದು ಇಂದಿನ ಮಾತಲ್ಲ. ಮೊದಲಿ ನಿಂದಲೂ ನಾನು ಕಂಡ, ಕಾಣುತ್ತಿರುವ ಸತ್ಯ. ಒಡೆಯನ ಜನಿವಾರಪೆಡೆ ನೋಡಿದಾಗ ಕಣ್ಣು ಕುಕ್ಕಿದಂತಾಗುತ್ತದೆ. ಅವರ ಕೊರಳ ಜನಿವಾರ ಆಕಾಶ ದಲ್ಲಿ ಮಿಂಚು ಹೊಳೆದಂತೆ ಮಿಂಚುತ್ತದೆ. ನಿಮಗೆಲ್ಲಿ ಆ ತೇಜ? ನಿಮ್ಮ ಮುಖದ ಕಡೆಗೆ ನೋಡಿದಾಗ ನನಗೆ ನಗು ಬರುತ್ತದೆ" ಎಂದು ಗೇಲಿ ಯಾಡುತ್ತಾ ಗಹಗಹಿಸಿ ನಕ್ಕಳು. ಮೊದಲೇ ನಿತಾಯಿ ಈರ್ಷೆಯಿಂದ ಬೆಂಕಿ ಯಾಗಿದ್ದ. ಈಗ ಕೋಪದಿಂದ ಉನ್ಮತ್ತನಾದ. ಅವನು ಕಂಣುಗಳನ್ನು ಬೆಂಕಿಯ ಹಾಗೆ ಕೆಂಪಾಗಿಸಿ ಚೀರುತ್ತಾ– "ಇಷ್ಟೊಂದು ಗರ್ವ ಬೇಡ ಸುಂದರಿ, ಈ ನಿನ್ನ ಗಲ್ಲಗಳು ಚಪ್ಪಟೆಯಾದಾವು!" ಎಂದ.

ಗುಡುಗುಡಿಯ ಬೆಂಕಿಯನ್ನೂದುತ್ತ ಹತ್ತಿರ ಬಂದು ನಗುತ್ತ ಸುಂದರಿ ಹೇಳಿದಳು – "ಹಾಗೇನೂ ಆಗದು. ಕೊಳ್ಳಿ – ಹೊಗೆಸೊಪ್ಪು ಸೇದಿ. ನಿಮ್ಮ ಮುಖಕ್ಕೇ ಕಪ್ಪು ತಗಲುವುದು. ನನ್ನ ಒಡೆಯ ಕಷ್ಟದಲ್ಲಿದ್ದಾರೆಂಬುದನ್ನು ನೋಡಿ ನೀವು ನಗುತ್ತಿದ್ದೀರಿ. ಆದರೆ ಗೇಲಿ ಮಾಡುವ ಆ ಬಾಯಿ ಸೇದಿ ಹೋಗದೆ ಇರಲಾರದು."

ನಿತಾಯಿ ಒಂದು ಉಸಿರು ಹೊಗೆಸೊಪ್ಪು ಎಳೆದು ಚಿಲುಮೆಯನ್ನು ಬೀಸಾಡಿ ಎದ್ದು ನಿಂತ. ಸುಂದರಿ ಅವನ ಸೆಲ್ಲೆಯದ ಚುಂಗು ಹಿಡಿದು

ನಗುತ್ತ– “ ಕುಳಿತುಕೊಳ್ಳಿ–ಹೋಗಬೇಡಿ–ನನ್ನಾಣೆ ನಿಮಗೆ ” ಎಂದಳು.

ನಿತಾಯಿ ಕೋಪದಿಂದ ಅಧೀರನಾಗಿದ್ದರೂ ಸೆಲ್ಲೆಯವನ್ನು ಬಲವಾಗಿ ಎಳೆದು–“ ನರಕಕ್ಕೆ ಹೋಗು–ಹಾಳಾಗಿ ಹೋಗು ” ಎಂದು ಶಪಿಸಿ ದ್ರುತಗತಿಯಿಂದ ಮನೆಯಿಂದ ಹೊರಗೆ ಬಂದ.

ಸುಂದರಿ ಅಲ್ಲಿಯೇ ಕುಳಿತು ಸ್ವಲ್ಪ ಹೊತ್ತು ಮನದಣಿ ನಕ್ಕಳು. ಆ ಮೇಲೆ ಎದ್ದು ಬಾಗಿಲಿಕ್ಕಿಕೊಂಡು ಮೆಲ್ಲಮೆಲ್ಲನೆ ಮನದೊಳಗೇ– “ ಏನು ಅಂತರವಿದೆಯೆಂಪು ಕೇಳುತ್ತಾರೆ ! ಬ್ರಾಹ್ಮಣ ಎನ್ನಬೇಕು ಅವರಿಗೆ. ಇಷ್ಟೊಂದು ದುಃಖದಲ್ಲಿಯೂ ಅವರ ಮುಖದಲ್ಲಿ ಸದಾ ನಗುಮಲ್ಲಿಗೆ ಅರಳುತ್ತಿರುತ್ತದೆ. ದೃಷ್ಟಿ ಮೇಲೆತ್ತಿ ಅವರೆಡೆ ನೋಡಿದಾಗ ಶರೀರ ಬೆಂಕಿಯಂತೆ ಬೆಳಗುತ್ತಿರುವಂತೆ ತೋರುತ್ತದೆ ” ಎಂದುಕೊಂಡಳು.

೯

ಯಾರ ಕೃಪೆಯಿಂದಲೋ ಏನೋ, ಅಂತೂ ಅಂದಿನ ಘಟನೆ ವಿರಾಜಳ ಕಿವಿಯ ವರೆಗೆ ಹೋಗದೆ ಉಳಿಯಲಿಲ್ಲ. ಆ ವರ್ತಮಾನ ಮುಟ್ಟಿಸಿದವರು ಅದನ್ನು ವಿಕೃತಗೊಳಿಸಿ, ಉಪ್ಪು ಕಾರ ಬೆರಸಿ, ಅವಳ ಕಿವಿಗೆ ಬೀಳುವಂತೆ ಮಾಡಿದ್ದರು. ಆ ದಿನ ಆ ವಿಷಯವನ್ನು ಚರ್ಚಿಸುವುದಕ್ಕಾಗಿಯೇ ನೆರೆಮನೆಯ ಮುದಿ ಅತ್ತೆ ಬಂದಿದ್ದಳು. ಲಕ್ಷ್ಯಪೂರ್ವಕವಾಗಿ ಅವಳ ಮಾತನ್ನೆಲ್ಲ ಕೇಳಿದ ಬಳಿಕ ವಿರಾಜಳು ಗಂಭೀರವಾಗಿ–“ ನೋಡಿ ಅತ್ತೆ ! ನಿಜವಾಗಿ ನಿಮ್ಮ ಒಂದು ಕಿವಿಯನ್ನೇ ಕತ್ತರಿಸಬೇಕು ” ಎಂದಳು.

ಸೋದರತ್ತೆ ವಿಷಣ್ಣವದನಳಾಗಿ ಹೊರಟುಹೋದಳು. “ ನಾನು ಇವಳನ್ನು ಚನ್ನಾಗಿ ಬಲ್ಲೆ. ಹಳ್ಳಿಯಲ್ಲಿ ಇವಳಂಥ ರಕ್ಕಸಿ ಹೆಂಣು ಯಾರಾದರೂ ಇದ್ದಾರೆಯೆ ? ” ಎಂದು ದಾರಿಯಲ್ಲಿ ಒಟಗುಡುತ್ತ ಸಾಗಿದಳು.

ವಿರಾಜಳು ಗಂಡನನ್ನು ಕರೆದು– “ ಸುಂದರಿಯ ಬಳಿ ಪುನಃ ಹೋಗಿದ್ದಿರಾ ? ” ಎಂದು ವಿಚಾರಿಸಿದಳು.

ಭಯದಿಂದ ನೀಲಾಂಬರನ ಮುಖ ಬಾಡಿತು. ಅವನು ಸಂಕೋಚದಿಂದ – “ ಬಹಳ ದಿನಗಳಾಗಿದ್ದವು, ಪುಟ್ಟಿಯ ಸಮಾಚಾರ ತಿಳಿಯಲು

ಅವಳಲ್ಲಿಗೆ ಹೋಗಿದ್ದೆ ” ಎಂದ.

“ ಇನ್ನು ಮುಂದೆ ಅವಳಲ್ಲಿಗೆ ಹೋಗಬೇಡಿ. ಅವಳ ಶೀಲ ಚನ್ನಾಗಿಲ್ಲ ವೆಂದು ಎಲ್ಲ ಕಡೆಯೂ ಸುದ್ದಿ ಹಬ್ಬಿದೆ ” ಎಂದು ವಿರಾಜಳು ತನ್ನ ಕೆಲಸದಲ್ಲಿ ತೊಡಗಿಕೊಂಡಳು. ಮುಂದೆ ಎಷ್ಟೋ ದಿನಗಳುರುಳಿದವು. ಸೂರ್ಯನಾರಾಯಣ ನಿತ್ಯವೂ ಮೂಡುತ್ತಿದ್ದ, ಮುಳುಗುತ್ತಿದ್ದ. ಅವನ ಈ ನಿತ್ಯಕರ್ಮದಲ್ಲಿ ಅಡ್ಡಿ ಆತಂಕವನ್ನೊಡ್ಡುವಂತಿಲ್ಲ. ಹೀಗೆ ಒಂದೊಂದೇ ದಿನವಾಗಿ ಕ್ರಮಶಃ ಚಳಿಗಾಲವೂ ಸಂದಿತು, ಬೇಸಿಗೆಯೂ ಕಳೆಯುತ್ತ ಬಂದಿತು. ವಿರಾಜಳ ಮುಖದ ಮೇಲೆ ಕಪ್ಪು ಮೋಡ ಕವಿದಿತ್ತು. ಅದು ಕ್ರಮಶಃ ಗಾಢವಾಗುತ್ತ ಬಂದಿತು. ಅಲ್ಲದೆ, ದಿನಗಳೆದಂತೆ ಅವಳ ಕಂಣು ಕ್ಲಾಂತವಾಗಿಯೂ ಉಜ್ವಲ ವಾಗಿಯೂ ತೋರತೊಡಗಿದವು. ಅವಳ ಮುಖವನ್ನು ನೋಡುವ ಸಾಹಸಿಗನ ಕಂಣು ತಾನಾಗಿಯೆ ನೆಲಕ್ಕೆ ಇಳಿಯುತ್ತಿದ್ದವು. ವಿಷದ ಹಾವು ಭಲ್ಲೆಯದಿಂದ ತಿವಿಯಲ್ಪಟ್ಟಾಗ ಆ ಭಲ್ಲೆಯವನ್ನೇ ಕಚ್ಚಿ ಕಚ್ಚಿ ಬೇಸತ್ತು ಅಶಕ್ತಗೊಂಡು ಅದನ್ನೇ ನಿರಿಕಿಸುವಂತೆ ವಿರಾಜಳ ದೃಷ್ಟಿ ಕರುಣರಸಾಯುಕ್ತವೂ ಭೀಷಣವೂ ಆಗಿತ್ತು. ಇತ್ತೀಚೆ ಗಂಡನೊಂದಿಗೆ ಅವಳ ಮಾತುಕತೆ ಪೂರ್ಣವಾಗಿ ನಿಂತಿತ್ತು. ಬಹುಶಃ ನೀಲಾಂಬರ ಹೊರಗೆ, ದೂರ ದೂರವೇ ಇದ್ದುಬಿಡುತ್ತಿದ್ದ. ನಡು ನಡುವೆ ಕಳ್ಳನಂತೆ ಯಾವಾಗಾದರೊಮ್ಮೆ ಬರುತ್ತಿದ್ದರೂ ಪುನಃ ಕಳ್ಳನಂತೆ ಸುಳಿವಿಲ್ಲದೆ ನುಸುಳಿ ಹೋಗುತ್ತಿದ್ದ! ವಿರಾಜಳೂ ಅವನ ಬರುಹೋಗುವಿಕೆಯ ಕಡೆಗೆ ಲಕ್ಷ್ಯವಿಲ್ಲವೆನ್ನುವಂತೆ ಇರುತ್ತಿದ್ದಳು.

ಇತ್ತೀಚೆಗೆ ವಿರಾಜಳನ್ನು ಕಂಡರೆ ಎಲ್ಲರಿಗೂ ಭಯ. ಅವಳಿಗೆ ಹೆದರ ದಿದ್ದವಳು ಮೋಹಿನಿ ಮಾತ್ರ. ಅವಳು ಸಮಯ ದೊರೆತಾಗ ನಡುನಡುವೆ ಬಂದು ವಿರಾಜಳಿಗೆ ಉಪದ್ರವ ಕೊಡುತ್ತಿದ್ದಳು. ಅವಳಿಂದ ಪಾರಾಗಲು ಮೊದಮೊದಲು ವಿರಾಜಳು ಬಹು ಪ್ರಯತ್ನಿಸಿದಳು. ಆದರೆ ಅದರಿಂದ ಯಾವ ಲಾಭವೂ ಆಗಲಿಲ್ಲ. ವಿರಾಜಳು ಕಂಣು ಕೆಂಪಗೆ ಮಾಡಿದರೆ ಮೋಹಿನಿ ಅವಳ ಕೊರಳನ್ನಪ್ಪಿಕೊಳ್ಳುವಳು ; ಸಿಡುಕಿದರೆ ಕಾಲುಗಳನ್ನುಗಟ್ಟಿಯಾಗಿ ಹಿಡಿದು ಕೊಳ್ಳುತ್ತಿದ್ದಳು.

ಅಂದು ದಸರೆ. ತೀರ ನಸುಕಿಗೆ ಎದ್ದು ಮೋಹಿನಿ ಮೆತ್ತಗೆ ಬಂದು ವಿರಾಜ ಳನ್ನು ಎಬ್ಬಿಸಿ – “ ಅಕ್ಕ, ಇನ್ನೂ ಯಾರೂ ಎಚ್ಚತ್ತಿಲ್ಲ. ನಡೆ, ನದಿಗೆ ಹೋಗಿ ಒಂದು ಮುಳುಗುಹಾಕಿ ಬರೋಣ ” ಎಂದಳು.

ನದಿಯಾಚೆಗೆ ಜಮೀನುದಾರನ ಘಟ್ಟ ಕಟ್ಟಿದಂದಿನಿಂದಲೇ ವಿರಾಜಳು ಹೊಳೆಯಲ್ಲಿ ಮಿಾಯುವುದನ್ನು ಬಿಟ್ಟಿದ್ದಳು.

ಅಂದು ಮೋಹಿನಿಯ ಆಗ್ರಹದಿಂದ ಓರಗಿತ್ತಿಯರು ಮಿೂಯಲು ನದಿಗೆ ಹೋದರು. ಮಿಂದ ಬಳಿಕ ನೀರು ತುಂಬಿಕೊಂಡು ಮರಳುವಾಗ ಒಮ್ಮೆಗೇ ಅವರ ದೃಷ್ಟಿ ಜಮಿೂನುದಾರ ರಾಜೇಂದ್ರಕುಮಾರನ ಮೇಲೆ ಬಿದ್ದಿತು. ಆತ ಒಂದು ಗಿಡದಡಿಯಲ್ಲಿ ನಿಂತಿದ್ದ. ಆಗ ಇನ್ನೂ ಕತ್ತಲಿದ್ದುದರಿಂದ ಚನ್ನಾಗಿ ಕಾಣಿಸುತ್ತಿದ್ದಿಲ್ಲ. ಆದರೂ ಆ ಓರಗಿತ್ತಿಯರು ರಾಜೇಂದ್ರನನ್ನು ಗುರುತಿಸಿದರು. ಮೋಹಿನಿಗೆ ಹೆದರಿಕೆಯಿಂದ ಬವಳಿ ಬಂದಂತಾಯಿತು. ಅವಳು ವಿರಾಜಳ ಹಿಂದೆ ಸರಿದು ನಿಂತುಕೊಂಡಳು. ವಿರಾಜಳು ಅತ್ಯಂತ ಸೋಜಿಗಗೊಂಡು ಮನದಲ್ಲೇ– " ಈ ವ್ಯಕ್ತಿ ಇಷ್ಟು ನಸುಕಿನಲ್ಲಿ ಇಲ್ಲಿ ಹೇಗೆ ಬಂದ? " ಎಂದು ಯೋಚಿಸಿದಳು. ಆದರೆ ಮರು ಕ್ಷಣದಲ್ಲೇ ಅವಳಿಗೆ ಯೋಚನೆಯೊಂದು ಹೊಳೆಯಿತು: ಕದಾಚಿತ್ ಈ ವ್ಯಕ್ತಿ ನಿತ್ಯವೂ ಈ ರೀತಿ ಇಲ್ಲಿ ಕಾಯುತ್ತಿರಬಹುದು. ಸ್ವಲ್ಪ ಹೊತ್ತು ದ್ವಿಧಾದ್ವಂದ್ವದಲ್ಲಿ ಮುಳುಗಿದ ಬಳಿಕ ಅವಳು ಓರಗಿತ್ತಿಯ ಕೈ ಹಿಡಿದು – " ಇಲ್ಲೇಕೆ ನಿಂತೆ ತಂಗಿ, ಮನೆಗೆ ಹೋಗೋಣ ನಡೆ " ಎಂದಳು.

ವಿರಾಜಳು ಓರಗಿತ್ತಿಯನ್ನು ಪಕ್ಕಕ್ಕೆ ಕರೆದುಕೊಂಡು ದ್ರುತಗತಿಯಿಂದ ಅವಳನ್ನು ಮನೆಗೆ ಮುಟ್ಟಿಸಿದಳು. ಬಳಿಕ ಯಾವ ವಿಚಾರ ಮೂಡಿತೋ ಏನೋ, ಅಲ್ಲಿಯೇ ನಿಂತುಬಿಟ್ಟಳು. ಸ್ವಲ್ಪ ಸಮಯ ತಡೆದು ಸಾವಕಾಶವಾಗಿ ರಾಜೇಂದ್ರನ ಬಳಿಗೆ ಬಂದಳು. ಅವಳ ಕಂಣುಗಳೆರಡೂ ಬೆಂಕಿ ಕಾರುತ್ತಿದ್ದವು. ಆ ಕಗ್ಗತ್ತಲಲ್ಲಿಯೂ ಅವಳ ಆ ಉಗ್ರದೃಷ್ಟಿಯನ್ನು ಸಹಿಸಲಾರದೆ ರಾಜೇಂದ್ರ ನತಮುಖನಾದ.

ವಿರಾಜಳು ಶಾಂತಚಿತ್ತಳಾಗಿ – " ನೀವು ದೊಡ್ಡ ಮನುಷ್ಯರು. ಅಲ್ಲದೆ ನಿಮ್ಮ ಮನೆತನವೂ ಪ್ರತಿಷ್ಠಿತ ಮನೆತನ. ಆದರೆ ನೀವು ಕೈಹಾಕಿದ ಕಾರ್ಯ ಮಾತ್ರ ಅತಿ ಹೀನಕಾರ್ಯ " ಎಂದಳು.

ರಾಜೇಂದ್ರ ಪೆಚ್ಚನಂತಾಗಿ ಏನೂ ಉತ್ತರ ಕೊಡದವನಾದ.

ವಿರಾಜ ಹೇಳುತ್ತಲೇ ಹೋದಳು – " ನೀವು ದೊಡ್ಡ ಜಮೀನುದಾರರಿರಬಹುದು. ಆದರೆ ಈಗ ನೀವು ನಿಂತಿರುವುದು ನಮ್ಮ ಭೂಮಿಯ ಮೇಲೆಂಬುದನ್ನು ಬಲ್ಲಿರಾ ? "

ಅವಳು ನದಿಯ ಆಚೆಯ ದಡದ ಘಟ್ಟವನ್ನು ಕೈಯಿಂದ ತೋರಿಸಿ ಇನ್ನೂ

ಹೇಳಿದಳು : “ ನೀವೆಷ್ಟು ನೀಚರೆಂಬುದನ್ನು ಆ ಗಟ್ಟದ ಪ್ರತಿಯೊಂದು ಇಟ್ಟಿಗೆಯೂ ಬಲ್ಲುದು, ನಾನೂ ಬಲ್ಲೆ. ಬಹುಶಃ ನಿಮಗೆ ತಾಯಿ–ತಂಗಿಯರಾರೂ ಇರಲಿಕ್ಕಿಲ್ಲ. ಇಲ್ಲಿ ಕಾಲಿಡಕೂಡದೆಂದು ನಾನು ಬಹು ದಿನಗಳ ಹಿಂದೆಯೇ ನಮ್ಮ ಒಕ್ಕಲುಗಿತ್ತಿಯ ಮೂಲಕ ಹೇಳಿಕಳುಹಿದ್ದೆ. ಆದರೆ ನೀವು ನನ್ನ ಮಾತಿಗೆ ಮನ್ನಣೆ ಕೊಡಲಿಲ್ಲ. ”

ರಾಜೇಂದ್ರನಿಗೆ ಪಂಗುಬಡೆದಂತಾಗಿ ಅವನ ಬಾಯಿಂದ ಒಂದು ಮಾತೂ ಹೊರಡಲಿಲ್ಲ.

ವಿರಾಜಳು ಪುನಃ ಹೇಳತೊಡಗಿದಳು : “ ನೀವು ನನ್ನ ಯಜಮಾನರನ್ನು ಗುರುತಿಸಿರಲಿಕ್ಕಿಲ್ಲ. ಗುರುತಿಸಿದ್ದರೆ ಇಲ್ಲಿ ಕಾಲಿಡುವ ಸಾಹಸ ಮಾಡುತ್ತಿದ್ದಿಲ್ಲ. ಆದುದರಿಂದ ಇಂದು ನಾನು ನಿಮಗೆ ಹೇಳುವುದಿಷ್ಟೇ : ಇನ್ನು ಮುಂದೆ ಇಲ್ಲಿ ಕಾಲಿಡುವ ಮೊದಲು ಅವರನ್ನೊಮ್ಮೆ ಚನ್ನಾಗಿ ಗುರುತಿಸುವ ಕಷ್ಟ ತೆಗೆದುಕೊಳ್ಳಿ. ” ಹೀಗೆ ಎಚ್ಚರಿಕೆಯಿತ್ತು ಅಲ್ಲಿಂದ ಹೊರಟು ಮೆಲ್ಲಮೆಲ್ಲನೆ ಮನೆಯ ಬಾಗಿಲಿಂದ ಒಳಗೆ ಹೋಗುವಾಗಲೆ ಪೀತಾಂಬರ ಕೈಯಲ್ಲಿ ಲೋಟ ಹಿಡಿದುಕೊಂಡು ತನ್ನ ಮನೆಬಾಗಿಲಲ್ಲಿ ನಿಂತಿದ್ದುದನ್ನು ಕಂಡಳು.

ಎಷ್ಟೋ ದಿನಗಳಿಂದ ಅತ್ತಿಗೆ ಭಾವಮೈದುನರಲ್ಲಿ ಮಾತುಕತೆ ನಿಂತಿತ್ತು. ಆದರೂ ಪೀತಾಂಬರ ವಿರಾಜಳನ್ನು ಕರೆದು–“ಅತ್ತಿಗೆ, ನೀನು ಇಷ್ಟು ಹೊತ್ತು ಮಾತನಾಡುತ್ತಿದ್ದೆಯಲ್ಲ, ಅವರು ಇಲ್ಲಿಯ ಜಮೀನುದಾರರಲ್ಲವೆ ? ” ಎಂದ. ಕ್ಷಣಮಾತ್ರದಲ್ಲಿ ವಿರಾಜಳ ಮುಖ ಕೆಂಪಾಯಿತು. ಅವಳು ‘ ಹುಂ ’ ಎಂದವಳೇ ಒಳಗೆ ಹೋದಳು.

ಮನೆ ಸೇರಿದೊಡನೆಯೇ ವಿರಾಜಳು ತನ್ನ ವಿಷಯವನ್ನು ಮರೆತಳು. ಆದರೆ ಓರಗಿತ್ತಿಯ ಬಗೆಗೆ ಅತ್ಯಂತ ಕಸಿವಿಸಿಪಡತೊಡಗಿದಳು. ಮೈದುನ ಅವಳನ್ನು ನೋಡಿದನೇ ಹೇಗೆ ? – ಎಂಬುದೇ ಅವಳಿಗೆ ಯೋಚನೆ. ಆದರೆ ವಿರಾಜಳಿಗೆ ಬಹಳ ಹೊತ್ತು ಯೋಚನೆಮಾಡುವ ಆಗತ್ಯಬೀಳಲಿಲ್ಲ. ಹತ್ತೇ ನಿಮಿಷಗಳಲ್ಲಿ ಪೀತಾಂಬರನ ಮನೆಯಿಂದ ಹೊಡೆಯುವ ಸದ್ದೂ, ಜೊತೆಗೆ ಹತ್ತಿಕ್ಕಿ ಅಳುವ, ಹಾಗೂ ಕಾತರತೆಯಿಂದ ಬೇಡಿಕೊಳ್ಳುವ ದನಿಯೂ ಕೇಳಿಬಂತು.

ವಿರಾಜಳು ಓಡಿಹೋಗಿ ಅಡುಗೆಮನೆಯಲ್ಲಿ ಕಲ್ಲುಮೂರ್ತಿಯಂತೆ ಕುಳಿತಳು.

ನೀಲಾಂಬರ ಆಗ ಅರೆನಿದ್ದೆಯಿಂದೆದ್ದು ಹೊರಗೆ ಮುಖತೊಳೆಯತೊಡ ಗಿದ್ದ. ಪೀತಾಂಬರ ಗುಡುಗುದನಿಯಲ್ಲಿ ಗರ್ಜಿಸುತ್ತಿದ್ದನಲ್ಲದೆ ಪಟ್ ಪಟ್ಟೆಂದು ಹೆಂಡತಿಯನ್ನು ಬಡೆಯುತ್ತಿದ್ದ. ನೀಲಾಂಬರ ಇದೆಲ್ಲವನ್ನೂ ಒಂದು ಗಳಿಗೆ. ಕಿವಿಗೊಟ್ಟು ಕೇಳಿದ ಬಳಿಕ ಒಂದೇ ಏಟಿಗೆ ಬಿದಿರುತಟ್ಟಿಯನ್ನು ಒದ್ದು ಮುರಿದು ಪೀತಾಂಬರನ ಮನೆಗೆ ನುಗ್ಗಿದ.

ತಟ್ಟಿ ಮುರಿದ ಸದ್ದು ಕೇಳಿ ಚಕಿತನಾದ ಪೀತಾಂಬರ ಮೊಗವೆತ್ತಿದ. ಪಕ್ಕದಲ್ಲೇ ಅಂಣ ಯಮನಂತೆ ನಿಂತುದನ್ನು ನೋಡಿ ಜೆಪ್ಪಾಗಿ ಸುಮ್ಮನೆ ನಿಂತುಬಿಟ್ಟ.

ನೆಲದ ಮೇಲೆ ಉರುಳಾಡುತ್ತಿದ್ದ ನಾದಿನಿಯನ್ನು ಕುರಿತು ನೀಲಾಂಬರ– 'ಏಳಮ್ಮಾ, ಒಳಗೆ ಹೋಗು. ಇನ್ನು ಹೆದರಬೇಡ, ನಾನಿದ್ದೇನೆ" ಎಂದ.

ಮೋಹಿನಿ ನಡುಗುತ್ತಿದ್ದಂತೆಯೇ ಎದ್ದು ಒಳಗೆ ಹೋದಳು. ಬಳಿಕ ನೀಲಾಂಬರ ಸ್ವಾಭಾವಿಕ ದನಿಯಿಂದ–" ನಿನ್ನ ಹೆಂಡತಿಯ ಇದಿರಿಗೇ ನಿನ್ನ ಅಪಮಾನ ಮಾಡಬಯಸುವುದಿಲ್ಲ. ಆದರೆ ನಾನು ಇಲ್ಲಿರುವ ವರೆಗೆ ಇನ್ನು ಮುಂದೆ ಇಂಥ ಕೆಲಸ ಸಾಗದೆಂದು ನಿಶ್ಚಯವಾಗಿ ತಿಳಿದುಕೊ. ಇನ್ನು ನಿನ್ನ ಹೆಂಡತಿಯ ಮೇಲೆ ಕೈಯೆತ್ತಿದರೆ ಆ ಕೈಯನ್ನೇ ಮುರಿದುಬಿಟ್ಟೇನು" ಎಂದ ವನೇ ಹೊರಡಲುದ್ಯುಕ್ತನಾದ. ಅಷ್ಟರಲ್ಲಿ ಹೇಗೋ ಧೈರ್ಯ ತಂದುಕೊಂಡು ಪೀತಾಂಬರನೆಂದ: "ಮನೆಯಲ್ಲಿ ನುಗ್ಗಿ ಹೊಡೆಯಲು ನೀನೇನೋ ಬಂದೆ. ನಿಜ. ಆದರೆ ನಾನೇಕೆ ಅವಳನ್ನು ಬಡೆದೆನೆಂದು ನೀನು ಬಲ್ಲೆಯಾ ?"

ನೀಲಾಂಬರ ಹೊರಳಿ ನಿಂತು–" ಇಲ್ಲ, ನನಗೆ ಗೊತ್ತಿಲ್ಲ. ಅದನ್ನು ತಿಳಿದು ಕೊಳ್ಳುವ ಇಚ್ಛೆಯೂ ಇಲ್ಲ" ಎಂದು ಬಿರಿನುಡಿದ.

"ನಿನಗೆ ತಿಳಿದುಕೊಳ್ಳುವ ಅಗತ್ಯವಿರಲಿಕ್ಕಿಲ್ಲ. ಆದರೆ ನಾನು ಈ ಮನೆ ಬಿಟ್ಟು ಬೇರೆ ಮನೆ ಮಾಡದೆ ಗತ್ಯಂತರವಿಲ್ಲ" ಎಂದ ಪೀತಾಂಬರ.

ನೀಲಾಂಬರ ತಮ್ಮನ ಮುಖವನ್ನೇ ದಿಟ್ಟಿಸುತ್ತಾ ನಿಂತು ಹೇಳಿದ: "ಮನೆ ಬಿಟ್ಟು ಯಾರು ಹೋಗಬೇಕಾದೀತೆಂಬುದನ್ನು ನಾನು ಬಲ್ಲೆ ಪೀತಾಂಬರಾ ! ಅದನ್ನು ನೀನು ನೆನಪುಮಾಡುವ ಅಗತ್ಯವಿಲ್ಲ. ಆದರೆ ಒಂದು ಸರಿಯಾದ ವ್ಯವಸ್ಥೆಯಾಗುವ ವರೆಗೆ ನೀನು ಇದನ್ನೆಲ್ಲ ಸಹಿಸಿಕೊಳ್ಳುವ ಧೈರ್ಯತಂದುಕೊಳ್ಳ ಬೇಕು. ಈ ಮಾತನ್ನು ಈಗಲೇ ನಿನಗೆ ತಿಳಿಸಿಬಿಡುತ್ತೇನೆ."

ಹೀಗೆಂದು ನೀಲಾಂಬರ ಹೋಗತೊಡಗಿದ. ಆದರೆ ಪೀತಾಂಬರನು ದಾರಿ

ಅಡ್ಡಗಟ್ಟಿ ಅಣ್ಣನೆದುರಿಗೆ ಬಂದು ನಿಂತು "ನಿನಗೆ ಒಂದು ಮಾತು ಸ್ಪಷ್ಟವಾಗಿ ಹೇಳುವುದಿದೆ ಅಂಣಾ! ಮತ್ತೊಬ್ಬರಿಗೆ ಬುದ್ಧಿ ಹೇಳುವ ಮೊದಲು ನಿನ್ನ ಮನೆಯವರಿಗೇ ಬುದ್ಧಿ ಹೇಳುವುದು ಒಳಿತು" ಎಂದ.

ನೀಲಾಂಬರ ಪುನಃ ತಮ್ಮನ ಮುಖವನ್ನೇ ದಿಟ್ಟಿಸಿ ನೋಡತೊಡಗಿದ. ಅದರಿಂದ ಮತ್ತಿಷ್ಟು ಉತ್ತೇಜಿತನಾಗಿ ಪೀತಾಂಬರನೆಂದ–"ನದಿಯ ಆಚೆಯ ದಡದ ಗಟ್ಟವನ್ನು ಯಾರು ಕಟ್ಟಿಸಿದರೆಂದು ನಿನಗೆ ಗೊತ್ತಿರಬಹುದು. ಅದನ್ನು ಕಟ್ಟಿದಂದಿನಿಂದಲೇ ನದಿಯ ಕಡೆಗೆ ಹೋಗಕೂಡದೆಂದು ನನ್ನ ಹೆಂಡತಿಗೆ ಅಪ್ಪಣೆಮಾಡಿದ್ದೆ. ಆದರೆ ಇಂದು ಇನ್ನೂ ಬೆಳಕು ಹರಿಯುವ ಮೊದಲೇ ಅವಳು ಅತ್ತಿಗೆಯೊಂದಿಗೆ ಮೀಯಲು ನದಿಗೆ ಹೋಗಿದ್ದಳು. ಯಾರು ಬಲ್ಲರು ?– ಇವರು ಹೀಗೆ ನಿತ್ಯ ಹೋಗುತ್ತಿರಲೂ ಬಹುದು. ಇವರ ಮೇಲೆ ಯಾವಾಗಲೂ ಯಾರು ಕಣ್ಣಿಟ್ಟುಕೊಂಡೇ ಇರುತ್ತಾರೆ ?"

ಆಶ್ಚರ್ಯಚಕಿತನಾಗಿ ನೀಲಾಂಬರ– "ಸರಿ, ಈ ಕಾರಣದಿಂದಲೇ ನೀನು ಅವಳ ಮೇಲೆ ಕೈಯೆತ್ತಿದೆಯಾ ?" ಎಂದ.

"ಮೊದಲು ನನ್ನ ಮಾತನ್ನೆಲ್ಲ ಸರಿಯಾಗಿ ಕೇಳು. ಅವನು ಹೇಳಿ ಕೇಳಿ ಜಮೀನುದಾರನ ಮಗ. ರಾಜೇಂದ್ರಬಾಬೂ ಎಂದೇನೋ ಇರಬೇಕು ಅವನ ಹೆಸರು. ಅವನ ನಡತೆಯ ವಿಷಯ ಹಳ್ಳಿ ಪಟ್ಟಣಗಳಲ್ಲೆಲ್ಲಾ ಗೊತ್ತಾಗಿದೆ. ಅಂಥ ಸಂಭಾವಿತನೊಂದಿಗೆ ಇಂದು ಅತ್ತಿಗೆ ಅರ್ಧ ಗಂಟೆ ಮಾತಾಡಿದಳು. ಅಲ್ಲ! ಅವನೊಂದಿಗೆ ಮಾತಾಡುವುದಾದರೂ ಏನಿತ್ತು ಇವಳಿಗೆ?"

ಪೀತಾಂಬರನ ಮಾತಿನ ಅರ್ಥ ನೀಲಾಂಬರನಿಗೆ ಸರಿಯಾಗಿ ಆಗಲಿಲ್ಲ. ಆದ್ದರಿಂದ–"ಯಾರು ಮಾತಾಡುತ್ತಿದ್ದುದು, ವಿರಾಜಳೇನು ?" ಎಂದು ಕೇಳಿದ ಅವನು.

"ಹೌದು, ಅವಳೇ."

"ನೀನು ಕಣ್ಣಾರೆ ನೋಡಿದೆಯಾ ?"

ಪೀತಾಂಬರ ತನ್ನ ಮುಖವನ್ನು ವಿಚಿತ್ರವಾಗಿ ಮಾಡಿದ. ಅವನ ಮುಖದ ಮೇಲೆ ಕೊಂಕು ಹಾಸ್ಯವಿತ್ತು. ಅವನು –"ನೀನು ಯಾವಾಗಲೂ ನನ್ನನ್ನು ಈರ್ಷೆಯಿಂದಲೂ ಸಂದೇಹದಿಂದಲೂ ಕಾಣುವೆಯೆಂದು ನಾನು ಬಲ್ಲೆ. ನಮ್ಮಿಬ್ಬರ ನ್ಯಾಯ ಅನ್ಯಾಯಗಳ ತೀರ್ಮಾನ ಭಗವಂತನೇ ಮಾಡಲಿ. ಆದರೆ.." ಎನ್ನುವಷ್ಟರಲ್ಲಿ ನೀಲಾಂಬರ ಗರ್ಜಿಸಿದ: "ಭಗವಂತನ ಹೆಸರು ತೆಗೆಯುವ

ದೇಕೆ ? ಬೊಗಳಬೇಕಾದುದನ್ನು ಸುಮ್ಮನೆ ಬೊಗಳು."

ಪೀತಾಂಬರ ಮೊದಲು ಬೆಪ್ಪಾದ. ಬಳಿಕ ತನ್ನನ್ನು ಸಾವರಿಸಿಕೊಂಡು ಮುನಿಸಿನಿಂದ–"ಕಂಣಾರೆ ನೋಡದೆ ಯಾವ ಮಾತೂ ಆಡುವ ಸ್ವಭಾವ ನನ್ನದಲ್ಲ. ನಿನ್ನ ಮನೆಯವರನ್ನೇ ಸರಿಯಾಗಿ ಹಿಡಿತದಲ್ಲಿಟ್ಟುಕೊಳ್ಳಲಾರದ ನೀನು ಮತ್ತೊಬ್ಬರನ್ನು ಹಿಡಿತದಲ್ಲಿಟ್ಟುಕೊಳ್ಳಲು ಮಾತ್ರ ಮುಂದೆಬರುವುದು ಸರಿಯೆ ?" ಎಂದ.

ನೀಲಾಂಬರನ ತಲೆಯ ಮೇಲೆ ವಜ್ರದೇಟು ಬಿದ್ದಂತಾಯಿತು. ಅರೆಗಳಿಗೆ ಭ್ರಮೆಗೊಂಡಂತಾಗಿ ದಿಟ್ಟಿಸುತ್ತ ನಿಂತ ಬಳಿಕ ಅವನು–"ಅರ್ಧ ಗಂಟೆ ಮಾತನಾಡುತ್ತ ನಿಂತಿದ್ದಳೆ! ಯಾರು–ವಿರಾಜಳೆ ? ಕಣ್ಣಾರೆ ಕಂಡೆಯಾ?" ಎಂದ.

ಪೀತಾಂಬರ ಒಂದು ಹೆಜ್ಜೆ ಹಿಂದೆ ಸರಿದು–"ನನ್ನ ಕಂಣಿನಿಂದ ನಾನೇ ನೋಡಿದ್ದೇನೆ. ಬಹುಶಃ ಅದಕ್ಕಿಂತ ಹೆಚ್ಚು ಹೊತ್ತೇ ಇರಬಹುದು" ಎಂದ.

ಕೊಂಚ ಹೊತ್ತು ನೀರವವಾಗಿ ದಿಟ್ಟಿಸಿ ನೀಲಾಂಬರ ಕೇಳಿದ– "ಆಗಲಿ, ಅವಳು ಮಾತಾಡುತ್ತಿದ್ದಳೆಂದೇ ಇಟ್ಟುಕೊ. ಆದರೆ ಅವಳು ಮಾತನಾಡುವ ಅಗತ್ಯವಿರಲಿಲ್ಲವೆಂದು ನೀನು ಹೇಗೆ ತಿಳಿದೆ ?"

ಪೀತಾಂಬರ ಮುಖ ಹೊರಳಿಸಿ ನಕ್ಕು–"ಅದೇನೋ ನನಗೆ ತಿಳಿಯದು. ಆ ಗಟ್ಟ ಏರ್ಪಟ್ಟುದು ನನ್ನ ಹೆಂಡತಿಗಾಗಿ ಅಲ್ಲವೆಂಬುದು ಮಾತ್ರ ನನಗೆ ತಿಳಿದಿದೆ" ಎಂದ.

ಕ್ಷಣ ಹೊತ್ತು ನೀಲಾಂಬರ ಸಿಡಿಬೆಂಕಿಯಾಗಿ ಎರಡೂ ಕೈಗಳನ್ನೆತ್ತಿ ಪೀತಾಂಬರನೆಡೆಗೆ ಓಡಿದ. ಆದರೆ ನಡುವೆಯೇ ನಿಂತುಬಿಟ್ಟ. ಬಳಿಕ ಅವನ ಮುಖವನ್ನೇ ನೋಡುತ್ತ–"ನೀನೊಬ್ಬ ಶುದ್ಧ ಪಶು. ಮೇಲಾಗಿ ನನ್ನ ಒಡಹುಟ್ಟಿದ ತಮ್ಮ. ನಾನು ಅಣ್ಣನಾಗಿ ನಿನಗೆ ಕೆಟ್ಟುದನ್ನು ಬಗೆಯಲಾರೆ. ಆದ್ದರಿಂದ ನಿನ್ನನ್ನು ಕ್ಷಮಿಸಿದ್ದೇನೆ. ಆದರೆ ನೀನು ಗುರುಹಿರಿಯರಿಗೆ ಕಲಂಕದ ಮಾತುಗಳನ್ನಾಡಿರುವೆ. ಆದ್ದರಿಂದ ದೇವರು ಮಾತ್ರ ನಿನ್ನನ್ನು ಕ್ಷಮಿಸನು. ತೊಲಗು ಇಲ್ಲಿಂದ ಕೂಡಲೇ" ಎಂದು ಬಿರುನುಡಿದ. ಬಳಿಕ ಮೆಲುನಡಿಗೆಯಿಂದ ಮನೆಗೆ ಬಂದು ತಾನು ಮುರಿದ ತಟ್ಟಿಯನ್ನು ಪುನಃ ತಾನೇ ಕಟ್ಟತೊಡಗಿದ.

ವಿರಾಜಳು ಕಿವಿಗೊಟ್ಟು ಎಲ್ಲವನ್ನೂ ಕೇಳಿದಳು. ನಾಚಿಕೆ ಜುಗುಪ್ಸೆಗಳಿಂದ

ಅವಳ ಶರೀರವೆಲ್ಲವೂ ಒಂದೇ ಸಮನಾಗಿ ಕಂಪಿಸತೊಡಗಿತ್ತು. ರಾಜೇಂದ್ರ ಕುಮಾರನಿಗೂ ತನಗೂ ನಡೆದ ಮಾತುಕತೆಯನ್ನು ಗಂಡನೆದುರು ಹೋಗಿ ಹೇಳಬೇಕೆಂದು ಒಮ್ಮೆ ಎನಿಸಿತು ಅವಳಿಗೆ. ಆದರೆ ಅವಳಿಂದ ಹೆಜ್ಜೆ ಕೀಳ ಲಿಕ್ಕೇ ಆಗಲಿಲ್ಲ. ತನ್ನ ಸೌಂದರ್ಯದ ಮೇಲೆ ಪರ ಪುರುಷನೊಬ್ಬನ ಕಾಕ ದೃಷ್ಟಿ ಬಿದ್ದಿದೆಯೆಂದು ಅವಳು ತನ್ನ ಬಾಯಿಂದ ತಾನೇ ಗಂಡನೆದುರು ಹೇಗೆ ಹೇಳಬಲ್ಲಳು?

ತಟ್ಟೆ ಕಟ್ಟಿದ ನಂತರ ನೀಲಾಂಬರ ಹೊರಗೆ ಹೊರಟುಹೋದ. ಅವನ ಮಧ್ಯಾಹ್ನದ ಊಟಕ್ಕೆ ಎಲ್ಲವನ್ನೂ ಮೊದಲೇ ಅಣಿಮಾಡಿ, ವಿರಾಜಳು ಮರೆ ಯಲ್ಲಿ ದೂರವೇ ಕುಳಿತಳು. ರಾತ್ರಿ ಗಂಡ ನಿದ್ದೆಹೋದ ಮೇಲೆ ಸದ್ದಿಲ್ಲದೆ ಬಂದು ಮಲಗಿದಳು. ಬೆಳಿಗ್ಗೆ ಗಂಡ ಏಳುವ ಮೊದಲೇ ಕೋಣೆಯಿಂದ ಹೊರಬಿದ್ದಳು.

ಈ ರೀತಿ ದೂರ ದೂರವೇ ಇದ್ದು ವಿರಾಜಳು ಎರಡು ದಿನಗಳನ್ನು ದೂಡಿ ದಳು. ಈ ನಡುವೆ ನೀಲಾಂಬರ ಅವಳೊಂದಿಗೆ ಯಾವ ವಿಷಯವನ್ನೂ ಪ್ರಸ್ತಾ ಪಿಸಲಿಲ್ಲ. ಆಗ ಅವಳ ಹೃದಯದಲ್ಲಿ ಮತ್ತೊಂದು ಶಂಕೆ ಮೂಡತೊಡಗಿತು. ಹೆಂಡತಿಯಾದ ತನ್ನ ವಿಷಯವಾಗಿ ಇಂತಹ ಮಹಾಪರಾಧದ ವರ್ತಮಾನ ಕೇಳಿಯೂ ಗಂಡನ ಹೃದಯದಲ್ಲಿ ಯಾವುದೇ ಕುತೂಹಲ ಹುಟ್ಟದಿದ್ದು ದನ್ನು ಕಂಡು ಅವಳು ಅದರ ನಿಜಸಂಗತಿ ತಿಳಿಯಲಾರದವಳಾದಳು. ಬಹುಶಃ ಈ ಘಟನೆಯ ಬಗ್ಗೆ ಅವನು ವಿಸ್ಮಯಗೊಂಡಿರಬಹುದೆಂದು ಒಮ್ಮೆ ಭಾವಿಸಿ ದಳು. ಆದರೆ ಇದರಿಂದಲೂ ಅವಳ ಮನಸ್ಸಿಗೆ ನೆಮ್ಮದಿ ಎನಿಸಲಿಲ್ಲ. ಈ ಎರಡು ದಿನಗಳಿಂದ ಅವಳು—"ಈ ವಿಷಯದ ಮಾತು ಈಗ ಬರಬಹುದು. ತನ್ನನ್ನು ಕರೆದು ಈ ಸಂಗತಿಯ ವಿವರವನ್ನೆಲ್ಲ ಕೇಳಬಹುದು. ಆಗ ತಾನು ಮೊದಲಿನಿಂದ ಕೊನೆಯ ವರೆಗೆ ಸಂಭವಿಸಿದ ವೃತ್ತಾಂತವೆಲ್ಲವನ್ನೂ ನಿವೇದಿಸಿ ಗಂಡನ ಚರಣದಡಿಯಲ್ಲಿ ತನ್ನ ಹೃದಯದ ಭಾರವನ್ನು ಇಳಿಸಿಕೊಳ್ಳಬಹುದು. ಅದರಿಂದ ತನ್ನ ಮನಸ್ಸಿಗೆ ಶಾಂತಿ ದೊರೆಯುವುದು ಖಂಡಿತ" ಎಂಬ ಆಸೆ ತಳೆದು ಕುಳಿತಿದ್ದಳು. ಆದರೆ ಹಾಗೇನೂ ಆಗಲಿಲ್ಲ. ಅವಳ ಗಂಡ ಒಂದು ತುಟಿ ಎರಡು ಮಾಡಲಿಲ್ಲ.

ತನ್ನ ಗಂಡ ಆ ಮಾತಿನ ಮೇಲೆ ಬಹುಶಃ ಸ್ವಲ್ಪವೂ ವಿಶ್ವಾಸವಿಟ್ಟಿರಲಾರ ನೆಂಬ ಯೋಚನೆ ಅವಳ ಮನದಲ್ಲಿ ಒಮ್ಮೆ ಬಂದಿತು. ಆದರೆ ತಾನು ಹೀಗೆ ಅಡಗಿ

ಕುಳಿತುಕೊಳ್ಳುವುದರಿಂದ ಅವನ ಮನದಲ್ಲಿ ಇಲ್ಲದ ಸಂದೇಹ ಬರಲಾರದೆ? ರಾಜೇಂದ್ರನ ವಿಷಯವಾಗಿ ಎಲ್ಲ ಮಾತನ್ನೂ ಗಂಡನಿಗೆ ಹೇಳಿಬಿಡುವುದೇ ಸರಿ ಎಂದು ಒಮ್ಮೆ ಎಂದುಕೊಂಡಳು. ಆದರೆ ಮತ್ತೊಂದು ಯೋಚನೆ ಬಂತು: ಇಷ್ಟು ದಿನಗಳ ವರೆಗೆ ಅವನಿಂದ ಮರೆಮಾಚಿಟ್ಟ ವಿಷಯವನ್ನು ಅವನಾಗಿ ಎತ್ತದೆ ತಾನಾಗಿಯೆ ಹೇಗೆ ಹೇಳುವುದು?

ಆ ದಿನವೂ ಹಾಗೆಯೇ ಕಳೆಯಿತು. ಆದರೆ ಮೂರನೆಯ ಬೆಳಿಗ್ಗೆ ಭಯ ಪೀಡಿತವಾದ ಭಯಾತುರವಾದ ಹೃದಯದಿಂದ ವಿರಾಜಳು ವಿಹ್ವಲಳಾಗಿ ಕೆಲಸ ಮಾಡುತ್ತಿದ್ದಳು. ಒಮ್ಮೆಲೇ–ಗಂಡನು ಪೀತಾಂಬರನ ಮಾತನ್ನೇ ನಂಬಿ ಬಿಟ್ಟಿದ್ದರೆ ಹೇಗೆ?–ಎಂಬ ಭಯಂಕರವಾದ ಯೋಚನೆ ಅವಳ ಹೃದಯದ ಗಭೀರ ಅಂತರಾಳವನ್ನು ಮಥಿಸಿ ನೊರೆಯಂತೆ ಮೇಲಕ್ಕೆದ್ದು ಬಂದಿತು. ನೀಲಾಂಬರ ಆಗ ತಾನೇ ಸಂಧ್ಯೋಪಾಸನೆ ಮುಗಿಸಿ ಎದ್ದು ಹೋಗುತ್ತಲಿದ್ದ. ಅಷ್ಟರಲ್ಲಿ ಅವಳು ಬಿರುಗಾಳಿಯ ವೇಗದಿಂದ ಬಂದು ಅವನ ಮುಂದೆ ತೇಕುತ್ತ ನಿಂತಳು.

ವಿಸ್ಮಯದಿಂದ ನೀಲಾಂಬರ ಮೊಗವೆತ್ತಿ ನೋಡಿದ–ವಿರಾಜಳು ಹಲ್ಲು ಗಳಿಂದ ತುಟಿಗಳನ್ನು ಗಟ್ಟಿಯಾಗಿ ಅದುಮಿ ಹಿಡಿದು–"ಹೌದೆ, ನೀವು ನನ್ನೊಂದಿಗೆ ಏಕೆ ಮಾತಾಡುತ್ತಿಲ್ಲ? ಅಂತಹದೇನು ಮಾಡಿದೆ ನಾನು?" ಎಂದಳು.

ನೀಲಾಂಬರ ನಕ್ಕು–"ನೀನೇ ತಲೆಮರೆಸಿಕೊಂಡು ಓಡುತ್ತಿ. ಎಂದಮೇಲೆ ನಾನಾರ ಜೊತೆ ಮಾತನಾಡುವುದು?" ಎಂದ.

"ನಾನು ತಲೆಮರೆಸಿಕೊಂಡು ಓಡುವೆನೆ? ಏಕೆ, ನೀವು ಸ್ವಲ್ಪ ನನ್ನನ್ನು ಕೂಗಬಾರದೆ?"

ನೀಲಾಂಬರನೆಂದ: "ಯಾರು ಕಣ್ಣು ತಪ್ಪಿಸಿ ತಿರುಗಾಡುವರೋ ಅಂತಹರನ್ನು ಕೆಣಕಿ ಮಾತನಾಡಿಸಿದರೆ ಪಾಪಕ್ಕೆ ಗುರಿಯಾಗಬೇಕಾದೀತು."

"ಪಾಪಕ್ಕೆ ಗುರಿಯಾಗುವಿರಾ? ಇದರಿಂದ ನೀವು ನಿಮ್ಮ ತಮ್ಮನ ಮಾತನ್ನು ನಂಬಿಬಿಟ್ಟಿರುವಿರೆಂದು ಅರ್ಥವಾಗುತ್ತದೆ. ಅಹುದಲ್ಲವೆ?"

"ಸತ್ಯಸಂಗತಿಯನ್ನು ಅದೇಕೆ ನಂಬಕೂಡದು?"

ಕೋಪ ದುಃಖಗಳಿಂದ ವಿರಾಜಳು ಅತ್ತುಬಿಟ್ಟಳು. ಕಂಬನಿಯಿಂದ ವಿಕೃತವಾದ ಕಂಠದಿಂದ ಅವಳು–"ಅದು ನಿಜವಲ್ಲ, ಸಂಪೂರ್ಣ ಸುಳ್ಳು;

ಹದಿನಾರಾಣೆ ಸುಳ್ಳು. ನೀವು ಅದನ್ನೆಂತು ನಂಬಿದಿರಿ?" ಎಂದು ಚೀರಿ ಕೇಳಿದಳು.

"ಹಾಗಾದರೆ ನೀನು ನದಿಯ ದಂಡೆಯ ಮೇಲೆ ಅವನೊಂದಿಗೆ ಮಾತಾಡ ಲಿಲ್ಲವೆ?"

ವಿರಾಜಳು ಒಗರುದನಿಯಿಂದ-"ಹೌದು, ಮಾತನಾಡಿದೆ" ಎಂದಳು.

"ನಾನು ನಂಬಿದ್ದೂ ಅಷ್ಟೆ"-ಎಂದ ನೀಲಾಂಬರ.

ವಿರಾಜಳು ಕೈಯಿಂದ ಕಂಬನಿ ಒರೆಸಿಕೊಳ್ಳುತ್ತ ಕೇಳಿದಳು-"ನೀವು ನಂಬಿದ್ದೇ ನಿಜವಾದರೆ ನಿಮ್ಮ ಆ ನೀಚ ತಮ್ಮನಂತೆ ನೀವೂ ನನ್ನನ್ನು ಶಿಕ್ಷಿಸ ಲಿಲ್ಲವೇಕೆ?"

ನೀಲಾಂಬರ ಪುನಃ ನಕ್ಕುಬಿಟ್ಟ. ಅವನ ಮುಖದ ಮೇಲೆ ತೇಲಿದ ನಿರ್ಮಲ ಹಾಸ್ಯ ಅದೇ ಅರಳುತ್ತಿರುವ ಹೂವಿನಂತೆ ತೋರಿತು. ಅವನು ಬಲ ಗೈಯನ್ನು ಮುಂದೆಮಾಡಿ-"ಹಾಗಾದರೆ ನನ್ನ ಬಳಿಗೆ ಬಾ, ಚಿಕ್ಕಂದಿನಲ್ಲಿ ನಿನ್ನ ಕಿವಿ ಹಿಂಡಿದಂತೆ ಇಂದೂ ಹಿಂಡುತ್ತೇನೆ" ಎಂದ.

ವಿರಾಜಳು ತಕ್ಷಣ ಗಂಡನ ಹತ್ತಿರ ಬಂದು ಮೊಂಡೆಯೂರಿ ಕುಳಿತಳು. ಬಳಿಕ ಮರುಕ್ಷಣದಲ್ಲಿಯೆ ಅವನ ತೊಡೆಯ ಮೇಲೆ ಬಿಮ್ಮನೆ ಬೋರಲು ಬಿದ್ದು ತನ್ನ ಬಾಹುಗಳಿಂದ ಅವನ ಕೊರಳನ್ನು ಸುತ್ತಿ ಭೋರೆಂದು ಅಳತೊಡಗಿದಳು.

ನೀಲಾಂಬರ ಅವಳ ಅಳುವನ್ನು ತಡೆಯಲಿಲ್ಲ. ಸ್ವತಃ ಅವನ ಕಂಣು ಗಳೆರಡೂ ಒದ್ದೆಯಾದವು. ನೀರವತೆಯಿಂದ ಹೆಂಡತಿಯ ತಲೆಯ ಮೇಲೆ ಬಲಗೈಯಿರಿಸಿ ಮನಸ್ಸಿನಲ್ಲಿ ಅವಳನ್ನು ಆಶೀರ್ವದಿಸತೊಡಗಿದ.

ಬಹಳ ಸಮಯದ ನಂತರ, ಅಳುವಿನ ತೀಕ್ಷ್ಣತೆ ಕೊಂಚ ಕಡಿಮೆಯಾದ ಮೇಲೆ, ವಿರಾಜಳು ಮುಖವೆತ್ತದೆ-"ನಾನು ಅವನಿಗೆ ಏನು ಹೇಳಿದೆನೆಂದು ಬಲ್ಲಿರಾ?" ಎಂದು ಕೇಳಿದಳು.

ನೀಲಾಂಬರ ಇನಿದನಿಯಿಂದ ಸ್ನೇಹಪೂರ್ವಕವಾಗಿ "ಬಲ್ಲೆ, ಇನ್ನು ಮುಂದೆ ಇತ್ತ ಕಾಲಿಡಕೂಡದೆಂದು ಅವನಿಗೆ ಎಚ್ಚರಿಕೆ ಕೊಟ್ಟೆ" ಎಂದ.

"ಇದನ್ನು ಯಾರು ಹೇಳಿದರು ನಿಮಗೆ?"

ನೀಲಾಂಬರ ಮುಗುಳು ನಗುತ್ತ ನುಡಿದ: "ನನಗೆ ಯಾರೂ ಹೇಳಲಿಲ್ಲ. ಪರ ಪುರುಷನೊಂದಿಗೆ ಮಾತನಾಡಿದೆಯೆಂದ ಮೇಲೆ ಬಹು ದೊಡ್ಡ ಪೇಚಾಟಕ್ಕೆ ಸಿಕ್ಕಿಕೊಂಡೇ ಮಾತನಾಡಿರಬೇಕು. ಅಂಥ ಸಂದರ್ಭದಲ್ಲಿ ನೀನು ಹೀಗೆ

ಹೇಳದೆ ಇನ್ನೇನು ಹೇಳಬಲ್ಲೆ ವಿರಾಜ್ ? ”

ವಿರಾಜಳ ಕಂಣಿನಿಂದ ಪುನಃ ಕಂಬನಿ ಹರಿಯತೊಡಗಿತು. ಆಗ ನೀಲಾಂಬರನೆಂದ : “ ಆದರೂ ನೀನು ಹಾಗೆ ಮಾಡಬಾರದಾಗಿತ್ತು. ನೀನು ನನಗೆ ಆ ಬಗೆಗೆ ಸೂಚನೆಕೊಟ್ಟಿದ್ದರೆ ನಾನು ಹೋಗಿ ಅವನಿಗೆ ತಿಳಿಹೇಳುತ್ತಿದ್ದೆ. ಅವನ ಮನೋವೃತ್ತಿ ನನಗೆ ಈ ಮೊದಲೇ ಗೊತ್ತಾಗಿತ್ತು. ತೀರ ನಸುಕಿನಲ್ಲೇ ನಾನು ಅವನನ್ನು ಅನೇಕ ಸಲ ಇಲ್ಲಿ ಕಂಡಿದ್ದೇನೆ. ನೀನೇ ಜಮೀನುದಾರ ನೊಂದಿಗೆ ಕೀಟಲೆ ಬೇಡವೆಂಪೆ. ಆದ್ದರಿಂದಲೇ ನಾನು ತೆಪ್ಪಗಿದ್ದೆ. ”

ಆ ದಿನ ಸಂಜೆಯಿಂದಲೇ ಆಗಸದಲ್ಲಿ ಮೋಡ ಕವಿದಿತ್ತು. ತಡೆ-ತಡೆದು ಮಳೆಯ ಹನಿಗಳೂ ಉದುರುತ್ತಿದ್ದವು. ರಾತ್ರಿ ಮಲಗಿದಾಗ ಗಂಡ-ಹೆಂಡಿರಲ್ಲಿ ಪುನಃ ಅದೇ ವಿಷಯವಾಗಿ ಮಾತುಕತೆ ಮೊದಲಾಯಿತು.

ನೀಲಾಂಬರನೆಂದ: “ ಇಂದು ದಿನವೆಲ್ಲವೂ ನಾನು ಅವನ ದಾರಿ ನೋಡುತ್ತ ಕುಳಿತಿದ್ದೆ. ”

ವಿರಾಜಳು ಭಯಭೀತಳಾಗಿ–“ ಏಕೆ, ಅದೇಕೆ ? ” ಎಂದು ಕೇಳಿದಳು.

“ ನಾನು ಅವನಿಗೆ ಎರಡು ಮಾತು ಹೇಳದೆಹೋದರೆ ಭಗವಂತನ ದೃಷ್ಟಿಯಲ್ಲಿ ಅಪರಾಧಿಯಾಗುತ್ತೇನೆ. ”

ಭಯದಿಂದ ವಿರಾಜಳು ಎದ್ದು ಕುಳಿತು–“ ಆಗದು, ಎಂದಿಗೂ ಆಗದು. ಯಾವ ರೀತಿಯಲ್ಲೂ ಆಗದು. ಈ ವಿಷಯವಾಗಿ ನಿಮಗೆ ಒಂದು ಮಾತೂ ಆಡಗೊಡಲಾರೆ ” ಎಂದಳು.

ಹೆಂಡತಿಯ ಕಂಣು ಮುಖ ನೋಡಿ ನೀಲಾಂಬರ ಅತ್ಯಂತ ಆಚ್ಚರಿಗೊಂಡ. ಬಳಿಕ ನುಡಿದ : “ನಾನು ನಿನ್ನ ಪತಿ. ಆದರಿಂದ ನನ್ನ ಕರ್ತ್ರವ್ಯವೇನೂ ಇಲ್ಲವೆ?”

ವಿರಾಜಳು ಸ್ವಲ್ಪವೂ ಯೋಚನೆ ಮಾಡದೆ–“ ಪತಿದೇವನ ಉಳಿದ ಕರ್ತವ್ಯಗಳನ್ನು ಮೊದಲು ಮಾಡಿ. ಬಳಿಕ ಈ ಕರ್ತ್ರವ್ಯವನ್ನು ಮಾಡಬಹುದು” ಎಂದಳು.

“ ಏನೆಂದೆ ? ”–ಎಂದು ನೀಲಾಂಬರ ಮೊದಲು ಸ್ವಲ್ಪ ವಿವಶನಾದ. ಬಳಿಕ ಇಳಿದನಿಯಿಂದ–“ ಒಳ್ಳೇದು ” ಎಂದು ನಿಟ್ಟುಸಿರ್ಗರೆದು ಸುಮ್ಮನೆ ಮಗ್ಗುಲಾಗಿ ಒರಗಿದ.

ವಿರಾಜಳು ಮಲಗಿದ ಹಾಗೆಯೇ ಸ್ಥಿರಭಾವದಿಂದ – “ ಒಮ್ಮೆಲೇ ನನ್ನ ಬಾಯಿಂದ ಈ ಮಾತು ಹೇಗೆ ಹೊರಹೊಮ್ಮಿತು ? ” ಎಂದು ಯೋಚಿಸ ತೊಡಗಿದಳು.

ಇಂಪೇ ಮಳೆ ಬೀಳಲಾರಂಭಿಸಿತ್ತು. ಹೊರಗೆ ಪಟಪಟ ಎಂದು ಮಳೆಯ ಹನಿ ಬೀಳುತ್ತಿದ್ದವು. ಅದರಿಂದ ಭೂಮಿಯು ತೊಯ್ದು ತೆರೆದ ಕಿಟಕಿಗಳಿಂದ ಮಣ್ಣಿನ ಸುವಾಸನೆ ಒಳಗೆ ತೂರಿಬರುತ್ತಿದ್ದಿತು. ಒಳಗೆ ದಂಪತಿಗಳು ಬಾಯಿ ಮುಚ್ಚಿ ತೆಪ್ಪಗೆ ಒರಗಿದ್ದರು.

ಎಷ್ಟೋ ಹೊತ್ತಿನ ಮೇಲೆ ನೀಲಾಂಬರ ನೀರವತೆಯನ್ನು ಭಂಗಗೊಳಿಸಿದ. ಅವನು ದುಃಖಭರಿತ ಗಂಭೀರ ದನಿಯಿಂದ ತನ್ನಷ್ಟಕ್ಕೆ ತಾನೇ ಹೇಳತೊಡಗಿದ: "ವಿರಾಜ್, ನಾನು ಎಷ್ಟು ದುರ್ಬಲ ಮನುಷ್ಯನೆಂಬುದನ್ನು ನೀನು ಕೃತಿಯಿಂದ ಹೆಜ್ಜೆ ಹೆಜ್ಜೆಗೆ ತಿಳಿಯುವಂತೆ ಮಾಡುತ್ತಿರುವೆ. ಅನ್ಯರಿಂದ ನನಗೆ ಅದು ಅಷ್ಟು ಚನ್ನಾಗಿ ತಿಳಿಯುವ ಸಂಭವವಿರಲಿಲ್ಲ."

ವಿರಾಜಳಿಗೆ ಏನೋ ಆಡಬೇಕೆಂದು ತೋರಿತು. ಆದರೆ ಬಾಯೇ ಬರಲಿಲ್ಲ. ಅಸಹನೀಯವಾದ ದುಃಖದಿಂದಲೂ ದಾರಿದ್ರ್ಯದಿಂದಲೂ ಪೀಡಿತರಾದ ಈ ದಂಪತಿಗಳಲ್ಲಿ ಅನೇಕ ದಿನಗಳ ತರುವಾಯ ಇಂದು ರಾಜಿಯಾಗುತ್ತಲಿತ್ತು. ಆದರೆ ಆ ಸಂಧಿಸೂತ್ರ ಕಾಣಿಸಿತೆನ್ನುವಷ್ಟರಲ್ಲಿ ಮತ್ತೆ ಛಿನ್ನವಿಚ್ಛಿನ್ನವಾಯಿತು.

## ೧೦

ಮಧ್ಯಾಹ್ನದ ಸಮಯ. ಮನೆಯಲ್ಲಿ ನೀಲಾಂಬರನೂ ಇರಲಿಲ್ಲ, ಪೀತಾಂಬರನೂ ಇರಲಿಲ್ಲ. ಬೇರೆ ಯಾರೂ ಇದ್ದಂತೆ ಕಾಣಲಿಲ್ಲ. ಈ ನಿಸ್ತಬ್ಧತೆಯನ್ನು ಕಂಡು ಮೋಹಿನಿ ಅಳುತ್ತ ಅಳುತ್ತ ಬಂದು ಅಕ್ಕನ ಪಾದದ ಮೇಲೆ ಬಿದ್ದಳು. ಗಂಡನ ದಂಡನೆಯಿಂದ ಭಯವ್ಯಾಕುಲಳಾಗಿ ಎರಡು ದಿನಗಳಿಂದ ಅವಳು ಪ್ರತಿ ಕ್ಷಣಕ್ಕೂ ಇಂಥ ಸಮಯವನ್ನೇ ನಿರೀಕ್ಷಿಸುತ್ತಿದ್ದಳು. ಕಂಬನಿ ಮಿಡಿಯುತ್ತಿದ್ದಂತೆಯೇ–"ದಯವಿಟ್ಟು ಶಪಿಸಬೇಡ ಅಕ್ಕಾ. ಕೊನೆಯ ಮಟ್ಟಿಗೆ ನನ್ನ ಮುಖ ನೋಡಿಯಾದರೂ ಅವರನ್ನು ಕ್ಷಮಿಸು. ಅವರಿಗೇನಾದರೂ ಆದರೆ ನಾನು ಬದುಕಲಾರೆ" ಎಂದಳು.

ವಿರಾಜಳು ಓರಗಿತ್ತಿಯ ಕೈಹಿಡಿದು ಎಬ್ಬಿಸಿದಳು. ಬಳಿಕ ವಿಷಾದಪೂರ್ಣ ಗಂಭೀರ ದನಿಯಿಂದ–"ನಾನು ಶಪಿಸುವುದಿಲ್ಲ ತಂಗೀ! ನನಗೆ ಕೆಡುಕು ಮಾಡುವಷ್ಟು ಶಕ್ತಿ ಅವರಿಗಿಲ್ಲ. ಆದರೆ ನಿನ್ನಂತಹ ಸತಿಸಾಧ್ವಿಯ ಮೇಲೆ

ಕೈಯೆತ್ತಿದ ಮಹಾಪರಾಧವನ್ನು ಮಾತ್ರ ದುರ್ಗಾಮಾತೆ ಸಹಿಸಲಾರಳು" ಎಂದಳು.

ಮೋಹಿನಿಯ ಶರೀರ ನಡುಗಿತು. ಕಂಣು ಒರಸಿಕೊಂಡು—"ಏನು ಮಾಡಲಿ ಅಕ್ಕ—ಅದು ಅವರ ಹುಟ್ಟು ಸ್ವಭಾವವೇ ಆಗಿದೆ. ಇಂತಹ ಸಿಡುಕು ಸ್ವಭಾವವನ್ನು ಕೊಟ್ಟ ದೇವರೇ ಅವರನ್ನು ಕ್ಷಮಿಸಲಿ. ಈ ಬಗೆಗೆ ನಾನು ಹರಕೆ ಹೇಳಿಕೊಳ್ಳದಂತಹ ಯಾವ ದೇವತೆಯೂ ಉಳಿದಿಲ್ಲ. ಆದರೆ ನಾನು ಮಹಾ ಪಾಪಿಷ್ಠೆ. ಆದುದರಿಂದ ಯಾವ ದೇವತೆಯೂ ನನ್ನ ಕೂಗಿಗೆ ಓಗೊಡ ಲಿಲ್ಲ. ನನ್ನ ಒಂದು ದಿನವೂ ಹೀಗೆಯೇ...." ಎಂದು ಒಮ್ಮೆಗೇ ನಿಂತುಬಿಟ್ಟಳು.

ಮೋಹಿನಿಯ ಹಣೆಯ ಬಲಭಾಗದಲ್ಲಿ ಡೊಂಕಾಗಿ ಕಾಣುವ ಒಂದು ದೊಡ್ಡ ಕಲೆಯನ್ನು ವಿರಾಜಳು ಈ ವರೆಗೂ ನೋಡಿರಲಿಲ್ಲ. ಅದರ ಕಡೆಗೆ ದೃಷ್ಟಿ ಹೋದೊಡನೆಯೆ—"ಇದೇನಮ್ಮ ನಿನ್ನ ಹಣೆಯ ಮೇಲೆ? ಏಟಿನ ಕಲೆಯೇನು?" ಎಂದು ಕೇಳಿದಳು.

ಮೋಹಿನಿ ತನ್ನ ಲಜ್ಜಿತ ಮುಖವನ್ನು ಕೆಳಗೆ ಮಾಡಿ ಹೌದೆನ್ನುವಂತೆ ತಲೆ ಹಾಕಿದಳು.

"ಏತರಿಂದ ಹೊಡೆದರು ?"

ಗಂಡನ ಹೊಲಸು ಕಾರ್ಯಕ್ಕಾಗಿ ಮೋಹಿನಿಗೆ ಮೊಗವೆತ್ತುವ ಮನಸ್ಸಾಗ ಲಿಲ್ಲ. ಅವಳು ನತಮುಖಳಾಗಿ ಇಳಿದನಿಯಿಂದ—"ಕೋಪ ಬಂದಾಗ ಅವರಿಗೆ ವಿವೇಕವೇ ಇರುವುದಿಲ್ಲಕ್ಕಾ !" ಎಂದಳು.

"ಅದನ್ನು ನಾನು ಬಲ್ಲೆ. ಅವರು ಹೊಡೆದದ್ದು ಏತರಿಂದ ?"

ಮೋಹಿನಿ ಮೊದಲಿನಂತೆಯೆ ಮುಖ ಕೆಳಗೆ ಮಾಡಿ—"ತಮ್ಮ ಕಾಲೊಳ ಗಿನ...." ಎಂದಳು.

ವಿರಾಜಳು ದಂಗುಬಡೆದು ಕುಳಿತುಬಿಟ್ಟಳು. ಅವಳ ಎರಡೂ ಕಣ್ಣು ಗಳಿಂದ ಬೆಂಕಿಯ ಕಿಡಿ ಹಾರುತ್ತಿರುವಂತೆ ತೋರಿತು. ಅವಳು ಸ್ವಲ್ಪ ಸಮಯ ಸುಮ್ಮನಿದ್ದು ಇಳಿದನಿಯಿಂದ—"ನೀನು ಅದನ್ನು ಹೇಗೆ ಸಹಿಸಿದೆ ತಂಗಿ ?" ಎಂದು ಕೇಳಿದಳು.

ಮುಖವನ್ನು ಮೇಲಕ್ಕೆತ್ತಿ ಮೋಹಿನಿಯೆಂದಳು: "ಏನು ಮಾಡಲಿ ಅಕ್ಕ? ಪೆಟ್ಟು ತಿಂದು ತಿಂದು ನನಗೆ ಸಹಿಸುವ ಅಭ್ಯಾಸವಾಗಿ ಹೋಗಿದೆ."

ವಿರಾಜಳ ಕಿವಿಗೆ ಬಹುಶಃ ಈ ಮಾತು ಕೇಳಿರಲಾರದು. ಅವಳು ಕರ್ಕಶ

ವಾಗಿ—"ಹೀಗಿದ್ದೂ ನೀನು ಅವರ ಸಲುವಾಗಿ ಕ್ಷಮೆ ಬೇಡಬಂದೆಯಾ?"ಎಂದಳು.

ಅಕ್ಕನ ಮೊಗವನ್ನು ನೋಡುತ್ತ ಮೋಹಿನಿಯೆಂದಳು : "ಹುಂ, ಅವರ ಸಲುವಾಗಿಯೇ ಬಂದೆ. ಆದರೆ ನೀನು ಅವರ ಮೇಲೆ ಕೋಪಗೊಂಡರೆ ಅವರಿಗೆ ಒಳ್ಳೆಯದಾಗಲಾರದಕ್ಕಾ! ಮೇಲಾಗಿ ನನ್ನ ಈ ತಾಳ್ಮೆ, ಸಹನೆ, ಇವೆಲ್ಲವನ್ನೂ ನಿನ್ನಿಂದಲೇ ಕಲಿತೆ. ನನಗೇನಾದರೂ ತಿಳಿವಳಿಕೆ ಬಂದದ್ದೇ ಹೌದಾದರೆ ಅದೆಲ್ಲ ನಿನ್ನ ಚರಣ...."

ವಿರಾಜಳು ವ್ಯಸ್ತಳಾದಳು. ಅವಳು ನಡುವೆಯೇ ಬಾಯಿಹಾಕಿ—" ಬೇಡ ತಂಗೀ, ಹೀಗೆ ಹೇಳಬೇಡ. ಆ ಅವಮಾನವನ್ನು ನಾನು ಸಹಿಸಲಾರೆ" ಎಂದಳು.

ನಸುನಕ್ಕು ಮೋಹಿನಿಯೆಂದಳು: " ನಮ್ಮ ಅಪಮಾನವನ್ನು ನಾವೇ ಸಹಿಸಿಕೊಳ್ಳುವುದು ಮಹಾಕಾರ್ಯವೆಂದು ಬಗೆದೆಯಾ ಅಕ್ಕ ! ನಿನ್ನ ಗಂಡ ನಂತಹ ಗಂಡನನ್ನು ಪಡೆದ ಸೌಭಾಗ್ಯವತಿಯರು ಈ ಲೋಕದಲ್ಲಿ ತೀರ ಕಡಮೆ. ಆದರೂ ನೀನು ಸಹಿಸುವಂತಹ ಕಷ್ಟ-ದುಃಖಗಳ ಸಂದರ್ಭಗಳು ನಮಗೆ ಬಂದರೆ, ನಾವು ಕೈಕಾಲೇ ಬಿಡುತ್ತಿದ್ದೆವು. ಭಾವನವರ ಮುಖದ ಮೇಲೆ ನಗೆಯಿಲ್ಲ, ಮನಕ್ಕೆ ನೆಮ್ಮದಿಯಿಲ್ಲ. ಇದನ್ನು ದಿನ ರಾತ್ರಿ ಕಣ್ಣಾರೆ ಕಾಣುವ ಪ್ರಸಂಗ ಬಂದಿದೆ ನಿನಗೆ. ಗಂಡನ ಈ ಸಂಕಟಮಯ ಅವಸ್ಥೆಯನ್ನು ನೀನಲ್ಲದೆ ಮತ್ತಾರು ಸಹಿಸಬಲ್ಲರು ಅಕ್ಕಾ? " ಎಂದಳು.

ವಿರಾಜಳು ಸುಮ್ಮನೆ ಇದ್ದಳು.

ಮೋಹಿನಿ ತಟ್ಟನೆ ವಿರಾಜಳ ಎರಡೂ ಪಾದಗಳನ್ನು ಹಿಡಿದುಕೊಂಡು— " ಹೇಳಕ್ಕಾ, ನೀನು ಅವರನ್ನು ಕ್ಷಮಿಸಿದೆಯೊ ಇಲ್ಲವೊ ? ಕ್ಷಮಿಸುವ ವರೆಗೆ ನಾನು ನಿನ್ನ ಪಾದಗಳನ್ನು ಬಿಡುವುದೇ ಇಲ್ಲ. ನೀನು ದಯೆ ತೋರದೆ ಹೋದರೆ ಅವರನ್ನು ಯಾರೂ ರಕ್ಷಿಸಲಾರರು ಅಕ್ಕಾ ! " ಎಂದಳು.

ವಿರಾಜಳು ತನ್ನ ಕಾಲುಗಳನ್ನು ಸೆಳೆದುಕೊಂಡು ಓರಗಿತ್ತಿಯ ಗದ್ದವನ್ನು ಹಿಡಿದು—" ಕ್ಷಮಿಸಿದ್ದೇನೆ ಹೋಗು ತಂಗೀ " ಎಂದಳು.

ಮೋಹಿನಿ ಅಕ್ಕನ ಚರಣಧೂಳಿಯನ್ನು ಪುನಃ ಕೊಂಡು, ಮುಖದ ಮೇಲೆ ಪ್ರಸನ್ನತೆಯನ್ನು ಮೂಡಿಸುತ್ತ ಹೊರಟುಹೋದಳು. ಆದರೆ ವಿರಾಜಳು ಮಾತ್ರ ಕಕ್ಕಾವಿಕ್ಕಿಯಾಗಿ ಅದೇ ಸ್ಥಳದಲ್ಲಿ ಬಹಳ ಹೊತ್ತು ಸುಮ್ಮನೆ ಕುಳಿತಿದ್ದಳು. ಅವಳ ಹೃದಯಗಹ್ವರದಿಂದ ಒಂದೇ ಸಮನಾಗಿ ಅದಾರೋ ಕೂಗಿ

ಹೇಳತೊಡಗಿದಂತಾಯಿತು–" ಇದನ್ನು ನೋಡಿಯಾದರೂ ಕಲಿತುಕೊ ವಿರಾಜ್ !" ಎಂದು.

ಮೋಹಿನಿ ಆ ದಿನದಿಂದ ಎಷ್ಟೋ ದಿನಗಳ ವರೆಗೆ ವಿರಾಜಳ ಮನೆಗೆ ಪ್ರವೇಶ ಮಾಡದಿದ್ದರೂ ಅವಳ ಕಂಣು ಕಿವಿ ಯಾವಾಗಲೂ ವಿರಾಜಳ ಮನೆಯ ಕಡೆಗೇ ಇರುತ್ತಿತ್ತು. ಅವಳು ಅಂದು ಹಗಲು ಸುಮಾರು ಒಂದು ಗಂಟೆಗೆ ಅತ್ಯಂತ ಸಾವಧಾನದಿಂದ, ಸುತ್ತಲೂ ನಿರೀಕ್ಷಿಸಿ, ವಿರಾಜಳ ಮನೆಯನ್ನು ಬಿರ್ರನೆ ಹೊಕ್ಕಳು.

ವಿರಾಜಳು ಗಲ್ಲದ ಮೇಲೆ ಕೈಯಿಟ್ಟುಕೊಂಡು ಅಡುಗೆಮನೆಯ ಜಗಲಿಯ ಮೇಲೆ ಕುಳಿತಿದ್ದಳು. ಓರಗಿತ್ತಿ ಬರುವುದನ್ನು ನೋಡಿಯೂ ಸಹ ಅವಳು ತೆಪ್ಪಗೆ ಕುಳಿತಿದ್ದಳು.

ಮೋಹಿನಿ ಅಕ್ಕನ ಬಳಿ ಕುಳಿತು ಅವಳ ಪಾದ ಮುಟ್ಟಿ ತಲೆ ಸವರಿಕೊಂಡಳು. ಬಳಿಕ ಮೆಲ್ಲನೆ–" ಏನಕ್ಕಾ, ನಿನಗೆ ಹುಚ್ಚು ಹಿಡಿದಿಲ್ಲವಷ್ಟೆ ?" ಎಂದಳು.

ವಿರಾಜಳು ಮುಖ ಹೊರಳಿಸಿ ಚುರುಕು ದನಿಯಿಂದ–" ಮತ್ತೆ ನಿನಗೆ ?" ಎಂದು ಮಾರ್ನುಡಿದಳು.

ಮೋಹಿನಿಯೆಂದಳು : "ಅಕ್ಕ, ನಿನ್ನೊಂದಿಗೆ ನನ್ನನ್ನು ತುಲನೆಮಾಡಿ ನನ್ನ ಮೇಲೆ ಅಪರಾಧ ಹೊರಿಸಬೇಡ. ನಾನು ನಿನ್ನ ಈ ಪಾದಧೂಳಿಗೂ ಸಮಾನಳಲ್ಲ. ನೀನು ಹೀಗೇಕೆ ಆಗುತ್ತಿರುವೆಯಕ್ಕ ? ಇಂದು ನೀನು ಭಾವನವರಿಗೆ ಊಟಕ್ಕೆ ಬಡಿಸಲಿಲ್ಲವೇಕೆ ?"

"ನಾನೇನು ಅವರಿಗೆ ಉಂಣಲು ಅಡ್ಡಿಪಡಿಸಲಿಲ್ಲ !"

"ನೀನು ಅಡ್ಡಿಪಡಿಸಲಿಲ್ಲವೆಂಬುದು ನಿಜ. ಆದರೆ ಬಡಿಸಲು ಏಕೆ ಹೋಗಲಿಲ್ಲ? ಊಟಕ್ಕೆ ಕುಳಿತಾಗ ಅವರು ನಿನ್ನನ್ನು ಎಷ್ಟು ಕರೆದರೂ ನೀನು ಉತ್ತರವನ್ನೇ ಕೊಡಲಿಲ್ಲ. ಇದರಿಂದ ದುಃಖವಾಗುವುದಿಲ್ಲವೆ, ನೀನೇ ಹೇಳು. ಕರೆದಾಗ ನೀನು ಹೋಗಿದ್ದರೆ ಅವರು ತಟ್ಟೆ ಬಿಟ್ಟು ಏಳುತ್ತಿರಲಿಲ್ಲ."

ಆಗಲೂ ವಿರಾಜಳು ಸುಮ್ಮನಿದ್ದಳು.

ಮತ್ತೆ ಮೋಹಿನಿಯೇ ಹೇಳತೊಡಗಿದಳು : "ಬಿಡುವಿರಲಿಲ್ಲವೆಂದು ಬಹುಶಃ ನೀನು ಹೇಳಬಹುದು. ಆದರೆ ಹೀಗೆ ಹೇಳಿ ನನ್ನನ್ನು ಮೋಸಗೊಳಿಸಲಾರೆ ಅಕ್ಕ! ನೀನು ಯಾವಾಗಲೂ ಕೈಯಲ್ಲಿದ್ದ ಕೆಲಸ ಬೊಗಸೆಗಳನ್ನು

ಬಿಟ್ಟು ಅವರ ಹತ್ತಿರವೇ ಕುಳಿತು ಬಡಿಸುತ್ತಿದ್ದೆ. ನಿನ್ನ ದೃಷ್ಟಿಯಲ್ಲಿ ಇದಕ್ಕೂ ಮಹತ್ವದ ಕಾರ್ಯ ಯಾವುದೂ ಇಲ್ಲ. ಆದರೂ ಇಂದು.... "

ಓರಗಿತ್ತಿಯ ಮಾತು ಮುಗಿಯುವುದರೊಳಗೇ ವಿರಾಜಳು ಹುಚ್ಚಳಂತೆ ಅವಳ ಒಂದು ಕೈಯನ್ನು ಹಿಡಿದು–" ನೀನು ಕಣ್ಣಾರೆ ನೋಡುವೆಯಾದರೆ ನಡೆ, ತೋರಿಸುತ್ತೇನೆ" ಎಂದು ಅವಳನ್ನು ದರದರನೆ ಎಳೆಯುತ್ತ ಅಡುಗೆ ಮನೆಗೆ ಒಯ್ದಳು. ಬಾಗಿಲ ಬಳಿಗೇ ನಿಂತು–" ಇದು ನೋಡು " ಎಂದಳು.

ಮೋಹಿನಿ ತಟ್ಟೆಯಲ್ಲಿದ್ದುದನ್ನು ದೃಷ್ಟಿಸಿದಳು. ಕದಕ್ಕಿಯ ಕೆಂಪು ಅನ್ನ ಹಾಗೂ ಒಣಗಿದ ಪಲ್ಯೆ ಕಣ್ಣಿಗೆ ಬಿದ್ದಿತು. ತಟ್ಟೆಯಲ್ಲಿ ಆ ಎರಡು ವಸ್ತುಗಳಲ್ಲದೆ ಬೇರೇನೂ ಇರಲಿಲ್ಲ.

ಊಟಕ್ಕೆ ಇಂದು ಯಾವ ವ್ಯಂಜನವೂ ಇರದ್ದರಿಂದ ನದಿಗೆ ಹೋಗಿ ವಿರಾಜಳು ಪಲ್ಯೆ ಕುಯ್ದು ತಂದಿದ್ದಳು.

ನೋಡು ನೋಡುವಷ್ಟರಲ್ಲಿ ಮೋಹಿನಿಯ ಕಂಣುಗಳಿಂದ ಕಂಬನಿ ದಳ ದಳ ಸುರಿಯತೊಡಗಿತು. ಆದರೆ ವಿರಾಜಳ ಕಂಣಿನಲ್ಲಿ ಕಂಬನಿಯ ಆಭಾಸವೂ ಇರಲಿಲ್ಲ. ಆ ಅಕ್ಕತಂಗಿಯರಿಬ್ಬರೂ ನೀರವತೆಯಿಂದ ಒಬ್ಬರನ್ನೊಬ್ಬರು ನಿಟ್ಟಿಸಿ ನೋಡತೊಡಗಿದರು.

ವಿರಾಜಳು ಸ್ವಾಭಾವಿಕ ದನಿಯಿಂದ–" ನೀನೂ ಹೆಂಗುಸೇ. ಅಡುಗೆ ಮಾಡಿ ಗಂಡನಿಗೆ ನೀನೂ ಬಡಿಸಬೇಕಾಗುವುದು. ನೀನೇ ಹೇಳು–ಗಂಡನ ಹತ್ತಿರವೇ ಕುಳಿತು ಅವನು ಇಂಥ ಊಟ ಮಾಡುವುದನ್ನು ಕಣ್ಣಾರೆ ನೋಡಿ ಸಹಿಸುವಂತಹ ಹೆಂಡಂದಿರು ಈ ಜಗತ್ತಿನಲ್ಲಿ ಯಾರಾದರೂ ಇದ್ದಾರೆಯೆ.? ಮೊದಲು ಈ ಮಾತಿಗೆ ಉತ್ತರ ಕೊಡು. ಬಳಿಕ ನಿನ್ನ ಮನ ಬಂದಂತೆ ಮೂದಲಿಸು, ನಾನು ತುಟಿ ಬಿಚ್ಚಿದರೆ ಕೇಳು " ಎಂದಳು.

ಮೋಹಿನಿಗೀಗ ಬಾಯಿ ತೆರೆವ ಧೈರ್ಯವಾಗಲಿಲ್ಲ. ಅವಳ ನೇತ್ರಪ್ರಾಂತದಿಂದ ಕಂಬನಿ ಏಕಧಾರೆಯಾಗಿ ಹರಿಯುತ್ತಿತ್ತು.

ವಿರಾಜಳು ಹೇಳತೊಡಗಿದಳು : " ಅಕಸ್ಮಾತ್ತಾಗಿ ಯಾವುದೇ ದಿನ ಅಡುವುದರಲ್ಲಿ ನನ್ನ ತಪ್ಪಿನಿಂದಲೇ ಹೆಚ್ಚುಕಡಮೆಯಾಗಿ ಅಡುಗೆ ರುಚಿಸದೆ ಅವರು ಒಂದಗುಳು ಕಡಮೆ ಊಟಮಾಡಿದರೂ ನನ್ನ ಹೃದಯಕ್ಕೆ ಅದೆಷ್ಟು ವೇದನೆಯಾಗುವುದು ! ನನ್ನ ಆ ತಪ್ಪು ಹೃದಯವನ್ನು ಸೂಜಿಯ ಮೊನೆಯಂತೆಯೇ ಚುಚ್ಚುವುದೆಂಬುದು ತಂಗೀ, ಬೇರಾರಿಗೆ ಗೊತ್ತಾಗದಿದ್ದರೂ

ನಿನಗೆ ಗೊತ್ತಿಲ್ಲದಿಲ್ಲ. ಆದರೂ ಇಂದು ಅವರು ಉಪವಾಸವಿದ್ದುದನ್ನು ಕಂಡು ಇಂಥ ಅಡುಗೆಯನ್ನೇ ಬಡಿಸಿದೆ. ಇನ್ನು ಮುಂದೆ ಇದನ್ನು ಹಾಕಲೂ ಸಾಧ್ಯವಾಗುವುದೋ ಇಲ್ಲವೋ ದೇವರು ಬಲ್ಲ."

ವಿರಾಜಳಿಂದ ಹೆಚ್ಚಿಗೆ ಮಾತನಾಡಲು ಸಾಧ್ಯವಾಗಲಿಲ್ಲ. ವೇದನೆಯ ಅಸಹ್ಯ ಭಾರವನ್ನು ತಡೆದುಕೊಳ್ಳಲಾರದೆ ಅವಳಿಗೆ ಬವಳಿಬಂದಂತಾಯಿತು. ಅವಳು ತಟ್ಟನೆ ತಂಗಿಯ ಎದೆಯ ಮೇಲೆ ಬಿದ್ದು ಎರಡೂ ಕೈಗಳಿಂದ ಅವಳ ಕತ್ತನ್ನು ಸುತ್ತಿ ಗಳಗಳನೆ ಅಳತೊಡಗಿದಳು. ಆ ಸ್ತ್ರೀಯರಿಬ್ಬರೂ ಅವಳಿ ಮಕ್ಕಳಂತೆ ಎಷ್ಟೋ ಹೊತ್ತಿನ ವರೆಗೆ ಒಬ್ಬರನ್ನೊಬ್ಬರು ಅಪ್ಪಿಕೊಂಡಿದ್ದರು. ಎಷ್ಟೋ ಸಮಯದ ವರೆಗೆ ಎರಡು ಅಭಿನ್ನ ನಾರೀಹೃದಯುಗಳು ನೀರವತೆಯಿಂದ ಕಂಬನಿಗಳಲ್ಲಿ ತೇಲುತ್ತಿದ್ದವು. ಬಳಿಕ ತಲೆಯೆತ್ತಿ ವಿರಾಜಳೆಂದಳು : "ಇಲ್ಲ, ನಾನು ನಿನ್ನಿಂದ ಯಾವುದನ್ನೂ ಮರೆಮಾಚುವುದಿಲ್ಲ. ನನ್ನ ದುಃಖವನ್ನು ತಿಳಿದುಕೊಳ್ಳುವವಳು ನೀನಲ್ಲದೆ ಬೇರಾರೂ ಇಲ್ಲ. ನಾನು ಬಹಳ ಯೋಚಿಸಿ ಒಂದು ನಿರ್ಧಾರಕ್ಕೆ ಬಂದಿದ್ದೇನೆ. ನಾನು ಇಲ್ಲಿಂದ ಹೊರಟು ಹೋಗದೆ ಅವರ ಸಂಕಟ ನಿವಾರಣೆಯಾಗದೆಂದು ನನಗೆನಿಸಿದೆ. ಆದರೆ ಜೀವಿಸಿರುವ ವರೆಗೆ ಅವರ ಮುಖದರ್ಶನವಿಲ್ಲದೆ ನಾನು ಒಂದು ದಿನವೂ ಕಳೆಯಲಾರೆ. ಆದ್ದರಿಂದ ನಾನು ಇಲ್ಲಿಂದ ಹೊರಟೇಹೋಗುತ್ತೇನೆ. ಹೇಳು—ನಾನು ಇಲ್ಲಿಂದ ಹೋದ ಬಳಿಕ ನೀನು ಅವರನ್ನು ನೋಡಿಕೊಳ್ಳುವೆಯಾ ?"

ದೃಷ್ಟಿ ಮೇಲಕ್ಕೆತ್ತಿ—"ನೀನೆಲ್ಲಿಗೆ ಹೋಗುತ್ತಿ ?" ಎಂದಳು ಮೋಹಿನಿ.

ವಿರಾಜಳ ಸುಕ್ಕಿದ ತುಟಿಗಳ ಮೇಲೆ ಶೀತಲವಾದ ಕಠೋರ ಹಾಸ್ಯ ತೇಲಿತು. ಒಂದು ಸಲ ಅವಳೂ ಗೊಂದಲಗೆಟ್ಟಳು. ಬಳಿಕ—"ಎಲ್ಲಿಗೆ ಹೋಗುವೆನೆಂದು ಹೇಗೆ ಹೇಳಲಿ ತಂಗೀ? ಅದಕ್ಕಿಂತಲೂ ಹೆಚ್ಚಿನ ಪಾಪಕೃತ್ಯ ಬೇರೊಂದಿಲ್ಲವೆಂದು ಕೇಳಿದ್ದೇನೆ. ಏನೇ ಆಗಲಿ, ಈ ಜ್ವಾಲೆಯಿಂದೊಮ್ಮೆ ಮುಕ್ತಿಹೊಂದಲೇಬೇಕು" ಎಂದಳು.

ವಿರಾಜಳ ಮನದ ಇಂಗಿತವನ್ನರಿತುಕೊಳ್ಳಲು ಮೋಹಿನಿ ಈಗ ಸಮರ್ಥಳಾದಳು. ಅದನ್ನು ತಿಳಿದು ನಡುಗಿದಳು. ವ್ಯಾಕುಲಳಾಗಿ ವಿರಾಜಳ ಬಾಯಿಯ ಮೇಲೆ ಕೈಯನ್ನಿಟ್ಟು—"ಛೀ ಅಕ್ಕ, ಇಂತಹ ಮಾತನ್ನು ನಾಲಗೆಯ ಮೇಲೆ ತರಲೂ ಕೂಡದು. ತಾನು ಆತ್ಮಹತ್ಯೆ ಮಾಡಿಕೊಳ್ಳುವೆನೆಂದು ಹೇಳುವ ವ್ಯಕ್ತಿಯಂತೂ ಪಾಪಕ್ಕೆ ಗುರಿ ಆಗಿಯೇ ಆಗುವುದು. ಅಲ್ಲದೆ ಅದನ್ನು ಕೇಳುವ

ವ್ಯಕ್ತಿಯೂ ಪಾಪಕ್ಕೆ ಭಾಗಿಯಾಗುವುದು. ಛೀ ಛೀ, ಇತ್ತೀಚೆ ಹೀಗೇಕೆ ಆಗುತ್ತಿರುವೆ ಅಕ್ಕಾ ? " ಎಂದಳು ಅವಳು.

ತನ್ನ ಬಾಯಿಯ ಮೇಲಿಟ್ಟ ಓರಗಿತ್ತಿಯ ಕೈಯನ್ನು ದೂರ ಸರಿಸಿ ವಿರಾಜ ಳೆಂದಳು : " ಅದೆಲ್ಲ ನನಗೆ ಗೊತ್ತಿಲ್ಲ. ನಾನಿಷ್ಟೇ ಬಲ್ಲೆ. ಇನ್ನು ನಾನು ಅವರ ಊಟ ಉಡಿಗೆಯ ವ್ಯವಸ್ಥೆ ಮಾಡಲಾರೆ. ಇಂದು ನೀನು ನನ್ನನ್ನು ಮುಟ್ಟಿ ಪ್ರಮಾಣಮಾಡು–ಹೇಗಾದರೂ ಮಾಡಿ ಸೋದರರಲ್ಲಿ ರಾಜಿ ಮಾಡಿ ಸುವೆನೆಂದು."

"ಇಕೋ, ಪ್ರಮಾಣ" ಎಂದು ಮೋಹಿನಿ ಒಮ್ಮೆಲೇ ಕುಳಿತಳು. ಬಳಿಕ ಅಕ್ಕನ ಪಾದಗಳನ್ನು ಗಟ್ಟಿಯಾಗಿ ಹಿಡಿದು–" ಹಾಗಾದರೆ ಅಕ್ಕ, ನನಗೊಂದು ಭಿಕ್ಷೆ ನೀಡುವೆಯಾ ? " ಎಂದು ಕೇಳಿದಳು.

" ಯಾವ ಭಿಕ್ಷೆ? "

" ಒಂದು ನಿಮಿಷ ನಿನ್ನ ಕುತೂಹಲವನ್ನು ತಡೆ. ಈಗ ಬರುತ್ತೇನೆ " ಎಂದು ಮೋಹಿನಿ ಎದ್ದು ಹೋಗತೊಡಗಿದಳು. ಅಷ್ಟರಲ್ಲಿ ವಿರಾಜಳು ಅವಳ ಸೆರಗನ್ನು ಹಿಡಿದು–'' ಬೇಡ, ನೀನು ಹೋಗಬೇಡ. ನಾನು ಯಾರಿಂದಲೂ ಒಂದು ಸಾಸಿವೆಯಷ್ಟು ಸಹಾಯವನ್ನೂ ಪಡೆಯಲಿಚ್ಛಿಸುವುದಿಲ್ಲ '' ಎಂದಳು.

" ಅದೇಕೆ? "

ತೀವ್ರವಾಗಿ ತಲೆಯಲ್ಲಾಡಿಸುತ್ತ ವಿರಾಜಳೆಂದಳು: "ಆಗದು, ಅದೆಂದಿಗೂ ಆಗದು. ಇನ್ನು ನಾನು ಯಾರಿಂದಲೂ ಏನನ್ನೂ ಪಡೆಯಲಾರೆ. "

ಮೋಹಿನಿ ಕ್ಷಣ ಹೊತ್ತು ಸ್ಥಿರದೃಷ್ಟಿಯಿಂದ ಅಕ್ಕನ ಆಕಸ್ಮಿಕ ಉದ್ರಿಕ್ತ ಮುಖವನ್ನೇ ನೋಡಿದಳು. ಬಳಿಕ ಅಲ್ಲಿ ಕುಳಿತವಳೇ ಅಕ್ಕನನ್ನು ಬಲವಾಗಿ ಎಳೆದು ತನ್ನ ಬಳಿ ಕುಳ್ಳಿರಿಸಿಕೊಂಡು–" ಅಕ್ಕ, ನನ್ನ ಮಾತೊಂದಿಷ್ಟು ಕೇಳು. ಅದೇಕೋ ಏನೋ, ಮೊದಲು ನೀನು ನನ್ನನ್ನು ಪ್ರೀತಿಸುತ್ತಿರಲಿಲ್ಲ. ನನ್ನೊಂದಿಗೆ ಚನ್ನಾಗಿ ಮಾತು ಸಹ ಆಡುತ್ತಿದ್ದಿಲ್ಲ. ಅದಕ್ಕಾಗಿ ನಾನು ಏಕಾಂತದಲ್ಲಿ ಕುಳಿತು ಅತ್ತಿದ್ದೆಷ್ಟೋ, ದೇವ ದೇವರುಗಳಿಗೆ ಹರಕೆ ಹೊತ್ತಿದ್ದೆಷ್ಟೋ? ಅವುಗಳಿಗೆ ಮಿತಿಯೇ ಇಲ್ಲ. ಇಂದು ಆ ದೇವತೆಗಳು ನನ್ನ ಮೇಲೆ ಕೃಪೆಗೊಂಡಿದ್ದಾರೆ; ನೀನೂ ಸಹ ನನ್ನನ್ನು 'ತಂಗಿ' ಎಂದು ಕರೆಯುತ್ತಿರುವೆ. ಸ್ವಲ್ಪ ಯೋಚಿಸಿ ನೋಡು–ಒಂದು ವೇಳೆ ನನಗೂ ಇಂಥ ಪರಿಸ್ಥಿತಿ ಒದಗಿದ್ದರೆ, ಆಗ ನನಗಾಗಿ ಯಾವ ಸಹಾಯವನ್ನೂ ಮಾಡದಂತಹ ಅವಸ್ಥೆ ನಿನ್ನದಾಗಿದ್ದರೆ ನಿನ್ನ ಮನಸ್ಸಿಗೆ

ಎಷ್ಟು ವ್ಯಥೆಯುಂಟಾಗುತಿತ್ತು ?" ಎಂದಳು.

ಈ ಮಾತಿಗೆ ಉತ್ತರ ಕೊಡಲು ವಿರಾಜಳಿಗೆ ಸಾಧ್ಯವಾಗಲಿಲ್ಲ. ಅವಳು ಮುಖ ಕೆಳಗೆ ಮಾಡಿ ಸುಮ್ಮನೆ ಕುಳಿತಳು.

ಮೋಹಿನಿ ಎದ್ದು ಒಳಗೆ ಹೋಗಿ ಬಗೆಬಗೆಯ ತಿಂಡಿ ತಿನಿಸಿನ ತಟ್ಟೆಯೊಂದನ್ನು ತಂದು ಅಕ್ಕನೆದುರು ಇಟ್ಟಳು.

ವಿರಾಜಳು ಸ್ಥಿರಭಾವದಿಂದ ನೋಡುತ್ತಿದ್ದಳು. ಆದರೆ ಮೋಹಿನಿ ಬಳಿಗೆ ಬಂದು ಅವಳ ಸೆರಗಿನಲ್ಲಿ ಬಂಗಾರದ ನಾಣ್ಯವೊಂದನ್ನು ಕಟ್ಟತೊಡಗಿದಾಗ ಅವಳ ಸಹನೆ ಮೀರಿತು. ಓರಗಿತ್ತಿಯನ್ನು ಬಲವಾಗಿ ತಳ್ಳಿ ಕರ್ಕಶ ಧ್ವನಿಯಿಂದ: "ಆಗದು, ಪ್ರಾಣಹೋದರೂ ಆಗದು" ಎಂದಳು.

ಮೋಹಿನಿ ಅವಳ ಆ ಪೆಟ್ಟನ್ನು ತಡೆದುಕೊಂಡಳು. ಬಳಿಕ ಮೊಗವೆತ್ತಿ-"ಅದೇಕೆ ಆಗದು ಅಕ್ಕ, ನೀನು ತೆಗೆದುಕೊಳ್ಳಲೇಬೇಕು. ಈ ನಾಣ್ಯ ಭಾವನವರದೇ. ಮದುವೆಯಲ್ಲಿ ಅವರು ನನಗೆ ಕಾಣಿಕೆಯಿತ್ತದ್ದು" ಎಂದು ಅವಳು ವಿರಾಜಳ ಸೆರಗಿನಲ್ಲಿ ಅದನ್ನು ಕಟ್ಟಿಯೆ ಬಿಟ್ಟಳು. ತರುವಾಯ ಬಾಗಿ ಮತ್ತೊಂದು ಸಲ ಅಕ್ಕನ ಪಾದಧೂಳಿ ಕೊಂಡು ತನ್ನ ಮನೆಗೆ ಹೋದಳು.

## ೧೧

ವಿರಾಜಳು ತಯಾರಿಸಿದ ಮಣ್ಣಿನ ಪಡಿಯಚ್ಚುಗಳನ್ನು ಹೊಲೆಯರ ಹೆಂಗುಸೊಬ್ಬಳು ಮಗರಾರ್‌ಗಂಜಿಗೆ ಕೊಂಡುಹೋಗಿ ಮಾರಿಬರುತ್ತಿದ್ದಳು. ಅಲ್ಲಿಯ ಹಳೆಯ ಕಾರಖಾನೆಯನ್ನು ಮುಚ್ಚಿದ ಸಮಾಚಾರವನ್ನು ತಿಳಿಸಲು ಅವಳು ವಿರಾಜಳಲ್ಲಿಗೆ ಬಂದಿದ್ದಳು. ಅವಳು ಹೇಳಿದ್ದು ಕಾರಖಾನೆ ಮುಚ್ಚಿತೆಂದು ಮಾತ್ರವಲ್ಲ. ಆದರಿಂದ ತಮ್ಮ ಉದ್ಯೋಗ ನಿಂತಿತೆಂದೂ ಅದರಿಂದ ಸ್ವತಃ ತಾನೂ, ತನ್ನ ನೆರೆಹೊರೆಯ ಹೊಲೆಯರ ಹೆಂಗುಸರೂ ಅನೇಕ ತೊಂದರೆಗಳನ್ನು ಎದುರಿಸಬೇಕಾಗುವುದೆಂದೂ ಇನ್ನು ತಮಗೆ ಹಣದ ಕೊರತೆ ಮತ್ತಿಷ್ಟು ಹೆಚ್ಚುವುದೆಂದೂ ಸವಿಸ್ತಾರವಾಗಿ ಹೇಳಿದಳು. ಆದರೆ ಇದನ್ನೆಲ್ಲ ಕೇಳಿ ವಿರಾಜಳು ಸುಮ್ಮನಿದ್ದಳೇ ಹೊರತು ಒಂದು ಮಾತನ್ನೂ ಆಡಲಿಲ್ಲ. ಕಿರಿಯುಸಿರೊಂದನ್ನು ಕರೆದಳು ಮಾತ್ರ. ಇದರಿಂದ ಆ

ಹೆಂಗುಸು ನಿರಾಶಳಾದಳು. ತನ್ನ ದುಃಖದಲ್ಲಿ ಪಾಲುಗೊಳ್ಳುವವರಾರೂ ಇಲ್ಲವೆಂದು ಭಾವಿಸಿ ದುಃಖಿತ ಮನದಿಂದಲೇ ಅವಳು ಮರಳಿದಳು. ಅಯ್ಯೋ ದುಃಖ ಪೀಡಿತ ಅಜ್ಞಾನಿ ಹೆಂಣೆ, ವಿರಾಜಳ ಆ ಕಿರಿಯುಸಿರಿನಲ್ಲಿ ಏನಡಗಿದೆಯೆಂಬುದನ್ನು ತಿಳಿದುಕೊಳ್ಳುವ ಶಕ್ತಿ ನಿನಗೆಲ್ಲಿ? ವಿರಾಜಳ ಈ ನೀರವತೆಯ ಮರೆಯಲ್ಲಿ ಅದೆಂಥ ಸುಂಟರಗಾಳಿ ಚಲಿಸುತ್ತಿದೆ! ಈ ಪೃಥ್ವಿ ಶಾಂತವಿದೆಯೆಂದು ತೋರಿದರೂ, ಅದರ ಒಳಗಿನಿಂದ ಯಾವ ಸದ್ದೂ ಕೇಳಿಬರದಿದ್ದರೂ, ಅದರ ಅಂತರಾಳದಲ್ಲಿ ಎಂಥ ವಡಬಾಗ್ನಿ ಉರಿಯುತ್ತಿದೆಯೆಂಬುದನ್ನು ನೀನೆಂತು ಅರಿತುಕೊಳ್ಳಬಲ್ಲೆ? ಆ ಕಲ್ಪನಾಶಕ್ತಿ ನಿನಗೆ ಹೇಗೆ ಬಂದೀತು?

ನೀಲಾಂಬರ ಬಂದು ಹೇಳಿದ: "ನನಗೆ ಕೆಲಸ ಸಿಕ್ಕಿತು ವಿರಾಜ್. ದುರ್ಗಾಪೂಜೆಯ ಸಮಯಕ್ಕೆ ಕಲ್ಕತ್ತೆಯ ಪ್ರಸಿದ್ಧ ಕೀರ್ತನ (ಭಾಗವತರ ಆಟದ) ಮಂಡಳಿಯಲ್ಲಿ ನಾನೇ ಮೃದಂಗ ಬಾರಿಸುವವನು."

ಈ ಸಮಾಚಾರ ಕೇಳಿದೊಡನೆಯೇ ವಿರಾಜಳ ಮುಖ ಹೆಣದ ಮುಖದಂತೆ ರಕ್ತಹೀನವಾಯಿತು. ಅವಳು ಮನದಲ್ಲಿಯೇ–"ನನ್ನ ಯಜಮಾನರು ಒಂದು ಮಂಡಳಿಯ ಅಧೀನದಲ್ಲುಳಿದು ಸಭ್ಯ ಗೃಹಸ್ಥರ ಮುಂದೆ ನೃತ್ಯ–ಗಾಯನ ಮಾಡುತ್ತ ಅಲೆಯುವರೇ? ಹಾಗಾದರೆ ನಮ್ಮ ಹೊಟ್ಟೆ ತುಂಬಿದ ಹಾಗೆಯೆ ಸರಿ!" ಎಂದುಕೊಂಡಳು. ನಾಚಿಕೆ ಜುಗುಪ್ಸೆಗಳಿಂದ ಅವಳು ಜರ್‍ರನೆ ಇಳಿದು ಹೋದಳು. ಆದರೆ ಬಾಯಿಬಿಚ್ಚಿ ಹೇಳಿ ನೀಲಾಂಬರನನ್ನು ಆ ಕೆಲಸದಿಂದ ತಡೆಹಿಡಿಯಲಿಲ್ಲ. ಹೇಗಾದರೂ ಹೊಟ್ಟೆ ಹೊರೆಯಬೇಕಲ್ಲವೆ! ಆಗ ವಿರಾಜಳ ಮುಖದ ಮೇಲೆ ಮೂಡಿದ ಕಪ್ಪು ಛಾಯೆ ಸಂಜೆಯ ಕತ್ತಲಲ್ಲಿ ನೀಲಾಂಬರನ ಕಂಣಿಗೆ ಬೀಳಲಿಲ್ಲ. ಹಾಗಾದುದು ಒಳಿತೇ ಆಯಿತು.

ಇಳಿತದ ಸೆಳೆತಕ್ಕೆ ಸಮುದ್ರದ ನೀರು ಪ್ರತಿ ಕ್ಷಣಕ್ಕೂ ಕ್ಷೀಣತೆಯ ಗುರುತನ್ನು ದಂಡೆಯ ಮೇಲೆ ಮೂಡಿಸಿ ಹಿಂದೆ ಹಿಂದೆ ಸರಿಯುವಂತೆ ವಿರಾಜಳೂ ಒಂದೇ ಸಮನಾಗಿ ಒಣಗಿ ಕೃಶಳಾಗತೊಡಗಿದಳು. ದೇವತೆಗಳೂ ಆಸೆಬಟ್ಟು ಬಯಸುವ ಅವಳ ಆ ಏರುಂಜೌವನದ ಕಾಂತಿ ಈಗ ಎಲ್ಲಿ, ಎಂತು, ಅಡಗಿತೋ ಯಾರು ಬಲ್ಲರು! ಅವಳ ದೇಹವಂತೂ ಒಣಗಿದೆ. ಮುಖ ಕಪ್ಪಿಟ್ಟಿದೆ! ದೃಷ್ಟಿಯೂ ಮಂದವಾಗಿದೆ. ಅವಳಿಗೆ ಯಾವ ಭಯವೊ?–ದಿನದಿನಕ್ಕೂ ಅದರ ಪ್ರಭಾವ ಅವಳ ಮೇಲೆ ಹೆಚ್ಚಾಗುತ್ತಲೇ ಹೋಯಿತು. ಆದರೂ ಅವಳ ಕಡೆಗೆ ಗಮನವೀಯುವವರಾರೂ ಇರಲಿಲ್ಲ. ಓರಗಿತ್ತಿ ಮಾತ್ರ

ತಪ್ಪದೆ ಲಕ್ಷ್ಯವೀಯುತ್ತಿದ್ದಳು. ಆದರೆ ಅವಳೂ ಸಹ ಒಂದು ತಿಂಗಳಿಂದ ಮನೆಯಲ್ಲಿರಲಿಲ್ಲ; ಅಣ್ಣನ ಅಸ್ವಸ್ಥತೆಯ ಸುದ್ದಿ ಕೇಳಿ ತೌರಿಗೆ ಹೋಗಿದ್ದಳು. ನೀಲಾಂಬರನೂ ಬಹುಶಃ ಹಗಲು ಮನೆಯಲ್ಲಿ ಇರುತ್ತಿರಲೇ ಇಲ್ಲ. ಅವನು ಮನೆಗೆ ಬರುತ್ತಿದ್ದನೇನೋ ನಿಜ, ಆದರೆ ಕತ್ತಲಾದ ಬಳಿಕವೇ. ಆಗ ಅವನ ಕಣ್ಣು ಬಹುಶಃ ರಕ್ತವರ್ಣದವಾಗಿರುತ್ತಿದ್ದವು. ಮೂಗಿನಿಂದ ಉಸಿರೂ ಬಿಸಿಯಾಗಿಯೆ ಹೊರಬೀಳುತ್ತಿತ್ತು. ವಿರಾಜಳು ಎಲ್ಲವನ್ನೂ ನೋಡುತ್ತಿದ್ದಳು, ಎಲ್ಲವೂ ಅವಳಿಗೆ ತಿಳಿಯುತಿತ್ತು. ಆದರೆ ಒಂದು ಮಾತನ್ನೂ ಆಡುತ್ತಿರಲಿಲ್ಲ; ಆಡುವ ಇಚ್ಛೆಯೂ ಆಗುತ್ತಿರಲಿಲ್ಲ. ಇತ್ತೀಚೆ ಮಾತನಾಡಿದರೂ ಅವಳಿಗೆ ಆಯಾಸವಾಗುತ್ತಿತ್ತು.

ಈಗ ಕೆಲ ದಿನಗಳಿಂದ ಸಂಜೆಯು ಮುನ್ನವೆ ವಿರಾಜಳಿಗೆ ಚಳಿ ಬರುತ್ತಿತ್ತು, ತಲೆಶೂಲೆಯೂ ಅಂಟಿಕೊಂಡಿತ್ತು. ಇಂಥ ಅವಸ್ಥೆಯಲ್ಲಿಯೂ ಕುರುಡು ದೀವಿಗೆ ಹಿಡಿದು ಅವಳು ಅಡುಗೆ ಮಾಡಲು ಹೋಗಬೇಕಾಗುತ್ತಿತ್ತು. ನೀಲಾಂಬರ ಹಗಲು ಮನೆಯಲ್ಲಿ ಇರುತ್ತಿದ್ದಿಲ್ಲವಾದುದರಿಂದ ಹಗಲು ಒಲೆಗೆ ಉರಿಯನ್ನೇ ಹಾಕುತ್ತಿರಲಿಲ್ಲ. ರಾತ್ರಿ ಅಡುಗೆ ಮಾಡುತ್ತಿದ್ದಳು. ಆದರೆ ಆಗ ಅವಳ ಮೈಯಲ್ಲಿ ಜ್ವರವೇರಿಬರುತ್ತಿತ್ತು. ಹೀಗಾಗಿ ಗಂಡನ ಊಟವಾದ ಬಳಿಕ ಕೈಕಾಲು ತೊಳೆದುಕೊಂಡು ಉಪವಾಸವೇ ಮಲಗಿಬಿಡುತ್ತಿದ್ದಳು. ಇದೇ ರೀತಿ ಅವಳ ದಿನಗಳು ಸಾಗಿದ್ದವು. ವಿರಾಜಳು ಈಗ ದೈವ ದೇವರುಗಳ ಆಸೆ ತೊರೆದಳು. ಮೊದಲಿನಂತೆ ಪ್ರಾರ್ಥನೆಯನ್ನೂ ಮಾಡುತ್ತಿರಲಿಲ್ಲ. ಪ್ರಾತಃಕಾಲದ ನಿತ್ಯ ಪೂಜೆ ಮುಗಿಸಿ ಕೊರಳಿಗೆ ಸೆರಗು ಸುತ್ತಿಕೊಂಡು ದೇವರಿಗೆ ಪ್ರಣಾಮ ಮಾಡುತ್ತ ಮನವಲ್ಲಿಯೆ–" ಹೇ ದೇವಾ, ನನ್ನ ಈ ಪ್ರಯಾಣವನ್ನು ಬೇಗನೆ ಕೊನೆಗೊಳ್ಳುವಂತೆ ಮಾಡು. ನಾನು ತಲ್ಪಬೇಕಾದ ಸ್ಥಾನವನ್ನು ಅತಿ ಶೀಘ್ರವಾಗಿ ತಲ್ಪುವಂತಾಗಲಿ " ಎಂದು ಬೇಡಿಕೊಳ್ಳುತ್ತಿದ್ದಳು.

ಅಂದು ಶ್ರಾವಣ ಸಂಕ್ರಾಂತಿ. ಬೆಳಗಿನಿಂದಲೇ ಜಡೆಮಳೆ ಸುರಿಯುತ್ತಿತ್ತು ; ಒಂದು ಗಳಿಗೆ ಸಹ ನಿಲ್ಲಲಿಲ್ಲ. ಮೂರು ದಿನ ಜ್ವರದಿಂದ ಬಳಲಿ ಹಸಿವು ಬಾಯಾರಿಕೆಗಳಿಂದ ಬೆಂಡಾಗಿ ವಿರಾಜಳು ಸಂಜೆಯಾದ ಬಳಿಕ ಹಾಸಿಗೆಯ ಮೇಲೆ ಎದ್ದು ಕುಳಿತಳು. ನೀಲಾಂಬರ ಮನೆಯಲ್ಲಿರಲಿಲ್ಲ. ಮೊನ್ನೆ ಹೆಂಡತಿಗೆ ಬಹಳ ಜ್ವರ ಬಂದುದನ್ನು ಕಂಡೂ, ತನ್ನ ಶ್ರೀಮಂತ ಶಿಷ್ಯನ ವಾಸಸ್ಥಳವಾದ ಶ್ರೀರಾಮಪುರಕ್ಕೆ ಹೋಗಿದ್ದ. ಏನಾದರಷ್ಟು ಸಹಾಯ ಸಿಗಬಹು

ದೆಂಬ ಆಸೆ ಅವನಿಗೆ. ಹೋಗುವ ಮುನ್ನ ತಾನು ರಾತ್ರಿಗೆ ಮರಳುವುದಾಗಿಯೂ ಖಂಡಿತವಾಗಿ ತಾನು ಅಲ್ಲಿ ನಿಲ್ಲುವುದಿಲ್ಲವೆಂತಲೂ ವಿರಾಜಳಿಗೆ ಭರವಸೆಯಿತ್ತು ಹೋಗಿದ್ದ. ಆದರೆ ಮೂರು ದಿನ ಸಂದರೂ ಅವನ ಸುಳಿವಿಲ್ಲ. ಬಹುಶಃ ಇಂದೂ ಅವನು ಮರಳಿ ಬರುವಂತೆ ತೋರಲಿಲ್ಲ.

ಅನೇಕ ದಿನಗಳ ತರುವಾಯ ಇಂದು ವಿರಾಜಳ ಕಣ್ಣುಗಳಲ್ಲಿ ಕಂಬನಿ ಕದಡಿತು. ದಿನವೆಲ್ಲವೂ ಅವಳ ಕಣ್ಣುಗಳಿಂದ ಕಂಬನಿ ಇಳಿಯುತ್ತಲೇ ಇತ್ತು. ಅವಳಿಗೆ ಹಾಸಿಗೆಯ ಮೇಲೆ ಒರಗಿರಲು ಮನಸ್ಸೇ ಆಗಲಿಲ್ಲ. ಸಂಜೆಯಾ ದುದೇ ತಡ, ದೀವಿಗೆ ಹಚ್ಚಿದಳು. ಬಳಿಕ ತಲೆಯ ಮೇಲೆ ಹೊದಿಕೆಯೊಂದನ್ನು ಹಾಕಿಕೊಂಡು ನಡುಗುತ್ತಲೇ ಮನೆಯಿಂದ ಹೊರಬಂದು ಬೀದಿಯ ಒಂದು ತುದಿಯಲ್ಲಿ ನಿಂತುಕೊಂಡಳು. ಮಳೆಗಾಲದ ಕತ್ತಲ ರಾತ್ರಿಯಲ್ಲಿ ದೃಷ್ಟಿ ಯೋಡುವ ಉದ್ದಕ್ಕೂ ಸುತ್ತಲೂ ನಿರೀಕ್ಷಿಸಿದಳು. ಆದರೆ ಅವಳಿಗೆ ಯಾರೂ ಕಾಣಲಿಲ್ಲ. ಪುನಃ ಮನೆಗೆ ಹಿಂದಿರುಗಿದಳು. ಒದ್ದೆ ಸೀರೆ, ತೊಯ್ದ ಕೂದಲು ಗಳಿಂದಲೆ ಅವಳು ದೇವೀ ಮಂದಿರದ ಕಂಬಕ್ಕೆ ಒರಗಿ ಕುಳಿತು ಅಳತೊಡಗಿ ದಳು. ಬಳಿಕ ದುಗುಡದಿಂದ ಮನದೊಳಗೇ–"ಅವರು ಎಲ್ಲಿದ್ದಾರೋ ಏನೋ? ದುಃಖ ತಾಪತ್ರಯ ಸಹಿಸಿ ಸಹಿಸಿ, ಉಪವಾಸ ಮಾಡಿ ಮಾಡಿ, ಅವರ ಶರೀರ ತುಂಬಾ ದುರ್ಬಲವಾಗಿದೆ. ಸಾಲದ್ದಕ್ಕೆ ಅಷ್ಟು ದೂರ ಬೇರೆ ನಡೆದು ಕೊಂಡೇ ಹೋಗಬೇಕಾಯಿತು. ಅವರಿಗೇನಾದರೂ ಬೇನೆ ಬೇಸರಿಕೆ ಆಗಿ ದೆಯೋ? ಅಥವಾ ಗಾಡಿ ಬಂಡಿಗಳ ಅಡಿ ಸಿಕ್ಕಿಪರೊ? ಏನು ಅನಿಷ್ಟ ಸಂಭವಿಸಿ ದೆಯೊ ಏನೋ? ನಾನು ಬಿದ್ದಿರುವುದು ಇಲ್ಲಿ ಮನೆಯಲ್ಲಿ! ಅವರ ಸಮಾಚಾರ ಹೇಗೆ ತಿಳಿಯಲಿ? ಅದಕ್ಕೇನು ಉಪಾಯ ಹೂಡಲಿ?" ಎಂದು ಚಡಪಡಿಸ ತೊಡಗಿದಳು.

ಇನ್ನೊಂದು ಕಸಿವಿಸಿ–ಮನೆಯಲ್ಲಿ ಪೀತಾಂಬರನೂ ಇರಲಿಲ್ಲ. ಹೆಂಡತಿ ಯನ್ನು ಕರೆತರಲು ನಿನ್ನೆ ಮಧ್ಯಾಹ್ನವೇ ಹೋಗಿದ್ದ. ಆ ದೊಡ್ಡ ಮನೆಯಲ್ಲಿ ವಿರಾಜಳೊಬ್ಬಳೇ ಒಬ್ಬಳು. ಮೇಲಾಗಿ ರೋಗಿಷ್ಠೆ. ಅಂದು ಮಧ್ಯಾಹ್ನದಿಂದ ಜ್ವರ ಇಳಿದಿವೆಯೆಂಬುದೇನೋ ನಿಜ. ಆದರೆ ಹೊಟ್ಟೆಗೇನಾದರೂ ಹಾಕಿ ಕೊಳ್ಳೋಣವೆಂದರೆ ಮನೆಯಲ್ಲಿ ಏನೂ ಇಲ್ಲ. ಎರಡು ದಿನಗಳಿಂದ ಕೇವಲ ನೀರು ಕುಡಿದೇ ಇದ್ದಾಳೆ.

ಮಳೆಯಲ್ಲಿ ತೊಯ್ದುದರಿಂದ ವಿರಾಜಳಿಗೆ ಚಳಿಯಾಗತೊಡಗಿತು.

ತಲೆಯೂ ಸುತ್ತತೊಡಗಿತು. ಅವಳು ಕೈಕಾಲುಗಳಿಗೆ ಶಕ್ತಿ ತಂದುಕೊಂಡು ಅತ್ಯಂತ ಪ್ರಯಾಸದಿಂದೆದ್ದು ದೇವೀಮಂದಿರವನ್ನು ಹೊಕ್ಕು ನೆಲದ ಮೇಲೆ ಬಿದ್ದು ತಲೆ ಚಚ್ಚಿಕೊಳ್ಳತೊಡಗಿದಳು.

ಆಗ ಒಮ್ಮೆಲೇ ಬಾಗಿಲು ತಟ್ಟಿದಂತಾಯಿತು. ವಿರಾಜಳು ಕಿವಿಗೊಟ್ಟು ಕೇಳಿದಳು. ಮತ್ತೊಮ್ಮೆ ಬಾಗಿಲು ತಟ್ಟಿದ ಸದ್ದು ಕೇಳಿಬಂತು. ಸದ್ದು ಕೇಳಿತೋ ಇಲ್ಲವೋ–'ಬಂದೆ' ಎನ್ನುತ್ತ ಅವಳು ಕ್ಷಣಮಾತ್ರದಲ್ಲಿಯೆ ಓಡಿ ಬಾಗಿಲು ತೆರೆದಳು. ಅರ್ಧ ಗಳಿಗೆ ಮೊದಲು ಇದೇ ವಿರಾಜಳಿಗೆ ಎದ್ದು ನಿಲ್ಲಲೂ ಬಲವಿರಲಿಲ್ಲ.

ಬಾಗಿಲು ತಟ್ಟಿದವನು ಹತ್ತಿರದ ಕೇರಿಯಲ್ಲಿ ವಾಸಿಸುವ ರೈತನ ಹುಡುಗ. "ಅಮ್ಮಾ, ದಣಿಯರಿಗೆ ಒಂದು ಪಂಚೆ ಬೇಕಂತೆ" ಎಂದ ಆ ಹುಡುಗ.

ವಿರಾಜಳಿಗೆ ಆ ಹುಡುಗನ ಮಾತಿನರ್ಥ ಸರಿಯಾಗಿ ಆಗಲಿಲ್ಲ. ಬಾಗಿಲಿಗೆ ಒರಗಿ ಸ್ವಲ್ಪ ಹೊತ್ತು ಅವನನ್ನೇ ದಿಟ್ಟಿಸಿ–"ಪಂಚೆ ಕೇಳಿದರೇ? ಅವರೆಲ್ಲಿದ್ದಾರೆ?" ಎಂದಳು.

ಹುಡುಗ ಉತ್ತರವಿತ್ತ: "ಗೋಪಾಲ ಧಣಿಯ ತಂದೆಯವರನ್ನು ಗಂಗೆಯ ಕಡೆಗೆ ಒಯ್ದು ಇದೀಗ ಮರಳಿ ಬಂದಿದ್ದಾರೆ."

"ಗಂಗೆಯ ಕಡೆಗೆ ಒಯ್ದು!" ವಿರಾಜಳಿಗೆ ಕತ್ತಲು ಕವಿದಂತಾಯಿತು. ಗೋಪಾಲ ಚಕ್ರವರ್ತಿ ಅವಳ ದೂರದ ನೆಂಟರು. ಅವರ ತಂದೆ ಕೆಲ ದಿನಗಳಿಂದ ಅಸ್ವಸ್ಥರಾಗಿದ್ದರು. "ಈಗೆರಡು ದಿನಗಳ ಮೊದಲು ಅವರನ್ನು ಗಂಗಾತಟಕ್ಕೆ ಒಯ್ದಿದ್ದರು. ಇಂದು ಮಧ್ಯಾಹ್ನ ಅವರು ಕಾಲವಾದ ನಂತರ ಅಗ್ನಿಸಂಸ್ಕಾರ ಮಾಡಿ ಎಲ್ಲರೂ ಇದೀಗ ಮರಳಿ ಬಂದಿದ್ದಾರೆ" ಎಂದು ಎಲ್ಲ ಸಮಾಚಾರವನ್ನು ತಿಳಿಸಿ ಪುನಃ ಆ ಹುಡುಗ ಹೇಳಿದ: "ಈ ಹಳ್ಳಿಯಲ್ಲೆಲ್ಲ ನಮ್ಮ ಧಣಿಗೆ ಸರಿಸಮಾನವಾದ ನಾಡಿಜ್ಞಾನ ಯಾರಿಗೂ ಇಲ್ಲವಮ್ಮಾ. ಅದ್ದರಿಂದಲೇ ರೋಗಿಯೊಂದಿಗೆ ಅವರು ಇದ್ದದ್ದು."

ನಡುಗುತ್ತಿರುವ ಕಾಲುಗಳಿಂದಲೆ ವಿರಾಜಳು ಒಳಗೆ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡಳು.

ಒಬ್ಬ ಮನುಷ್ಯ, ಅದೇಕೆ, ಒಂದು ಪ್ರಾಣಿಯೂ ಇಲ್ಲದ ಇಂಥ ಮನೆಯಲ್ಲಿ ಜ್ವರಬಾಧೆಯಿಂದಲೂ ಮಹಾಚಿಂತೆಯಿಂದಲೂ ನಿರಾಹಾರದಿಂದಲೂ ಮೃತಪ್ರಾಯಳಾಗಿ ತಾನು ಬಿದ್ದಿರುವಾಗ, ತನ್ನ ಗಂಡ ಹೊರಗೆ ಪರೋಪಕಾರ

ದಲ್ಲೇ ತೊಡಗಿದ್ದಾನೆಂಬ ಸುದ್ದಿಯನ್ನು ಕೇಳಿದ ಆ ದುರ್ಭೈವಿ ಹೆಂಗುಸಿಗೆ ಮಾತನಾಡುವ ಇಚ್ಛೆ ಹೇಗೆ ಉಂಟಾದೀತು? ವಿರಾಜಳು ಈಗ ಪೂರ್ಣ ಕುಸಿದಂತಾದಳು. ಆವಳ ವಿಕಾರಗೊಂಡ ಮಿದುಳಿನಲ್ಲಿ-"ಈ ಜಗತ್ತಿನಲ್ಲಿ ನಿನಗೆ ನಿನ್ನವರೆಂಬುವವರಾರೂ ಇಲ್ಲ; ನಿನಗೆ ತಾಯಿಯಿಲ್ಲ, ತಂದೆಯಿಲ್ಲ; ಬಂಧುವಿಲ್ಲ, ಭಗಿನಿಯಿಲ್ಲ. ಅದೇಕೆ, ಗಂಡನೂ ಇಲ್ಲ. ನಿನಗಿರುವವನು ಯಮನೊಬ್ಬನೇ. ಅವನಲ್ಲಿಯಲ್ಲದೆ ಬೇರೆ ಎಲ್ಲಿಯೂ ನೀನು ಶಾಂತಿ ಪಡೆವುದು ಅಸಂಭವ" ಎಂಬ ಯೋಚನೆ ಸುತ್ತತೊಡಗಿತು.

ಹೊರಗೆ ಜುಯ್ಯೆಂದು ಮಳೆ ಬೀಳುತಿತ್ತು. ಆಗಾಗ ಗುಡುಗು ಭೋರಿಡುತ್ತಿತ್ತು. ಗಾಳಿಯೂ ಸುಯ್ಯೆಂದು ಬೀಸುತಿತ್ತು. ಈ ಎಲ್ಲ ಸದ್ದಿನಿಂದ ಕೇವಲ-"ಇಲ್ಲ-ಇಲ್ಲ"ವೆಂಬ ಒಂದೇ ಒಂದು ಸದ್ದು ಒಂದೇ ಸಮನೆ ಹೊರಸೂಸಿ ಅವಳ ಎರಡೂ ಕಿವಿಗಳಲ್ಲಿ ಪ್ರವೇಶಿಸುತ್ತಿತ್ತು-"ಉಗ್ರಾಣದಲ್ಲಿ ಅಕ್ಕಿಯಿಲ್ಲ, ಕಣಜದಲ್ಲಿ ಧಾನ್ಯವಿಲ್ಲ. ತೋಟದಲ್ಲಿ ಹಣ್ಣು ಹಂಪಲುಗಳಿಲ್ಲ, ಕೆರೆಯಲ್ಲಿ ಮೀನುಗಳೂ ಇಲ್ಲ. ಸುಖವಿಲ್ಲ, ಶಾಂತಿಯಿಲ್ಲ, ಆರೋಗ್ಯವೂ ಇಲ್ಲ. ಮನೆಯಲ್ಲಿ ಓರಗಿತ್ತಿಯೂ ಇಲ್ಲ. ಅಲ್ಲದೆ ಇವೆಲ್ಲವುಗಳ ಜೊತೆಗೆ ಗಂಡನೂ ಇಲ್ಲ." ಆಶ್ಚರ್ಯದ ಸಂಗತಿಯೆಂದರೆ, ಇಷ್ಟಾದರೂ ಅವಳ ಹೃದಯದಲ್ಲಿ ಯಾರ ವಿರುದ್ಧವೂ ತಿಲಮಾತ್ರ ಕೋಪವೂ ಇರಲಿಲ್ಲ. ಇಂದು ಅವಳಿಗೆ ಗೋಚರವಾದ ಗಂಡನ ನಿಷ್ಕರುಣೆಯ ವೃತ್ತಿಯಲ್ಲಿ ನೂರರಲ್ಲಿ ಒಂದಂಶವನ್ನು ಒಂದು ವರ್ಷ ಮೊದಲು ಕಂಡಿದ್ದರೆ ಕೋಪದಿಂದ ಹುಚ್ಚಿಯಾಗದಿರುತ್ತಿದ್ದಿಲ್ಲ. ಆದರೆ ಈಗ ಅದಾವುದೋ ಒಂದು ಜಡತೆ ಅವಳನ್ನು ಸತ್ವಹೀನಳನ್ನಾಗಿ ಮಾಡಿತ್ತು.

ಹೀಗೆ ನಿರ್ಜೀವಿಯಂತೆ ಹಾಸಿಗೆಯ ಮೇಲೆ ಬಿದ್ದುಕೊಂಡಾಗ ಅವಳ ಮನದಲ್ಲಿ ಅದೆಷ್ಟೋ ಭಾವನೆಗಳು ತೂರಿ ಬರತೊಡಗಿದವು. ಆದರೆ ಅವೆಲ್ಲವೂ ತಾಳಮೇಳವಿಲ್ಲದ ಹುಚ್ಚು ಭಾವನೆಗಳು. ಈ ಎಲ್ಲ ಯೋಚನೆಗಳಲ್ಲಿ ಮುಳುಗಿದ್ದರೂ ರೂಢಿಯ ಬಲದಿಂದ-"ಇಂದು ಅವರು ಇಡಿಯ ದಿನ ಉಪವಾಸವೇ ಇದ್ದಾರೆ" ಎಂಬ ವಿಚಾರ ಒಮ್ಮೆಲೇ ಅವಳ ಮನದಲ್ಲಿ ಮೂಡಿತು.

ಆಗ ವಿರಾಜಳಿಗೆ ಸುಮ್ಮನೆ ಒರಗಿರಲು ಸಾಧ್ಯವಾಗಲಿಲ್ಲ. ತಟ್ಟನೆ ಹಾಸಿಗೆಯಿಂದೆದ್ದವಳೇ ದೀವಿಗೆ ತೆಗೆದುಕೊಂಡು ಉಗ್ರಾಣದಲ್ಲಿ ಲಕ್ಷ್ಯಪೂರ್ವಕವಾಗಿ ಹುಡುಕತೊಡಗಿದಳು. ಸ್ವಲ್ಪ ಅಕ್ಕಿ ದೊರೆತರೆ ಗಂಡನಿಗೆ ಅನ್ನವನ್ನಾದರೂ ಮಾಡಿಡೋಣವೆಂದು ಅವಳ ವಿಚಾರ. ಆದರೆ ಮನೆಯಲಿ ಅಡುಗೆಯ

ಪದಾರ್ಥವೊಂದೂ ಇರಲಿಲ್ಲ. ಅಕ್ಕಿ, ಬೇಳೆ, ತಿನ್ನುವ ಯಾವ ಸಾಮಾನೂ ಇರಲಿಲ್ಲ. ಅವಳು ಉದ್ವಿಗ್ನಳಾಗಿ ಕೋಣೆಯಿಂದ ಹೊರಬಿದ್ದಳು. ಹೊರಗೆ ಗೋಡೆಯನ್ನು ಒರಗಿಕೊಂಡು ಅಲ್ಲಿಯೇ ಕ್ಷಣ ಹೊತ್ತು ಸ್ಥಿರಚಿತ್ತಳಾಗಿದ್ದು ಮನದಲ್ಲಿಯೇ ಯೋಚಿಸಿದಳು. ಬಳಿಕ ದೀಪ ನಂದಿಸಿ ಬಾಗಿಲು ತೆರೆದು ಹೊರಬಿದ್ದಳು. ಹೊರಗೆ ಗಾಢಾಂಧಕಾರ. ಎಲ್ಲೆಲ್ಲಿಯೂ ಮೈನವಿರೇಳುವ ನಿಸ್ತಬ್ಧತೆ. ಮಾರ್ಗದಲ್ಲಿ ಹೆಜ್ಜೆಹೆಜ್ಜೆಗೆ ಜಾರಿಕೆ. ಅಡಿಗಡಿಗೆ ಹುಲ್ಲು-ಕಂಟಿ, ಪೊದೆ-ಎಲೆ ಬಳ್ಳಿಗಳು, ದಟ್ಟವಾಗಿ ಬೆಳೆದು ತಲೆಯೆತ್ತಿ ನಿಂತಿವೆ. ಆದರೆ ವಿರಾಜಳ ಕಾಲನ್ನು ತಡೆಯಲು ಅದಾವುದಕ್ಕೂ ಇಂದು ಶಕ್ತಿಯಿರಲಿಲ್ಲ. ತೋಟದ ಒಂದು ಮೂಲೆಯೊಳಗಿನ ವನದಲ್ಲಿ ಹೊಲೆಯರ ಕೆಲವು ಗುಡಿಸಲುಗಳಿದ್ದವು. ಆ ಕಡೆಗೇ ಹೋಗುತ್ತಲಿದ್ದ ಅವಳು ಒಮ್ಮೆಲೇ ಒಂದು ಗುಡಿಸಲಿನೆದುರು ನಿಂತು—"ತುಳಸೀ!" ಎಂದು ಕೂಗಿದಳು.

ಕರೆ ಕೇಳಿ ತುಳಸಿ ಕೈಯಲ್ಲಿ ದೀವಿಗೆ ಹಿಡಿದುಕೊಂಡು ಹೊರಗೆ ಬಂದಳು. ವಿರಾಜಳನ್ನು ನೋಡಿದೊಡನೆಯೇ ಅವಳು ವಿಸ್ಮಯದಿಂದ ಅವಾಕ್ಕಾದಳು. ಕ್ಷಣ ಹೊತ್ತು ತಡೆದು—"ಇಂಥ ಕತ್ತಲಲ್ಲಿ ಏಕೆ ಬಂದಿರಿ ತಾಯಿಾ?" ಎಂದು ಕೇಳಿದಳು.

"ನನಗೆ ಸ್ವಲ್ಪ ಅಕ್ಕಿ ಬೇಕಾಗಿದೆ"—ವಿರಾಜಳೆಂದಳು.

"ಅಕ್ಕಿ ಬೇಕೆ?"—ತುಳಸಿ ಚಕಿತಳಾದಳು. ಇಂಥ ಪ್ರತಿಷ್ಠಿತ ಮನೆಯ ಹೆಣ್ಣು ತನ್ನ ಮನೆಯ ಕೀಳು ತರಗತಿಯ ಅಕ್ಕಿಯನ್ನು ಕೇಳಲು ಏಕೆ ಬಂದಳೆಂಬುದು ಅವಳಿಗೆ ಹೊಳೆಯಲೇ ಇಲ್ಲ.

ಅವಳ ಮುಖವನ್ನೇ ದಿಟ್ಟಿಸುತ್ತ ವಿರಾಜಳು—"ಸುಮ್ಮನೆ ನಿಂತಿರಬೇಡ ತುಳಸಿ! ಬೇಗ ಕೊಡು!" ಎಂದಳು.

ಪುನಃ ಒಂದೆರಡು ಸಲ ಹೇಳಿಸಿಕೊಂಡ ನಂತರವೇ ತುಳಸಿ ಒಳಗಿನಿಂದ ತುಸು ಅಕ್ಕಿಯನ್ನು ತಂದು ವಿರಾಜಳ ಸೆರಗಿಗೆ ಕಟ್ಟುತ್ತ—"ಈ ಕದಕ್ಕಿಯನ್ನು ಕೊಂಡು ಏನು ಮಾಡುವಿರಮ್ಮ! ಇಂಥ ಅಕ್ಕಿಯನ್ನು ನೀವು ಉಂಬುವುದೇ ಇಲ್ಲ" ಎಂದಳು.

ವಿರಾಜ್ ತಲೆ ಅಲ್ಲಾಡಿಸುತ್ತ—"ಇವೊತ್ತು ಈ ಅಕ್ಕಿಯ ಊಟವನ್ನೇ ಮಾಡುವುದು" ಎಂದಳು.

ಕೈಯಲ್ಲಿ ದೀವಿಗೆ ತೆಗೆದುಕೊಂಡು "ನಿಮ್ಮನ್ನು ಮನೆಗೆ ತಲುಪಿಸಿ ಬರು

ತ್ತೇನೆ” ಎಂದು ತುಳಸಿ ಹೇಳಿದಾಗ ವಿರಾಜಳು ಅವಳನ್ನು ತಡೆದು- “ಅಗತ್ಯ ವಿಲ್ಲ. ಅಲ್ಲದೆ ಮತ್ತೆ ನೀನೊಬ್ಬಳೇ ಹಿಂದಿರುಗಬೇಕಲ್ಲವೆ ? ” ಎಂದು ನಿಮಿಷ ಮಾತ್ರದಲ್ಲಿ ಆ ಕಗ್ಗತ್ತಲಲ್ಲಿ ಅದೃಶ್ಯಳಾದಳು. ಇಂದು ಅವಳು ಒಬ್ಬ ಮಾದಿ ಗನ ಮನೆಗೆ ಬಿಕ್ಕೆಬೇಡಲು ಹೋಗಿದ್ದಳು; ನೀಡಿಸಿಕೊಂಡೂ ಬಂದಳು. ಆದರೆ ಇಂಥ ದೊಡ್ಡ ಅಪಮಾನದ ಪರಿಸ್ಥಿತಿಯಿಂದಲೂ ಅವಳಿಗೆ ಕೊಂಚವೂ ದುಃಖವಾಗಲಿಲ್ಲ. ಶೋಕ, ದುಃಖ, ಅಭಿಮಾನ, ಅವಮಾನ ಇವುಗಳ ಯೋಚನೆ ಮಾಡುವ ಶಕ್ತಿಯೂ ಅವಳಲ್ಲಿರಲಿಲ್ಲ.

ವಿರಾಜಳು ಮರಳಿ ಮನೆಗೆ ಬಂದಾಗ ನೀಲಾಂಬರ ಮನೆಗೆ ಬಂದಿದ್ದ. ಮೂರು ದಿನಗಳಿಂದ ಅವಳಿಗೆ ಗಂಡನ ಮುಖದರ್ಶನವಿರಲಿಲ್ಲ. ಆದ್ದರಿಂದ ಅವನನ್ನು ನೋಡಿದೊಡನೆಯೇ ಅವಳ ದೇಹದಲ್ಲಿ ರಕ್ತದ ಕಣಕಣವೂ ಉತ್ತೇಜನಗೊಂಡಿತು. ಅಲ್ಲದೆ, ತಡೆಯಲಾರದ ಒಂದು ಸೆಳೆತವು ಅವಳನ್ನು ಅವನ ಕಡೆಗೆ ಎಳೆಯತೊಡಗಿತು. ಆದರೆ ಅವಳೆದುರು ಆ ಶಕ್ತಿಯು ಆಟ ನಡೆ ಯಲೇ ಇಲ್ಲ.

ತೀವ್ರ ವಿದ್ಯುತ್‌ಸ್ಪರ್ಶದಿಂದ ಧಾತುವೃದ್ಧಿ ಹೊಂದುವಂತೆ ಗಂಡನ ಸಾನ್ನಿಧ್ಯದಿಂದ ವಿರಾಜಳಿಗೆ ಒಂದು ಹೊಸ ಶಕ್ತಿ ಬಂದಂತಾಯಿತು.

ಆದರೂ ಅವಳು ಆ ಆಕರ್ಷಣವನ್ನೆಲ್ಲ ನಿರೋಧಿಸಿ, ಸ್ತಬ್ಧಳಾಗಿ ನಿಂತು ನೀಲಾಂಬರನನ್ನು ಎವೆಯಿಕ್ಕದೆ ನಿಟ್ಟಿಸತೊಡಗಿದಳು.

ನೀಲಾಂಬರ ಒಂದು ಸಲ ಕುತ್ತಿಗೆಯನ್ನೆತ್ತಿ ನೋಡಿ ಮುಖವನ್ನು ಕೆಳಗೆ ಮಾಡಿದ. ಆದರೆ ಅವರೀರ್ವರ ದೃಷ್ಟಿ ಒಂದು ಅರೆ ಗಳಿಗೆ ಮಿಲನವಾದಾಗ ಗಂಡನ ಕಣ್ಣುಗಳೆರಡೂ ಕೆಂಪಾಗಿರುವುದನ್ನು ವಿರಾಜಳು ಕಂಡಳು. ಹೆಣ ವನ್ನು ಗಂಗೆಗರ್ಪಿಸಲು ಹೋದ ಜನ, ಮೂರು ದಿನ ಅಲ್ಲಿಯೇ ಉಳಿದಾಗ ನಿರಂತರ ಗಾಂಜಾ ಸೇದುತ್ತಿದ್ದರೆಂದು ವಿರಾಜಳಿಗೆ ತಿಳಿಯದೆ ಹೋಗಲಿಲ್ಲ. ಐದಾರು ನಿಮಿಷ ಹಾಗೆಯೆ ನಿಂತು ಬಳಿಕ ಗಂಡನ ಹತ್ತಿರ ಬಂದು—“ ಇನ್ನೂ ನಿಮ್ಮ ಊಟವಾಗಿಲ್ಲವೆ ? ” ಎಂದು ಕೇಳಿದಳು

“ ಇಲ್ಲ ” -ಎಂದ ನೀಲಾಂಬರ.

ವಿರಾಜಳು ಅಡುಗೆ ಮನೆಗೆ ಹೋಗತೊಡಗಿದಳು. ಅಷ್ಟರಲ್ಲಿ ನೀಲಾಂಬರ ಒಮ್ಮೆಗೇ ಅವಳನ್ನು ಕೂಗಿ ಕರೆದು—“ ಇಂಥ ಕತ್ತಲೆಯಲ್ಲಿ ನೀನೊಬ್ಬಳೇ ಎಲ್ಲಿಗೆ ಹೋಗಿದ್ದೆ ? ” ಎಂದು ಪ್ರಶ್ನಿಸಿದ.

ಮನಸ್ಸಿನಲ್ಲೇ ಯೋಚಿಸಿ ವಿರಾಜಳೆಂದಳು–"ಘಟ್ಟದ ಬಳಿಗೆ."

ನೀಲಾಂಬರ ಅಪನಂಬಿಕೆಯನ್ನು ತೋರುತ್ತ–"ಇಲ್ಲ,ನೀನು ಘಟ್ಟದ ಬದಿಗೆ ಹೋಗಿರಲೇ ಇಲ್ಲ" ಎಂದ.

"ಹಾಗಾದರೆ ಸುಡುಗಾಡಿಗೆ"–ಎಂದು ಸಿಡುಕಿದವಳೇ ಅಡುಗೆ ಮನೆ ಸೇರಿದಳು ಅವಳು. ಒಂದು ಗಂಟೆಯಾದ ಬಳಿಕ ಅಡುಗೆ ಮಾಡಿ ನೀಲಾಂಬರನನ್ನು ಊಟಕ್ಕೆ ಕರೆಯಲು ಹೊರಬಂದಾಗ ಆತ ಕಂಣು ಮುಚ್ಚಿ ತೂಕಡಿಸುತ್ತಿದ್ದುದನ್ನು ಕಂಡಳು. ಗಾಂಜಾವನ್ನು ಅತಿಯಾಗಿ ಸೇವಿಸಿದ ಫಲವಾಗಿ ನೀಲಾಂಬರನ ತಲೆ ಕಾಯ್ದಿತ್ತು; ಬುದ್ಧಿಯೂ ಮಂಕಾಗಿತ್ತು. ಆತ ನೆಟ್ಟಗೆ ಕುಳಿತು–"ನೀನೆಲ್ಲಿ ಹೋಗಿದ್ದೆ ಹೇಳು?" ಎಂದು ಪುನಃ ಪ್ರಶ್ನಿಸಿದ.

ಉತ್ತರವೀಯಲು ವಿರಾಜಳು ಬಾಯಿ ತೆರೆದಿದ್ದಳು. ಆದರೆ ತಟ್ಟನೆ ಹಲ್ಲಿನಿಂದ ಅದುಮಿಹಿಡಿದು ಶಾಂತಚಿತ್ತದಿಂದ–"ಈಗ ನೀವು ಊಟಮಾಡಿ ಮಲಗಿಕೊಳ್ಳಿ. ನಾಳೆ ನಿಮಗೆ ಎಲ್ಲವನ್ನೂ ವಿವರಿಸಿ ಹೇಳುತ್ತೇನೆ" ಎಂದಳು.

ತಲೆಯಲ್ಲಾಡಿಸುತ್ತ ನೀಲಾಂಬರನೆಂದ: "ಇಲ್ಲ,–ನೀನೆಲ್ಲಿ ಹೋಗಿದ್ದೆಯೆಂದು ಈಗಲೇ ಹೇಳಬೇಕು."

ಗಂಡನ ಆಗಿನ ಭಾವಭಂಗಿ ನೋಡಿ, ಆ ಘೋರ ಸಂಕಟಸಮಯದಲ್ಲಿಯೂ ವಿರಾಜಳಿಗೆ ನಗು ಬಂದಿತು. "ನಾನು ಹೇಳದೆಹೋದರೆ?"–ಎಂದು ಮುಗುಳು ನಕ್ಕಳು ಅವಳು.

"ಇಲ್ಲ, ನೀನು ಹೇಳಲೇಬೇಕು."

"ನಾನು ಈ ವಿಷಯವಾಗಿ ಇಂದು ಹೇಳುವುದೇ ಇಲ್ಲ. ಮೊದಲು ಊಟಮಾಡಿ. ಆ ಮೇಲೆ ನೋಡೋಣವಂತೆ."

ವಿರಾಜಳ ಮುಗುಳುನಗೆ ನೀಲಾಂಬರನಿಗೆ ಕಾಣಲಿಲ್ಲ. ಅವನು ಎರಡೂ ಕಣ್ಣುಗಳನ್ನು ತೆರೆದು ಮೊಗವನ್ನು ಮೇಲೆತ್ತಿದ. ಆಗ ಅವನ ಕಣ್ಣುಗಳಲ್ಲಿ ಆ ಅಮಲು ಕಾಣಲಿಲ್ಲ. ಆ ಕಣ್ಣುಗಳಲ್ಲಿ ಹಿಂಸೆಯ, ಜುಗುಪ್ಸೆಯ ನೋಟವಿತ್ತು. ಅವನು ಗರ್ಜಿಸಿ ಹೇಳಿದ: "ಇಲ್ಲ–ನಾನೆಂದಿಗೂ ಉಣ್ಣುವುದಿಲ್ಲ. ನೀನು ಎಲ್ಲಿಗೆ ಹೋಗಿದ್ದೆಯೆಂಬುದನ್ನು ಸರಿಯಾಗಿ ಹೇಳದೆಹೋದರೆ ನೀನು ಮುಟ್ಟಿದ ನೀರನ್ನೂ ಕುಡಿಯುವುದಿಲ್ಲ."

ವಿರಾಜಳು ವ್ಯಗ್ರಳಾದಳು—ಕರಿ ಸರ್ಪ ಕಚ್ಚಿದ ಮನುಷ್ಯನಿಗಿಂತಲೂ ಹೆಚ್ಚು ವ್ಯಗ್ರಳಾದಳು. ಅವಳು ನಡುಗುತ್ತಲೇ ಬಾಗಿಲ ಬಳಿ ನೆಲದ ಮೇಲೆ

ಕುಸಿದು ಕುಳಿತು–" ನಾನು ಮುಟ್ಟಿದ ನೀರನ್ನೂ ಕುಡಿಯುವುದಿಲ್ಲವೆ ? " ಎಂದು ಕೇಳಿದಳು.

" ಇಲ್ಲ, ಎಂದೆಂದಿಗೂ ಇಲ್ಲ. "

" ಏಕೆ ಕುಡಿಯುವುದಿಲ್ಲ ? "

" ಗೊತ್ತಿದ್ದೂ ಕೇಳುವೆಯಾ ? "–ನೀಲಾಂಬರ ಚೀರಿದ.

ವಿರಾಜಳು ಹೆಚ್ಚು ಮಾತನಾಡದೆ ಸ್ಥಿರದೃಷ್ಟಿಯಿಂದ ಗಂಡನನ್ನೇ ನಿಟ್ಟಿಸಿದಳು. ಬಳಿಕ ಮೆಲ್ಲಮೆಲ್ಲನೆ–" ನನಗೆ ಎಲ್ಲವೂ ಅರ್ಥವಾಯಿತು. ಇನ್ನು ನಿಮ್ಮನ್ನು ಕೇಳುವುದಿಲ್ಲ. ನಿಮ್ಮ ಪ್ರಶ್ನೆಗೂ ಈಗ ಉತ್ತರ ಕೊಡುವುದಿಲ್ಲ. ಕಾರಣವಿಷ್ಟೆ: ನಾಳೆ ನಿಮ್ಮ ಮಂಕು ಇಳಿದಾಗ ಎಲ್ಲವೂ ತಾನೇ ತಿಳಿಯುವುದು. ಈಗ ನಿಮಗೆ ಮೈಮೇಲೆ ಪ್ರಜ್ಞೆಯಿಲ್ಲ " ಎಂದಳು.

ಮಾದಕ ಪದಾರ್ಥ ಸೇವಿಸುವವನು 'ಬುದ್ಧಿ ಭ್ರಷ್ಟ'ನೆಂಬ ವಿಶೇಷಣವೊಂದರ ಹೊರತಾಗಿ ಎಂಥ ಮಾತುಗಳನ್ನೂ ಸಹಿಸುತ್ತಾನೆ. ಆದುದರಿಂದ ಬುದ್ಧಿಭ್ರಷ್ಟವಾಗಿದೆಯೆಂದು ನೀಲಾಂಬರನಿಗೆ ವಿರಾಜಳು ಹೇಳಿದಾಗ ಅವನ ಕೋಪಕ್ಕೆ ಮೇರೆಯೇ ಉಳಿಯಲಿಲ್ಲ. ಅವನು ಒಗರುದನಿಯಿಂದ–" ನಾನು ಗಾಂಜಾ ಸೇದಿದ್ದೇನೆಂದು ನೀನು ಹೇಳುವೆಯಲ್ಲವೆ? ಆದರೆ ನನ್ನ ಬುದ್ಧಿ ಹಿಡಿತದಲ್ಲಿಲ್ಲವೆಂದು ಹೇಳಲು ನಾನು ಗಾಂಜಾ ಸೇದುತ್ತಿರುವುದು ಇಂದೇ ಹೊಸದಾಗಿ ಅಲ್ಲ ! ಭ್ರಮೆಯಾದದ್ದು ನಿನಗೆ. ನಿನ್ನ ಬುದ್ಧಿಯೇ ಭ್ರಷ್ಟವಾಗಿದೆ " ಎಂದು ಅರ್ಭಟಿಸಿದ.

ವಿರಾಜಳು ಗಂಡನ ಮುಖವನ್ನು ನಿಟ್ಟಿಸುತ್ತಲಿದ್ದಳು.

ಮತ್ತೆ ನೀಲಾಂಬರನೇ ಕಿರಿಚಿದ–" ನೀನು ಯಾರ ಕಣ್ಣಿಗೆ ಮಣ್ಣುತೂರಬೇಕೆಂದಿರುವೆ ವಿರಾಜ್ ? ನನ್ನ ಕಣ್ಣಿಗೊ ? ನಾನು ಮಹಾ ಮೂರ್ಖ. ಆದುದರಿಂದಲೇ ಅಂದು ಪೀತಾಂಬರನ ಯಾವ ಮಾತನ್ನೂ ನಂಬಲಿಲ್ಲ. ಅವನು ಎಷ್ಟೆಂದರೂ ನನ್ನ ಒಡಹುಟ್ಟಿದ ತಮ್ಮ. ಅಣ್ಣನನ್ನು ಕುರಿತ ತನ್ನ ಕರ್ತವ್ಯವನ್ನು ತಾನು ಮಾಡಿದ. ಅವನ ಮಾತು ನಿಜವಲ್ಲವೆನ್ನುವುದಾದರೆ–ನೀನೆಲ್ಲಿ ಹೋಗಿದ್ದೆಯೆಂಬುದನ್ನು ಸರಿಯಾಗಿ ಹೇಳುತ್ತಿಲ್ಲವೇಕೆ ? ನೀನು ಸುಳ್ಳನ್ನೇಕೆ ಆಡುತ್ತಿರುವೆ ? ನಿಜ ಹೇಳು–ನೀನು ಘಟ್ಟದ ಬಳಿಗೆ ಹೋಗಿದ್ದೆಯಾ ? "

ಈಗ ವಿರಾಜಳ ಎರಡೂ ಕಣ್ಣುಗಳಲ್ಲಿ ಹುಚ್ಚುಕಳೆ ಮಿಂಚತೊಡಗಿತು.

ಆದರೂ ಅವಳು ತನ್ನ ದನಿಯನ್ನು ತಗ್ಗಿಸಿ–“ ನಾನು ಸುಳ್ಳು ಹೇಳುವ ಕಾರಣ ವಿಷ್ಟೆ: ನಿಜಸಂಗತಿ ನಿಮ್ಮ ಕಿವಿಗೆ ಬಿದ್ದರೆ, ನಿಮ್ಮ ಮನಸ್ಸಿಗೆ ನಾಚಿಕೆ ಎನಿಸು ವುದು; ಮತ್ತು ಅದರಿಂದ ನೀವು ಊಟವನ್ನೇ ಬಿಡುವಿರಿ. ಆದರೆ ನನ್ನ ಈ ನಿವೇದನೆ ವ್ಯರ್ಥವೆಂದೇ ತೋರುತ್ತಿದೆ. ನೀವು ನಾಚಿಕೆ ಸಂಕೋಚಗಳೆಲ್ಲ ವನ್ನೂ ತೊರೆದಿದ್ದೀರಿ. ಜೊತೆಗೆ ಮನುಷ್ಯತ್ವವೂ ನಷ್ಟವಾಗಿದೆ. ನೀವೂ ಸುಳ್ಳು ಹೇಳಲಿಲ್ಲವೆ ? ನೀವು ನನ್ನೊಡನೆ ನಡೆದುಕೊಂಡಂತೆ ನಡೆಯಲು ಪಶು ವಿಗೂ ನಾಚಿಕೆಯಾದೀತು. ಆದರೆ ನಿಮಗೆ ಅಂಥದೇನೂ ಆಗಲಿಲ್ಲ. ಸಾಧು ಪುರುಷರಲ್ಲವೆ ನೀವು ! ಮನೆಯಲ್ಲಿ ಜ್ವರಗ್ರಸ್ತಳಾದ ಹೆಂಡತಿಯನ್ನು ಬಿಟ್ಟು ಚಿಲುಮೆಸೇದಲು ಯಾವ ಶಿಷ್ಯನ ಬಳಿಗೆ ಹೋಗಿದ್ದಿರಿ ? – ತುಸು ಹೇಳಿ ನೋಡೋಣ ! ” ಎಂದು ಕೇಳಿದಳು.

ನೀಲಾಂಬರನಿಗೆ ತಾಳ್ಮೆ ಉಳಿಯಲಿಲ್ಲ. ಅವನು–‘ ಹೇಳುತ್ತೇನೆ’ ಎಂದ ವನೆ: ಕೈಯಲ್ಲಿದ್ದ ಬರಿದಾದ ಎಲೆಯಡಿಕೆ ಡಬ್ಬವನ್ನು ವಿರಾಜಳಿಗೆ ಗುರಿಯಿಟ್ಟು ಬೀಸಿ ಒಗೆದ. ಡಬ್ಬ ತಕ್ಕಷ್ಟು ದೊಡ್ಡದಿತ್ತು. ಅದು ಅವಳ ಹಣೆಗೆ ತಾಕಿ ಝಣ್ ಝಣ್ ಎಂದು ಬಾಯಿ ತೆರೆದು ಬಿದ್ದಿತು. ನೋಡು ನೋಡುವಷ್ಟರಲ್ಲಿ ಕಣ್ಣಿನ ಬದಿಯಿಂದ ತುಟಿಯ ವರೆಗೂ ರಕ್ತವು ಹರಿದು ಬಂದು ಅವಳ ಮುಖ ವೆಲ್ಲವೂ ರಕ್ತಮಯವಾಯಿತು. ಎಡಗೈಯಿಂದ ಹಣೆ ಒತ್ತಿ ಹಿಡಿದುಕೊಂಡು– ‘ ಅಯ್ಯೊ, ನನ್ನನ್ನು ಕೊಂದಿರಿ ’ ಎಂದು ಚೀರಿದಳು ಅವಳು.

ನೀಲಾಂಬರನ ತುಟಿ ಅದುರತೊಡಗಿದವು. “ ಇಲ್ಲ, ನಾನು ನಿನ್ನನ್ನು ಕೊಂದಿಲ್ಲ. ಇರಲಿ, ಈ ನಿನ್ನ ಮುಖವನ್ನು ಇನ್ನು ನನಗೆ ತೋರಿಸಬೇಡ. ತೊಲಗಾಚೆ ”–ಎಂದು ಗರ್ಜಿಸಿದ ಅವನು.

ವಿರಾಜಳು ಎದ್ದು ನಿಂತಳು. ‘ ಆಗಲಿ, ತೊಲಗುತ್ತೇನೆ ’ ಎಂದು ಒಂದು ಹೆಜ್ಜೆ ಮುಂದೆ ಹೋದವಳು ಒಮ್ಮೆಲೇ ಹಿಂದಿರುಗಿ ನಿಂತಲ್ಲಿಂದಲೇ ಹೇಳಿದಳು: “ ತೊಲಗಿದೆ. ಆದರೆ ನಾಳೆ ನಿಮ್ಮ ಬುದ್ಧಿ ಸ್ತಿಮಿತಕ್ಕೆ ಬಂದಾಗ ಇದನ್ನು ಸಹಿಸಿ ಕೊಳ್ಳಬಲ್ಲಿರಾ ? ಜ್ವರಪೀಡಿತಳಾದ ನನ್ನನ್ನು ಹೊಡೆದಿರಿ, ಮನೆಯಿಂದ ಹೊಡೆ ದೋಡಿಸಿದಿರಿ. ಈ ಮೂರು ದಿನಗಳಿಂದ ನಾನು ಏನನ್ನೂ ತಿಂದಿರಲಿಲ್ಲ. ಆದರೂ ಇಂಥ ಕಗ್ಗತ್ತಲಲ್ಲೇ ನಿಮಗಾಗಿ ಭಿಕ್ಷೆ ಬೇಡಿ ತಂದೆ. ಹೀಗಿದ್ದೂ ನೀವು ನನ್ನ ಹೆಸರಿಗೆ ಕಲಂಕ ಹಚ್ಚುತಿದ್ದೀರಿ. ಹೇಳಿ– ಮುಂದೆ ನಾನಿಲ್ಲದಾಗ ನನ್ನ ವಿರಹವನ್ನು ಸಹಿಸಿಕೊಳ್ಳಬಲ್ಲಿರಾ ? ಈ ಲಜ್ಜೆಗೇಡಿಯನ್ನು ಮರೆತು

ಒಬ್ಬರೇ ಇರಬಲ್ಲಿರಾ ? "

ವಿರಾಜಳ ಹಣೆಯಿಂದ ರಕ್ತ ಸೋರುತಿದ್ದುದನ್ನು ನೋಡಿದೊಡನೆಯೇ ನೀಲಾಂಬರನ ಅಮಲು ಓಡಿಹೋಯಿತು ಅವನು ಹುಚ್ಚನಂತೆ ಅವಳನ್ನೇ ದಿಟ್ಟಿಸಿ ನೋಡತೊಡಗಿದ.

ಆ ಮೇಲೆ ಸೆರಗಿನಿಂದ ರಕ್ತವನ್ನು ಒರೆಸಿಕೊಳ್ಳುತ್ತ ವಿರಾಜಳು–" ಈಗ ಒಂದು ವರುಷದಿಂದಲೇ ಹೊರಡುವ ಯೋಚನೆ ಬಂದಿತ್ತು ನನಗೆ. ಆದರೆ ನಿಮ್ಮನ್ನು ಬಿಟ್ಟುಹೋಗಲು ಸಾಧ್ಯವಾಗಲಿಲ್ಲ. ಸ್ವಲ್ಪ ಕಣ್ಣೆತ್ತಿ ನೋಡಿದರೆ ನನ್ನ ಮೈಯಲ್ಲಿ ಏನೂ ಶಕ್ತಿ ಉಳಿದಿಲ್ಲವೆಂದು ನಿಮಗೆ ಸ್ಪಷ್ಟವಾಗಿ ತಿಳಿಯು ವುದು. ನನ್ನ ಕಣ್ಣೂ ಮಂದವಾಗಿವೆ. ಒಂದು ಹೆಜ್ಜೆ ನಡೆಯಲೂ ಶಕ್ತಿಯಿಲ್ಲ. ಆದರೂ ನಾನು ನಿಮ್ಮನ್ನು ಬಿಟ್ಟುಹೋಗುತ್ತಿದ್ದಿಲ್ಲ. ಆದರೆ ಪತಿಯಾಗಿ ನೀವೇ ನನ್ನ ಮೇಲೆ ಕಲಂಕ ಹೊರಿಸಿದಿರೆಂದ ಬಳಿಕ ಇನ್ನು ನಿಮಗೆ ನನ್ನ ಮುಖ ತೋರಲಾರೆ. ಈ ಪ್ರಪಂಚದಲ್ಲಿ ನನಗಿದ್ದ ಅನೇಕ ಆಸೆಗಳಲ್ಲಿ, ನನಗೆ ನಿಮ್ಮ ಚರಣಗಳ ಹತ್ತಿರವೇ ಸಾವು ಬರಲೆಂಬ ಆಸೆ ಎಲ್ಲಕ್ಕೂ ದೊಡ್ಡದು. ಆ ಆಸೆ ಯನ್ನು ತೊರೆದುಬಿಡಲು ನಾನೆಂದಿಗೂ ಸಿದ್ಧಳಿದ್ದಿಲ್ಲ. ಆದರೆ ಇಂದು ನಾನು ಅದಕ್ಕೂ ತಿಲಾಂಜಲಿಯನ್ನಿತ್ತಿದ್ದೇನೆ" ಎಂದು ಹೇಳಿ ತೆರೆದ ಬಾಗಿಲಿಂದ ಹೊರಬಿದ್ದು ಗಾಢಕತ್ತಲು ಕವಿದ ತೋಟದಲ್ಲಿ ಮರೆಯಾದಳು.

ನೀಲಾಂಬರನಿಗೆ ಏನೋ ಹೇಳಬೇಕೆಂದೆನಿಸಿತು. ಆದರೆ ನಾಲಗೆಯೇ ಏಳಲಿಲ್ಲ. ತಾನು ಅವಳ ಹಿಂದೆಯೇ ಹೋಗಲಾ ಎನಿಸಿತು ಅವನಿಗೆ. ಆದರೆ ಎದ್ದು ನಿಲ್ಲಲೂ ಆಗಲಿಲ್ಲ. ಯಾವ ಮಂತ್ರಶಕ್ತಿಯ ಬಲದಿಂದಲೋ ಏನೋ, ಅವನನ್ನು ಕಲ್ಲುಮೂರ್ತಿಯನ್ನಾಗಿ ಮಾಡಿ ವಿರಾಜಳು ಅದೃಶ್ಯಳಾಗಿದ್ದಳು !

ಮಳೆಗಾಲದ ಅಂಥ ಭಯಾನಕ ರಾತ್ರಿಯಲ್ಲಿ ಆ ಸರಸ್ವತೀ ನದಿಯ ಕಡೆಗೆ ಒಮ್ಮೆ ದೃಷ್ಟಿ ಎತ್ತಿ ನೋಡಿದರೂ ಸಾಕು, ಎದೆಯಲ್ಲಿ ಭಯಸಂಚಾರ ವಾಗದೆ ಇರುತ್ತಿರಲಿಲ್ಲ. ಇಂದಿನ ಸರಸ್ವತಿ, ಬತ್ತಿ ಮೆಲ್ಲನೆ ಹರಿಯು ತ್ತಿರುವ ವೈಶಾಖ ಮಾಸದ ಸರಸ್ವತಿ ನದಿಯಲ್ಲ; ಸಂತತ ಧಾರೆಯಿಂದ ಎರಡೂ ದಡಗಳನ್ನು ತುಂಬಿ ಸೂಸಿ ಪ್ರಚಂಡ ವೇಗದಿಂದ ಹರಿವ ಶ್ರಾವಣ ಮಾಸದ ಪ್ರಚಂಡ ಸರಸ್ವತೀ ನದಿ. ವಸಂತ ಋತುವಿನ ಒಂದು ಸುಪ್ರಭಾತದಲ್ಲಿ ನೀಲಾಂಬರ ತನ್ನ ತಂಗಿಯೊಡನೆ ಕಪ್ಪು ಕಲ್ಲಿನ ಮೇಲೆ ಕುಳಿತು ಸ್ನೇಹಸುಖ ಅನುಭವಿಸುತ್ತಿದ್ದ. ಇಂದು ಈ ಅಂಧಕಾರಮಯ ರಾತ್ರಿಯಲ್ಲಿ ಎಂಥ ಹೃದಯ

ಹೊತ್ತುಕೊಂಡೋ—ದೇವರೇ ಬಲ್ಲ ! ವಿರಾಜಳು ಅದೇ ಕಲ್ಲಿನ ಮೇಲೆ ನಡು ಗುತ್ತ ನಿಂತಿದ್ದಳು. ಕೆಳಗಡೆ ಗಭೀರ ಜಲರಾಶಿ ಪ್ರಾಕಾರಕ್ಕೆ ಅಪ್ಪಳಿಸುತ್ತ ಮಡುವುಗಳನ್ನು ಸೃಜಿಸುತ್ತ ವೇಗದಿಂದ ಓಡುತ್ತಿತ್ತು. ವಿರಾಜಳು ಅದರ ಕಡೆಗೆ ನೋಡಿ ಒಂದು ಸಲ ತಲೆ ಕೆಳಗೆ ಮಾಡಿದಳು. ಬಳಿಕ ಎದುರುಗಡೆ ನಿಟ್ಟಿಸಿ ನೋಡುತ್ತ ನಿಂತಳು. ಅವಳ ಕಾಲಡಿಯಲ್ಲಿ ಕರಿಶಿಲೆ, ತಲೆಯ ಮೇಲೆ ಕಾರ್ಮೋಡ ಕವಿದ ಕರಿಯ ಆಗಸ. ಎದುರುಗಡೆ ಆಳವಾದ ನೀರಿನ ಅಪಾರ ರಾಶಿ. ನಾಲ್ಕು ದಿಕ್ಕಿನಲ್ಲಿಯೂ ನೀರವತೆ ಮುತ್ತಿದ ವಿಶಾಲವಾದ ನಿಬಿಡ ಕರಿ ಕಾಡುಗಳು. ಇವುಗಳ ಜೊತೆಗೆ, ಇವೆಲ್ಲವುಗಳಿಗಿಂತ ಹೆಚ್ಚು ಕರಿದಾದ ಅವಳ ಮನದಲ್ಲಿ ಜಾಗ್ರತವಾದ ಆತ್ಮಹತ್ಯೆಯ ಪ್ರವೃತ್ತಿ. ಅವಳು ಅದೇ ಕಲ್ಲಿನ ಮೇಲೆ ಕುಳಿತು ಸೀರೆಯಿಂದ ತನ್ನ ಕೈಕಾಲುಗಳನ್ನು ಬಿಗಿಯಾಗಿ ಕಟ್ಟಿ ಕೊಳ್ಳತೊಡಗಿದಳು.

## ೧೨

ಇನ್ನೂ ನಸುಕು ನಸುಕು. ಆಕಾಶವು ಪೂರ್ಣವಾಗಿ ಮೋಡಗಳಿಂದ ಕವಿ ದಿದ್ದಿತು. ಜಿಟಿ ಜಿಟಿಯೆಂದು ಮಳೆಯು ಬೀಳುತ್ತಿತ್ತು. ತೆರೆದ ಬಾಗಿಲಿನ ಹೊಸ್ತಿಲಿಗೆ ನೀಲಾಂಬರ ತಲೆಯಾನಿಸಿ ಮಲಗಿ ಎಷ್ಟೋ ಹೊತ್ತಾಗಿತ್ತು. ಇನ್ನೂ ಆತನ ನಿದ್ದೆ ಮುಗಿದಿರಲಿಲ್ಲ. ಅಷ್ಟರಲ್ಲಿ— 'ಏನು ನಡೆದಿದೆ ವಿರಾಜಮ್ಮ?' ಎಂದು ಒಮ್ಮೆಲೇ ಯಾರೋ ಕೂಗಿದರು.

ನೀಲಾಂಬರ ಗಡಿಬಿಡಿಸಿ ಎದ್ದುಬಿಟ್ಟ. ಮಳೆಗಾಲದ ಕಾರ್ಮುಗಿಲಿನ ಒಂದು ನಸುಕಿನಲ್ಲಿ ರಾಧೆಯೂ ಕೃಷ್ಣನ ಹೆಸರು ಕೇಳಿದಾಗ ವ್ಯಾಕುಲಳಾಗಿ ಹೀಗೆಯೇ ಎದ್ದು ಕುಳಿತಿರಬೇಕು. ಕಣ್ಣುಗಳನ್ನು ತಿಕ್ಕುತ್ತ ನೀಲಾಂಬರ ಹೊರಗೆ ಬಂದ. ಬಾಗಿಲು ಬಳಿ ತುಳಸಿ ನಿಂತು ಕೂಗುತ್ತಿದ್ದಳು. ವಿರಾಜಳನ್ನು ಹುಡುಕು ವುದಕ್ಕಾಗಿ ನೀಲಾಂಬರ ರಾತ್ರಿಯಲ್ಲೆಲ್ಲಾ ಅಲೆದ. ಹತ್ತಿರದ ಎಲ್ಲ ತೋಟ ಗಳಲ್ಲಿಯೂ ಹುಡುಕಿದ. ಪ್ರತಿಯೊಂದು ಗಿಡದ ಬುಡಕ್ಕೂ ಹೋಗಿ ಅರಸಿದ. ಕೊನೆಗೆ ಅವಳ ಸುಳಿವೇ ಸಿಗದ್ದರಿಂದ ಬೇಸತ್ತು ಮನೆಗೆ ಬಂದು ಹೊಸ್ತಿಲಿಗೆ ತಲೆಯಾನಿಸಿ ಮಲಗಿದ್ದ. ಅವನು ಮರಳಿ ಬಂದು ಒಂದು ಗಂಟೆಯಾಗಿರ

ಬಹುದು. ಆಗಲೇ ಅವನಿಗೆ ಗಾಢ ನಿದ್ದೆಹತ್ತಿತ್ತು.

"ಅಮ್ಮಾವರು ಎಲ್ಲಿದ್ದಾರೆ ಧಣೀ"—ಕೇಳಿದಳು ತುಳಸಿ.

ಮಂಕುಕವಿದವನಂತಾಗಿ ತುಳಸಿಯ ಕಡೆಗೆ ನೋಡುತ್ತ— "ನೀನಾರನ್ನು ಕೂಗುತ್ತಿರುವೆ?" ಎಂದ ನೀಲಾಂಬರ.

"ಅಮ್ಮನವರನ್ನೇ ಕೂಗುತ್ತಿದ್ದೇನೆ ಧಣೀ! ನಿನ್ನೆ ಮೂರು ಗಂಟೆ ರಾತ್ರಿಯ ಆ ಕಗ್ಗತ್ತಲಲ್ಲೇ ನನ್ನ ಮನೆಗೆ ಬಂದಿದ್ದರು. 'ಮನೆಯಲ್ಲಿ ಏನೂ ಇಲ್ಲ, ಸ್ವಲ್ಪ ಅಕ್ಕಿ ಕೊಡು' ಎಂದು ಸ್ವಲ್ಪ ಕದಕ್ಕಿಯನ್ನು ನನ್ನಿಂದ ತಂದರು. ಇನ್ನೂ ಬೆಳಗಾಗುವಷ್ಟರಲ್ಲೇ ನಿಮ್ಮ ಮನೆ ಬಾಗಿಲು ತೆರೆದುದನ್ನು ಕಂಡು, ನಿನ್ನೆ ತಂದ ಅಕ್ಕಿಯಿಂದ ಕೆಲಸವಾಯಿತೋ ಹೇಗೆ ಎಂದು ಕೇಳೋಣವೆಂದು ಕೊಂಡೆ."

ನೀಲಾಂಬರನಿಗೀಗ ಎಲ್ಲವೂ ಸ್ಪಷ್ಟವಾಗಿ ತಿಳಿಯಿತು. ಆತನಿಗೆ ಮಾತ ನಾಡಲು ಬಾಯೇ ಬರಲಿಲ್ಲ.

ತುಳಸಿ ಪುನಃ—"ಇಷ್ಟು ನಸುಕಿನಲ್ಲಿ ಬಾಗಿಲು ಯಾರು ತೆರೆದಿರಬಹುದು? ಅಮ್ಮನವರು ಘಟ್ಟದೆಡೆ ಹೋಗಿರಬಹುದೆಂದು ತೋರುತ್ತದೆ" ಎಂದು ಹೊರಟುಹೋದಳು. ನೀಲಾಂಬರ ಪುನಃ ವಿರಾಜಳನ್ನು ಅರಸುತ್ತ ಹೊರಟ. ನದಿಯ ದಂಡೆಯ ಮೇಲಿನ ಗುಹೆ, ಪೊದೆಯೆಲ್ಲವನ್ನೂ ಹುಡುಕಿದ. ಎಲ್ಲಿಯೂ ಅವಳ ಸುಳಿವಿಲ್ಲ. ಊಟ ಉಡಿಗೆ ಇರಲಿ, ನೀಲಾಂಬರ ಬೆಳಗಿನಿಂದ ಈ ವರೆಗೆ ಸ್ನಾನವನ್ನೂ ಮಾಡಿರಲಿಲ್ಲ. ಹೀಗೆ ಅಲೆದಲೆದು ದಣಿದು ಒಂದು ಕಡೆ ಸ್ವಲ್ಪ ತಂಗಿದ. ಆಗ ಮನಸ್ಸಿನಲ್ಲೇ—"ಇದೆಂಥ ಹುಚ್ಚು ಕೆಲಸ ನನ್ನದು? ಬೆಳಗಿನಿಂದ ಈ ವರೆಗೆ ನಾನು ಬಾಯಲ್ಲಿ ಏನೂ ಹಾಕಿಕೊಂಡಿಲ್ಲ. ಇದರ ಕಡೆಗೆ ಅವಳ ಲಕ್ಷ್ಯವೇ ಇರಲಿಕ್ಕಿಲ್ಲವೆ? ಇಂಥ ಸ್ಥಿತಿಯಲ್ಲಿ, ಯಾವ ಕಾರಣದಿಂದಲೇ ಆಗಲಿ, ಅವಳು ಒಂದು ಕ್ಷಣವಾದರೂ ಸುಮ್ಮನೆ ಇರಬಹುದೆ? ವೃಥಾ ಅವಳನ್ನು ಬೆಳಗಿನಿಂದ ಹುಡುಕುವುದರಲ್ಲೇ ಅಲೆಯುತಿದ್ದೇನಲ್ಲ!" ಎಂದುಕೊಂಡ.

ನೀಲಾಂಬರನ ಮನದಲ್ಲಿ ಈ ಯೋಚನೆ ಮೂಡಿದ್ದೇ ತಡ, ವಿರಾಜಳು ಮನೆಗೆ ಮರಳಿ ಬಂದಿದ್ದಾಳೆಂದು ಅವನಿಗೆ ಖಚಿತವಾಯಿತು. ಮನೆಯಲ್ಲಿ ಅವಳು ಮೌನಳಾಗಿದ್ದಾಳೆಂದೂ, ಕುತೂಹಲದಿಂದ ತನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದಾಳೆಂದೂ ಅವನ ಮಾನಸ ನೇತ್ರಗಳಿಗೆ ಸ್ಪಷ್ಟವಾಗಿ ತೋರ ತೊಡಗಿತು. ಅದರಿಂದ ಅವನ ದುಶ್ಚಿಂತೆಯೆಲ್ಲವೂ ಕರಗತೊಡಗಿತು. ಅವನು

ತಟ್ಟನೆ ಮನೆಯ ದಾರಿ ಹಿಡಿದ. ಹಾದಿಯಲ್ಲಿಯ ಹೊಲಗದ್ದೆ, ಹಳ್ಳ, ಮಡುವು ಗಳೆಲ್ಲವನ್ನೂ ಒಂದೊಂದೇ ನೆಗೆತಕ್ಕೆ ಹಾರಿ ಗಾಳಿವೇಗದಿಂದ ಮನೆಗೆ ಬಂದು ತಲ್ಪಿದ.

ಆಗ ಬಹುಶಃ ಹಗಲು ಮುಗಿಯಬಂದಿತ್ತು. ಪಶ್ಚಿಮಾಕಾಶದಲ್ಲಿ ಸೂರ್ಯ ನಾರಾಯಣನು ಕ್ಷಣ ಹೊತ್ತು ಮೇಘಮಾಲಿಕೆಯಿಂದ ತನ್ನ ರಕ್ತಮುಖವನ್ನು ಅದೇ ಆಗ ಹೊರಗೆ ಚಾಚಿದ್ದ. ಅದೇ ಹೊತ್ತಿಗೆ ನೀಲಾಂಬರ ಮನೆಯನ್ನು ಸೇರಿದ. ಮೊದಲು ಅವನು ನೇರವಾಗಿ ಅಡುಗೆ ಮನೆಯನ್ನೇ ಹೊಕ್ಕ. ಆಗಲೂ ಊಟದ ಮಣೆ ಹಾಗೆಯೇ ಇತ್ತು. ಮುನ್ನಾ ರಾತ್ರಿ ವಿರಾಜಳು ಮಾಡಿದ ಅಡುಗೆ ಒಣಗಿ ಹಾಗೆಯೇ ಬಿದ್ದಿತ್ತು. ಅಡುಗೆ ಮನೆಯಲ್ಲಿ ಇಲಿ ಹಲ್ಲಿಗಳು ಅತ್ತಿತ್ತ ಸುಳಿಯುತ್ತಿದ್ದವು. ಊಟದ ತಟ್ಟೆಯಲ್ಲಿದ್ದ ಅನ್ನದ ಬಹು ಭಾಗ ಇಲಿಗಳಿಗಾಹಾರವಾಗಿತ್ತು. ನೀಲಾಂಬರ ಹಿಂದಿನ ರಾತ್ರಿ ಒಳಗೆ ಕಾಲಿಟ್ಟಿರ ಲಿಲ್ಲ. ಈಗ ಹಗಲಿನಲ್ಲಿ ನೋಡಿದಾಗ ಆ ಅನ್ನ ತುಳಸಿಯು ಕೊಟ್ಟ ಕದಕ್ಕಿಯ ಅನ್ನವೆಂದು ಅವನಿಗೆ ಮನದಟ್ಟಾಯಿತು. ವಿರಾಜಳು ಜ್ವರದಿಂದ ನಡುಗು ತ್ತಿರುವಾಗಲೇ ಕಾರಿರುಳಿನಲ್ಲಿ ಹಸಿದ ಗಂಡನಿಗಾಗಿ ಈ ಅಕ್ಕಿಯನ್ನು ಬಿಕ್ಕೆಬೇಡಿ ತಂದಿದ್ದಳು. ಈ ಅಕ್ಕಿಗಾಗಿಯೆ ಅವಳು ಪೆಟ್ಟು ತಿಂದಳು. ಈ ಅಕ್ಕಿಗಾಗಿಯೆ ಕೇಳಬಾರದಂತಹ ಕಟುನುಡಿ ಕೇಳಿದಳು. ಅದರಿಂದ ಜುಗುಪ್ಸೆಗೊಂಡು, ಮಳೆಗಾಲದ ಆ ಭಯಾನಕ ರಾತ್ರಿಯಲ್ಲಿ ಗೃಹತ್ಯಾಗ ಮಾಡಿದಳು.

ನೀಲಾಂಬರ ಅಲ್ಲಿಯೇ ಕುಸಿದುಬಿಟ್ಟ. ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಹೆಂಗಳೆಯಂತೆ ಕೂಗಿ ಕೂಗಿ ಅಳತೊಡಗಿದ. ವಿರಾಜಳು ಈ ವರೆಗೂ ಮರಳಿ ಬಂದಿರಲಿಲ್ಲ. ಆದ್ದರಿಂದ ಇನ್ನು ಅವಳು ಬರುವ ಆಸೆಯೂ ಉಳಿಯಲಿಲ್ಲ. ಹೆಂಡತಿಯ ಸ್ವಭಾವವನ್ನು ಅವನು ಚನ್ನಾಗಿ ಬಲ್ಲ. ಅವಳೆಷ್ಟು ಅಭಿಮಾನಿಯೆಂಬುದು ಅವನಿಗೆ ಗೊತ್ತಿಲ್ಲದಿಲ್ಲ. ಪ್ರಾಣ ಹೋದರೂ, ಅನ್ಯರ ಆಶ್ರಯ ಪಡೆದು ತನ್ನ ಅಪಮಾನವನ್ನು ಮಾಡಿಕೊಳ್ಳಲಾರಳೆಂದೂ ಬಲ್ಲ. ಈ ಕಾರಣದಿಂದಲೇ ಅವನ ಅಂತಃಕರಣದಲ್ಲಿ ಅಷ್ಟು ತೀವ್ರವಾದ, ಅಂತಹ ಭೀಷಣವಾದ ಕೋಲಾಹಲ ಉಂಟಾಯಿತು. ಅವನು ಬೋರಲು ಬಿದ್ದು ಕೈ ಮುಂದೆ ಚಾಚಿ– "ನಾನು ತಾಳಲಾರೆ ವಿರಾಜ್, ಬೇಗ ಮರಳಿ ಬಾ!" ಎಂದು ಒಂದೇ ಸಮನಾಗಿ ಕೂಗುತ್ತ ಅಳತೊಡಗಿದ.

ಸಂಜೆಯಾಯಿತು. ಆದರೂ ಮನೆಯಲ್ಲಿ ದೀಪ ಹಚ್ಚುವವರಾರೂ ಬರ

ಲಿಲ್ಲ. ರಾತ್ರಿಯಾದರೂ ಅಡುಗೆ ಮಾಡಲು ಯಾರೂ ಬರಲಿಲ್ಲ. ಅತ್ತು ಅತ್ತು ನೀಲಾಂಬರನ ಕಣ್ಣು ಮುಖ ಊದಿಕೊಂಡವು. ಆದರೆ ಅವನ ಕಂಬನಿಗಳನ್ನು ಒರೆಸುವವರು ಯಾರೂ ಇರಲಿಲ್ಲ. ಅವನು ಎರಡು ದಿನಗಳಿಂದ ಉಪವಾಸ ವಿದ್ದ. ಒಂದೇ ಒಂದು ಅಗಳು ಅನ್ನವೂ ಅವನ ಹೊಟ್ಟೆಗೆ ಹೋಗಿರಲಿಲ್ಲ. ಆದರೂ ಅವನನ್ನು ಊಟಕ್ಕೆ ಯಾರೂ ಕರೆಯಲಿಲ್ಲ. ಹೊರಗೆ ಮಳೆ ಧಾರೆ ಗಟ್ಟಿ ಸುರಿಯತೊಡಗಿತ್ತು. ಮಿಂಚು ಆ ರಾತ್ರಿಯ ಗಾಢ ಅಂಧಕಾರವನ್ನು ಭೇದಿಸುತ್ತ, ಅವನ ಮುಚ್ಚಿದ ಕಣ್ಣುಗಳಿಗೂ ಮಬ್ಬು ಉಂಟುಮಾಡುತ್ತ, ಅದು ತುಂಬ ಭಯಾನಕ ರಾತ್ರಿಯೆಂಬುದನ್ನು ಸೂಚಿಸುತ್ತಲಿತ್ತು. ಆದರೂ ಅವನು ಎದ್ದು ಕುಳಿತುಕೊಳ್ಳಲೂ ಇಲ್ಲ, ಕಣ್ಣು ತೆರೆಯಲೂ ಇಲ್ಲ. ಹಾಗೆಯೇ ಒರಗಿ ಬಿಕ್ಕಿ ಬಿಕ್ಕಿ ಅಳುತ್ತಲಿದ್ದ.

ಅವನು ನಿದ್ರೆಯಿಂದೆಚ್ಚತ್ತಾಗ ಬೆಳಕು ಹರಿದಿತ್ತು. ಹೊರಗೆ ಅಸ್ಪಷ್ಟ ವಾದ ಕೋಲಾಹಲ ಕೇಳಿ ಒಳಗಿನಿಂದ ಓಡುತ್ತ ಹೊರಬಂದ. ಬಾಗಿಲು ಬಳಿ ಒಂದು ಬಂಡಿ ನಿಂತಿತ್ತು. ಅವನು ವ್ಯಗ್ರವಾಗಿ ಹತ್ತಿರ ಬಂದು ನಿಂತ ಕೂಡಲೇ ಮೋಹಿನಿ ತಲೆಯ ಮೇಲೆ ಸೆರಗನ್ನೆಳೆದುಕೊಂಡು ಗಾಡಿಯಿಂದ ಕೆಳಗಿಳಿದಳು. ಪೀತಾಂಬರ ಅಣ್ಣನನ್ನು ಒಮ್ಮೆ ಸೊಟ್ಟಗಣ್ಣಿನಿಂದ ನೋಡಿ ತನ್ನ ಮನೆಗೆ ತೆರಳಿದ. ಮೋಹಿನಿ ಭಾವನ ಬಳಿ ಬಂದು ಸಾಷ್ಟಾಂಗ ನಮ ಸ್ಕಾರ ಮಾಡಿದಳು. ನೀಲಾಂಬರ ಆಶೀರ್ವಾದ ಮಾಡಬೇಕೆಂದು ಬಗೆದ. ಆದರೆ ಅವನ ಬಾಯಿಂದ ಅಸ್ಪಷ್ಟವಾದ ದನಿ ಹೊರಟಿತೇ ಹೊರತು ಆಶೀರ್ವಾದ ಹೊರಡಲಿಲ್ಲ. ಅವನು ಒಮ್ಮೆಲೇ ಘೋರೆಂದು ಅಳತೊಡಗಿದ. ಚಕಿತಳಾಗಿ ಮೋಹಿನಿ ಮೊಗವೆತ್ತುವಷ್ಟರಲ್ಲಿ ಅವನು ಎಲ್ಲಿಯೋ ಅದೃಶ್ಯನಾದ.

ಜೀವನದಲ್ಲಿ ಇಂದು ಮೊತ್ತಮೊದಲ ಸಲ ಮೋಹಿನಿ ಗಂಡನನ್ನು ಎದು ರಿಸುವ ಹೊಸ ಸಾಹಸಕ್ಕೆ ಅಣಿಯಾದಳು. ಅವಳು ಅಶ್ರುಭಾರದಿಂದ ತುಂಬಿದ ರಕ್ತನೇತ್ರಗಳನ್ನು ಮೇಲಕ್ಕೆತ್ತಿ–"ನಿಮ್ಮ ಹೃದಯ ಕಲ್ಲಿನದೇ ಹೇಗೆ ? ದುಃಖ ದುಮ್ಮಾನಗಳಿಂದ ಬೇಸತ್ತು ಅಕ್ಕ ಆತ್ಮಹತ್ಯೆ ಮಾಡಿಕೊಂಡಳು. ಆದರೂ ನಾವು ಇನ್ನೂ ಪರಕೀಯರಂತೆ ದೂರವಿರೋಣವೇ ? ನಿಮ್ಮ ಅಂತಃಕರಣಕ್ಕೆ ಅದು ಸರಿಯೆನಿಸಿದರೆ ನೀವು ಹಾಗೆ ಮಾಡಬಹುದು. ಆದರೆ ನಾನು ಇಂದಿ ನಿಂದಲೆ ಆ ಮನೆಯ ಎಲ್ಲ ಭಾರವನ್ನೂ ಹೊರದೆ ಇರಲಾರೆ" ಎಂದಳು.

ಪೀತಾಂಬರನು ವಿಸ್ಮಿತನಾಗಿ–"ಇದೆಂಥ ಮಾತು ?" ಎಂದ.

ಮೋಹಿನಿ ತುಳಸಿಯಿಂದ ಕೇಳಿ ತಿಳಿದ, ಅಲ್ಲದೆ ತಾನು ಊಹಿಸಿದ, ಅಕ್ಕನ ಎಲ್ಲ ವೃತ್ತಾಂತವನ್ನೂ ಗಂಡನಿಗೆ ಅಳುತ್ತಳುತ್ತಲೇ ತಿಳುಹಿದಳು.

ಪೀತಾಂಬರ ಎಂಥ ಮಾತನ್ನೂ ಸುಲಭವಾಗಿ ನಂಬುವ ವ್ಯಕ್ತಿಯಲ್ಲ. "ಹಾಗಾದರೆ ಅವಳ ಹೆಣ ಇನ್ನೂ ಎಲ್ಲಿಯೂ ತೇಲಿ ಬರಲಿಲ್ಲವಲ್ಲ!" ಎಂದ ಅವನು.

ಕಣ್ಣುಗಳನ್ನೊರಸಿಕೊಂಡು ಮೋಹಿನಿಯೆಂದಳು—"ಹೆಣ ತೇಲಿ ಬರಬೇಕೆಂಬುದೇನೂ ಇಲ್ಲ. ನದಿಯಲ್ಲಿ ಹಾರಿದಾಗ ಬಹುಶಃ ನೀರಿನ ಪ್ರವಾಹದ ಜೊತೆಗೇ ಹರಿದುಹೋಗಿರಲೂ ಬಹುದು. ಅಥವಾ ಸತೀಲಕ್ಷ್ಮಿಯ ಶರೀರವಾದ್ದರಿಂದ ಗಂಗಾಮಾತೆಯು ಅವಳನ್ನು ತನ್ನ ಮಡಿಲಲ್ಲಿಟ್ಟುಕೊಂಡಿರಲೂ ಬಹುದು. ಇದಲ್ಲದೆ ಅವಳ ಸಮಾಚಾರ ತಿಳಿದುಕೊಳ್ಳಲು ಯಾರು ಯತ್ನಿಸಿದ್ದಾರೆ? ಹುಡುಕಲು ಯಾರು ಹೋಗಿದ್ದಾರೆ?"

ಹೆಂಡತಿಯ ಮೊದಲಿನ ಮಾತುಗಳಲ್ಲಿ ಪೀತಾಂಬರನಿಗೆ ನಂಬಿಕೆ ಆಗದಿದ್ದರೂ ಕೊನೆಯ ಮಾತು ಸರಿ ಎನಿಸಿತು. "ಒಳ್ಳೆಯದು, ನಾನು ಅತ್ತಿಗೆಯನ್ನು ಹುಡುಕುತ್ತೇನೆ" ಎಂದು ಸ್ವಲ್ಪ ಹೊತ್ತು ಯೋಚಿಸಿ—"ಅತ್ತಿಗೆ ತನ್ನ ಮಾವನ ಮನೆಗೆ ಹೋಗಿರಲಿಕ್ಕಿಲ್ಲವೆ?" ಎಂದ.

ಮೋಹಿನಿ ತಲೆಯಲ್ಲಾಡಿಸುತ್ತ— "ಅವಳು ಎಂದಿಗೂ ಅಲ್ಲಿಗೆ ಹೋಗಲಾರಳು. ಅಕ್ಕ ತುಂಬ ಅಭಿಮಾನಿ. ಆದುದರಿಂದ ಎಲ್ಲಿಗೂ ಹೋಗಲಾರಳು ಈ ನದಿಯಲ್ಲೇ ಮುಳುಗಿದ್ದಾಳೆ" ಎಂದಳು.

"ಆಗಲಿ, ನದಿಯಲ್ಲೇ ಅವಳನ್ನು ಹುಡುಕುವಾ"— ಎಂದು ಒಣ ಮೊಗದಿಂದ ಪೀತಾಂಬರ ಹೊರಗೆ ನಡೆದ. ಅತ್ತಿಗೆಯ ಬಗೆಗೆ ಇಂದು ಅವನಿಗೆ ದುಃಖವುಂಟಾಯಿತು. ಅಂತೂ ವಿರಾಜಳನ್ನು ಹುಡುಕುವುದಕ್ಕಾಗಿ ಅವನು ಕೆಲವರನ್ನು ನೇಮಿಸಿದ. ಒಬ್ಬನನ್ನು ಅವಳ ಸೋದರ ಮಾವನ ಮನೆಗೂ ಅಟ್ಟಿದ. ಈ ರೀತಿ ಅವನು ತನ್ನ ಜೀವನದಲ್ಲಿ ಮೊದಲ ಸಲ ಪುಣ್ಯಕಾರ್ಯ ಮಾಡಿದ. ಹೆಂಡತಿಯನ್ನು ಕರೆದು— "ಯದುವಿನನ್ನು ಕರೆದು ಅಂಗಳದ ಅಡ್ಡ ತಟ್ಟೆಯನ್ನು ತೆಗೆಯಿಸಿಬಿಡು, ಮತ್ತು ನಿನಗೇನು ಬೇಕೋ ಹಾಗೆ ಮಾಡು" ಎಂದ. ಬಳಿಕ ಬೆಲ್ಲ ನೀರು ಕುಡಿದು, ಕಂಕುಳಲ್ಲಿ ಕಾಗದ ಪತ್ರಗಳನ್ನು ಸಿಕ್ಕಿಸಿ ತನ್ನ ಕೆಲಸಕ್ಕೆ ಹೋದ. ಈ ನಾಲ್ಕಾರು ದಿನಗಳಿಂದ ತನ್ನ ಕಡತ ಬಿಚ್ಚಲು ಆಗದ್ದರಿಂದ ಅವನಿಗೆ ತುಂಬ ಹಾನಿಯಾಗಿತ್ತು!

ಮನೆಗೆಲಸ ಮಾಡುತ್ತಿರುವಾಗ ಮೋಹಿನಿ– "ಅಣ್ಣನ ಮುಖವನ್ನು ನೋಡುವ ಧೈರ್ಯ ತಮಗಿಲ್ಲವೆಂದು ಇವರು ಹೇಳುತ್ತಿದ್ದಾರೆ. ಏಕೆ, ಅವರ ಮುಖಕ್ಕೆ ಏನಾಗಿದೆ ? " ಎಂದು ಯೋಚಿಸುತ್ತಿದ್ದಳು.

ನೀಲಾಂಬರ ದೇವೀಮಂದಿರದಲ್ಲಿ ನಟ್ಟ ನಡುವೆ ಕಣ್ಣು ಮುಚ್ಚಿಕೊಂಡು ಸ್ತಬ್ಧನಾಗಿ ಕುಳಿತಿದ್ದ. ಎದುರು ಗೋಡೆಯ ಮೇಲೆ ರಾಧಾಕೃಷ್ಣರ ಚಿತ್ರ ಪಟ ತೂಗುಬಿದ್ದಿತ್ತು. ಅದು ಸಜೀವವಾದ ಚಿತ್ರಪಟದ ಹಾಗಿತ್ತು. ರೈಲು ಬಂಡಿ ಇಲ್ಲದಿರುವ ಕಾಲದಲ್ಲಿ ನೀಲಾಂಬರನ ತಂದೆ ಕಾಲ್ನಡಿಗೆಯಿಂದ ವೃಂದಾ ವನಕ್ಕೆ ಹೋಗಿ ಅಲ್ಲಿಂದ ಈ ಚಿತ್ರಪಟ ತಂದಿದ್ದರು. ಅವರು ಕಡು ವೈಷ್ಣವರು. ಎಲ್ಲರೊಡನೆ ಮಾತಾಡುವಂತೆ ಅವರು ಆ ಚಿತ್ರಪಟದೊಂದಿಗೂ ಮಾತಾಡು ತ್ತಿದ್ದರು. ಈ ಬಗೆಗೆ ನೀಲಾಂಬರ ತಾಯಿಯಿಂದ ಅನೇಕ ವಿಷಯ ಕೇಳಿ ತಿಳಿ ದಿದ್ದ. ನೀಲಾಂಬರನ ತಂದೆಗೆ ಈ ಮೂರ್ತಿಗಳು ಜಡವಸ್ತುಗಳಾಗಿರಲಿಲ್ಲ. ಆ ಮೂರ್ತಿಗಳ ಮನಸ್ಸಿಗೆ ತಟ್ಟುವಂತೆ ಕೂಗಿದರೆ ರಾಧಾಕೃಷ್ಣರು ಬಂದು ತಮ್ಮೊಂದಿಗೆ ಮಾತಾಡುತ್ತಿದ್ದರೆಂದು ಅವರಿಗೆ ನಂಬಿಗೆ ಇತ್ತು. ಈ ಕಾರಣ ದಿಂದ ನೀಲಾಂಬರ ಈ ಚಿತ್ರಪಟದೊಂದಿಗೆ ಮಾತಾಡುವ ಬಯಕೆಯಿಂದ ಇದಕ್ಕೂ ಮೊದಲು ಕಣ್ಣು ಮುಚ್ಚಿ ಅನೇಕ ಸಲ ಬಹಳ ಪ್ರಯತ್ನ ಮಾಡಿದ್ದ. ಅಲ್ಲದೆ, ಎಷ್ಟೋ ಸಲ ಅಸಾಧ್ಯ ಸಾಧನೆಗಳನ್ನೂ ಮಾಡಿದ್ದ. ಆದರೆ ಅವನಿಗೆ ಯಶಸ್ಸು ಸಿಕ್ಕಿರಲಿಲ್ಲ. ಆದರೂ ಅವನು ನಿರಾಶನಾಗಲಿಲ್ಲ. ಈ ಅಪಯಶಸ್ಸಿಗೆ ತನ್ನ ಅಸಮರ್ಥತೆ ಕಾರಣವೆಂದು ಅವನಿಗೆ ತೋರಿತೇ ಹೊರತು ತನ್ನೊಂದಿಗೆ ಮಾತಾಡುವ ಶಕ್ತಿ ಆ ಚಿತ್ರಪಟಕ್ಕಿಲ್ಲವೆಂಬ ಸಂಶಯ ಅವನಿಗೆ ಕೊನೆಗೂ ಬರಲಿಲ್ಲ.

ನೀಲಾಂಬರ ಓದುಬರಹ ಬಲ್ಲವನಲ್ಲ. ಅವನು ಹೇಗೋ ಅಲ್ಪ ಅಕ್ಷರ ಜ್ಞಾನ ಮಾತ್ರ ಮಾಡಿಕೊಂಡಿದ್ದ. ಅಶುದ್ಧವಾಗಿ ಮಹಾಭಾರತ ಓದಲು ಬಲ್ಲ. ಅಲ್ಲದೆ ಹರುಕು ಮುರುಕು ಭಾಷೆಯಲ್ಲಿ ಕಾಗದ ಪತ್ರವನ್ನೂ ಬರೆಯಬಲ್ಲ. ಶಾಸ್ತ್ರ ಅಥವಾ ಧರ್ಮ ಸಂಬಂಧವ ಯಾವ ಪುಸ್ತಕವನ್ನೂ ಅವನು ಓದಿರಲಿಲ್ಲ. ಆದುದರಿಂದ ಭಗವಂತನ ವಿಷಯವಾಗಿ ಅವನು ಸ್ವತಂತ್ರ ವಿಚಾರವಿಟ್ಟು ಕೊಂಡಿದ್ದ. ಅಲ್ಲದೆ, ತನ್ನ ಈ ವಿಚಾರದಲ್ಲಿ ದೃಢ ನಂಬಿಕೆಯೂ ಇತ್ತು ಅವ ನಿಗೆ. ಪರರ ಯುಕ್ತಿಯನ್ನಾಗಲಿ, ತರ್ಕ ಪಾಂಡಿತ್ಯವನ್ನಾಗಲಿ ಅವನು ಲಕ್ಷಿಸು ವಂತಿರಲಿಲ್ಲ. ಈ ಬಗೆಗೆ ಚಿಕ್ಕಂದಿನಲ್ಲಿ ಕೆಲವು ಸಲ ಪೀತಾಂಬರನೊಂದಿಗೂ

ಹಲವು ಸಲ ವಿರಾಜಳೊಂದಿಗೂ, ವಾದವಿವಾದ ಹೊಡಿ ಕಾದಾಡಿದ್ದೂ ಉಂಟು.

ವಿರಾಜಳು ನೀಲಾಂಬರನಿಗಿಂತ ನಾಲ್ಕು ವರ್ಷ ಮಾತ್ರ ಚಿಕ್ಕವಳು. ಆದು ದರಿಂದ ಅವಳು ಅವನಿಗೆ ಅಷ್ಟು ಹೆದರುತ್ತಿರಲಿಲ್ಲ. ಒಂದು ಸಲ ನೀಲಾಂಬರ ಅವಳಿಗೆ ಏಟು ಕೊಟ್ಟಾಗ ಅವಳು ಅವನನ್ನು ಬಲವಾಗಿ ಕಚ್ಚಿದಳು. ಆ ಗಾಯ ದಿಂದ ರಕ್ತ ಬರತೊಡಗಿತು. ಆಗ ನೀಲಾಂಬರನ ತಾಯಿಯೆ ಅವರ ಜಗಳ ಬಿಡಿಸಿ– "ಛೀ ಛೀ, ಇದೇನು ವಿರಾಜ್. ಇವನು ನಿನ್ನ ಪತಿರಾಯ. ಹೀಗೆ ಅವನನ್ನು ಕಚ್ಚಕೂಡದು. ಇದು ನಿನಗೆ ತರವಲ್ಲ" ಎಂದು ಬಯ್ದಳು.

ಆಗ ವಿರಾಜಳು ಅಳುತ್ತ – "ಮೊದಲು ಅವರೇ ನನ್ನನ್ನು ಹೊಡೆದರು" ಎಂದು ದೂರಿದಳು. ಆಗ ತಾಯಿ ನೀಲಾಂಬರನನ್ನು ಕೂಗಿ ಕರೆದು– "ಇನ್ನೆಂದಿಗೂ ಅವಳ ದೇಹಕ್ಕೆ ಕೈಮಾಡುವುದಿಲ್ಲವೆಂದು ಆಣೆ ಮಾಡು" ಎಂದು ಆಜ್ಞಾಪಿಸಿದಳು. ಆಗ ವಿರಾಜಳು ಹದಿನಾಲ್ಕು ವರುಷದವಳಿರಬಹುದು. ಅವ ಳಿಗೀಗ ಮೂವತ್ತು ವರುಷ. ಮಾತೃಭಕ್ತನಾದ ನೀಲಾಂಬರ ಅಂದಿನಿಂದ ಈ ವರೆಗೂ ತಾಯಿಯ ಆಣತಿಯನ್ನು ಉಲ್ಲಂಘಿಸಿಲ್ಲ.

ಈ ಹೊತ್ತು ಕೈಕಾಲು ಮುದುಡಿಕೊಂಡು ಶಾಂತಭಾವದಿಂದ ನೀಲಾಂಬರ ಕುಳಿತಾಗ ಒಮ್ಮೆಲೇ ಹಿಂದಿನ ಮರೆತ ಸಂಗತಿಗಳೆಲ್ಲವೂ ಅವನ ಮಾನಸ ಪಟ ಲದ ಮೇಲೆ ಮೂಡಿದವು. ಮೊದಲು ಆತ ತನ್ನ ಸ್ವರ್ಗವಾಸಿಯಾದ ತಾಯಿಯ ಕ್ಷಮೆ ಬೇಡಿದ. ಬಳಿಕ ಗಡಗಡ ನಡುಗುತ್ತ – "ಹೇ ಅಂತರ್ಯಾಮಿ, ನೀನು ಎಲ್ಲವನ್ನೂ ಕಂಣಾರೆ ನೋಡುತ್ತಿರುವೆ. ವಿರಾಜಳು ಯಾವ ಅಪರಾಧವನ್ನೂ ಮಾಡಿಲ್ಲ. ಕಿಂಚಿತ್ ಪಾಪಶೇಷವೇನಾದರೂ ಇದ್ದರೆ ಅದರ ಎಲ್ಲ ಭಾರವನ್ನು ನನ್ನ ತಲೆಯ ಮೇಲೆ ಹೇರು. ಅವಳಿಗೆ ಸ್ವರ್ಗದಲ್ಲಿ ಆಶ್ರಯವನ್ನು ಕೊಡು. ಈ ಲೋಕದಲ್ಲಿ ಅವಳು ಬಹಳ ದುಃಖವನ್ನನುಭವಿಸಿದ್ದಾಳೆ. ಅಲ್ಲಿಯೂ ಅವ ಳನ್ನು ದುಃಖಕ್ಕೀಡುಮಾಡಬೇಡ" ಎಂದು ಬೇಡಿಕೊಳ್ಳತೊಡಗಿದ.

ನೀಲಾಂಬರನ ಮುಚ್ಚಿದ ಕಂಣುಗಳಿಂದ ಕಂಬನಿ ಇಳಿಯುತ್ತಿತ್ತು. ಅಷ್ಟ ರಲ್ಲಿ ಆತನ ಧ್ಯಾನ ಒಮ್ಮೆಲೇ ಭಂಗವಾಯಿತು.

"ಭಾವಯ್ಯ!"

ನೀಲಾಂಬರ ಕೌತುಕಗೊಂಡು ಕಂಣು ತೆರೆದಾಗ ಮೋಹಿನಿ ಹತ್ತಿರವೇ ಕುಳಿತುದನ್ನು ಕಂಡ. ಅವಳ ಮುಖದ ಮೇಲಿನ ಸೆರಗು ಅಲ್ಪ ಮಾತ್ರವೇ ತೆರೆದಿತ್ತು. ಅವಳು ಸ್ವಾಭಾವಿಕ ದನಿಯಿಂದ– "ಭಾವ! ನಾನು ನಿಮ್ಮ

ಮಗಳ ಸಮಾನಳು. ಒಳಗೆ ಬನ್ನಿ; ಸ್ನಾನ ಮಾಡಿ ಸ್ವಲ್ಪ ಊಟ ಮಾಡಿ. ನೀವು ಉಪವಾಸ ಇರಲು ನಾನೆಂದಿಗೂ ಒಪ್ಪಲಾರೆ" ಎಂದಳು.

ನೀಲಾಂಬರ ಮೊದಲು ಅವಾಕ್ಕಾಗಿ ಅವಳನ್ನೆ ದಿಟ್ಟಿಸತೊಡಗಿದ. ತನ್ನನ್ನು ಊಟಕ್ಕೆ ಯಾರೂ ಎಷ್ಟೋ ಯುಗಗಳಿಂದ ಕರೆದಿಲ್ಲವೆಂದು ಅವನಿಗೆನಿಸಿತ್ತು. ಅಷ್ಟರಲ್ಲಿ ಮೋಹಿನಿ ಪುನಃ- "ಭಾವ, ಅಡುಗೆ ಸಿದ್ಧವಾಗಿದೆ" ಎಂದಳು.

ಈಗ ನೀಲಾಂಬರನಿಗೆ ಪೂರ್ಣ ಪ್ರಜ್ಞೆಯುಂಟಾಯಿತು. ಆಗ ಅವನ ದೇಹ ಒಮ್ಮೆ ನಡುಗಿತು. ಅವನು ಬೋರಲು ಬಿದ್ದು ಅಳುತ್ತ- "ಇನ್ನೆಲ್ಲಿಯ ಊಟವಮ್ಮಾ!" ಎಂದ.

ಹಳ್ಳಿಯಲ್ಲಿ ಎಲ್ಲೆಡೆಗೂ ಸುದ್ದಿ ಹಬ್ಬಿತು ವಿರಾಜಳು ಮುಳುಗಿ ಆತ್ಮ ಹತ್ಯೆ ಮಾಡಿಕೊಂಡಳೆಂದು ಎಲ್ಲರೂ ನಂಬಿದರು. ಧೂರ್ತ ಪೀತಾಂಬರನೊಬ್ಬ ನಿಗೆ ಮಾತ್ರ ಈ ನಂಬುಗೆ ಇರಲಿಲ್ಲ. ಅವನು ಮನಸ್ಸಿನಲ್ಲೇ ಯೋಚಿಸ ತೊಡಗಿದ – "ಈ ನದಿ ಬಹಳ ಅಂಕುಡೊಂಕಾಗಿ ಹರಿಯುತ್ತಿದೆ. ಅಲ್ಲದೆ ನದಿಯಲ್ಲಿ ಹೆಜ್ಜೆ ಹೆಜ್ಜೆಗೆ ಗಿಡಗಂಟೆ, ಹುಲ್ಲು-ಪೊದೆ, ಹುಲುಸಾಗಿ ಬೆಳೆದು ನಿಂತಿವೆ. ಆದುದರಿಂದ ಹೆಣ ಹರಿದು ದೂರ ಹೋಗಲು ಸಾಧ್ಯವಿಲ್ಲ. ಹತ್ತಿ ರವೇ ಎಲ್ಲಿಯಾದರೂ ಸಿಕ್ಕಿಬೀಳದಿರುವುದು ಸಾಧ್ಯವೇ ಇಲ್ಲ." ಅವನು ಒಂದು ಚಿಕ್ಕ ದೋಣಿಯಲ್ಲಿ ಕುಳಿತು ನದಿಯ ದಂಡೆಗುಂಟ ಬಹು ದೂರದ ವರೆಗೂ ಹುಡುಕಿದ. ನದಿಯ ಮಧ್ಯ ಭಾಗದಲ್ಲಿಯೂ, ಅತ್ತಿತ್ತ ಹುಲುಸಾಗಿ ಬೆಳೆದ ಗಿಡಗಂಟೆಗಳಲ್ಲಿಯೂ ಲಕ್ಷ್ಯಪೂರ್ವಕವಾಗಿ ನಿರುಕಿಸಿದ. ಕೊನೆಗೆ ಮನದಲ್ಲೇ ದೃಢವಾಗಿ- "ಅತ್ತಿಗೆಗೆ ಮತ್ತೇನಾದರೂ ಆಗಿರಬಹುದು. ಆದರೆ ಈ ನದಿ ಯಲ್ಲಿ ಮಾತ್ರ ಆಕೆ ಮುಳುಗಿ ಸತ್ತಿಲ್ಲ" ಎಂದು ನಿರ್ಧರಿಸಿದ.

ಕೆಲ ದಿನಗಳ ಮೊದಲು ಪೀತಾಂಬರನ ಹೃದಯದಲ್ಲಿ ಸಂಶಯವೊಂದು ತಲೆಯೆತ್ತಿತ್ತು. ಇಂದು ಮತ್ತೆ ಅದೇ ಸಂದೇಹ ಅವನ ಹೃದಯವನ್ನು ಮಥಿಸತೊಡಗಿತು. ಆದರೆ ಅವನು ಈ ವಿಷಯವನ್ನು ಯಾರ ಎದುರೂ ಬಿಚ್ಚಲಿಲ್ಲ. ಒಂದು ಸಲ ಮೋಹಿನಿಯೆದುರು ಮಾತ್ರ ಪ್ರಸ್ತಾಪಿಸಿದ. ಆಗ ಅವಳು ನಾಲಗೆ ಕಚ್ಚಿಕೊಂಡು ಎರಡು ಹೆಜ್ಜೆ ಹಿಂದೆ ಸರಿದಳು. ಅವಳು ಅಪನಂಬಿಕೆಯ ದನಿಯಿಂದ- "ಈ ಮಾತು ಸತ್ಯವೇ ಆದರೆ ದೈವ ದೇವರು ಗಳೆಲ್ಲವೂ ಸುಳ್ಳೆನ್ನಬೇಕಾದೀತು" ಎಂದು ಗೋಡೆಯ ಮೇಲಿನ ಅನ್ನ ಪೂರ್ಣೆಯ ಚಿತ್ರವನ್ನು ನೋಡಿ-" ಅಕ್ಕ ಈ ದೇವತೆಯ ಅವತಾರ. ಈ

ವಿಷಯ ಪರರಿಗೆ ಗೊತ್ತಿರಲಿಕ್ಕಿಲ್ಲ. ಆದರೆ ನಾನು ಮಾತ್ರ ಬಲ್ಲೆ" ಎಂದವಳೇ ಹೊರಟುಹೋದಳು.

ಹೆಂಡತಿಯ ಮಾತಿನಿಂದ ಪೀತಾಂಬರನಿಗೆ ಸಂತಾಪವಾಗಲಿಲ್ಲ. ಆ ದಿನ ಅಕಸ್ಮಾತ್ತಾಗಿ ಅವನಲ್ಲಿ ಬೇರೆ ಭಾವನೆಯುಂಟಾಗಿತ್ತು.

ಮೋಹಿನಿ ಭಾವನವರೊಂದಿಗೆ ಮಾತನಾಡಲಾರಂಭಿಸಿದ್ದಳು. ಭಾವನವರ ತಟ್ಟೆಯಲ್ಲಿ ಅನ್ನ ಬಡಿಸಿ, ಮರೆಗೆ ಕುಳಿತು, ಅಕ್ಕನ ವಿಷಯವನ್ನು ಒಂದೊಂದಾಗಿ ಕೇಳಿ ಎಲ್ಲವನ್ನೂ ತಿಳಿದುಕೊಂಡಳು. ನಿಜವಾದ ಸಂಗತಿ ಅವಳಿಗೊಬ್ಬಳಿಗೇ ಗೊತ್ತು. ಆ ಸಂಗತಿಗಳಿಂದ ಆದ ಮರ್ಮಾಂತಿಕ ವ್ಯಥೆ, ನೀಲಾಂಬರನ ಅಂತಃಕರಣವನ್ನು ಅದೆಷ್ಟು ಪೀಡಿಸುತ್ತಿತ್ತೆಂಬುದು ಈ ಜಗತ್ತಿನಲ್ಲಿ ಮೋಹಿನಿಯ ಹೊರತು ಅನ್ಯರಾರಿಗೂ ಗೊತ್ತಿಲ್ಲ.

ನೀಲಾಂಬರನೆಂದ– "ಮಗು, ನಾನು ಮಹಾಪರಾಧ ಮಾಡಿರಬಹುದು; ಆದರೆ ಅದು ಬುದ್ಧಿಪೂರ್ವಕವಾದದ್ದಲ್ಲ. ಅವಳು ಮಾಯೆ ಮಮತೆಯನ್ನೆಲ್ಲವನ್ನೂ ಒದ್ದು ಹೇಗೆ ಹೊರಟುಹೋದಳೋ ದೇವರೇ ಬಲ್ಲ. ಬಹುಶಃ ಅವಳಿಗೆ ಇಲ್ಲಿಯ ದುಃಖ ದುಮ್ಮಾನವನ್ನು ಸಹಿಸುವುದಾಗಿರಲಿಕ್ಕಿಲ್ಲ."

ಮೋಹಿನಿ ಬಹುಶಃ ಎಲ್ಲವನ್ನೂ ಬಲ್ಲಳು. ತಾನು ಒಂದು ದಿನ ಹೊರಟು ಹೋಗಬೇಕೆಂದಿರುವುದನ್ನು, ಅಲ್ಲದೆ, ತನ್ನ ವಿಷಯದಲ್ಲಿ ಗಂಡನ ಅಭಿಪ್ರಾಯ ಹೇಗಿದೆಯೆಂಬುದನ್ನು ಅಕ್ಕ ಹೇಳಿದ್ದಳೆಂದೂ ನೀಲಾಂಬರನಿಗೆ ಹೇಳಲು ಅವಳು ಬಾಯಿ ತೆರೆದಿದ್ದಳು. ಆದರೆ ಅವಳಿಗೆ ಅದನ್ನು ಹೇಳುವುದಾಗಲಿಲ್ಲ.

"ನೀನು ಅಣ್ಣನೊಂದಿಗೆ ಮಾತನಾಡುವೆಯಾ?" – ಎಂದು ಪೀತಾಂಬರ ಹೆಂಡತಿಯನ್ನು ಕೇಳಿದ.

"ಹೌದು, ಅವರು ನನ್ನ ತಂದೆಯ ಸಮಾನ. ಆದ್ದರಿಂದಲೇ ಅವರೊಂದಿಗೆ ಮಾತನಾಡುತ್ತೇನೆ" ಎಂದಳು ಮೋಹಿನಿ.

"ಜನ ಕೇಳಿದರೆ ನಿಂದಿಸದೆ ಬಿಡುವುದಿಲ್ಲ" – ಎಂದ ಪೀತಾಂಬರ. ಮೋಹಿನಿ – "ಜನರಿಗೆ ಪರನಿಂದೆಯ ಹೊರತು ಬೇರೆ ಕೆಲಸವೇನಿದೆ? ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಮಾಡುವವರೇ. ನಾನೂ ನನ್ನ ಕೆಲಸ ಮಾಡುತ್ತೇನೆ. ಈ ಸಲ ಭಾವನವರನ್ನು ಹೇಗಾದರೂ ಉಳಿಸಿಕೊಳ್ಳಬಲ್ಲೆನಾದರೆ, ಜನನಿಂದೆಯನ್ನು ಸ್ವಾಗತಿಸುತ್ತೇನೆ" ಎಂದು ತನ್ನ ಕೆಲಸದಲ್ಲಿ ತೊಡಗಿಕೊಂಡಳು.

ಆ ಮೇಲೆ ಹದಿನೈದು ತಿಂಗಳು ಉರುಳಿಪವು. ಆಶ್ವೀಜ ನವರಾತ್ರಿ ಸಮೀಪಿಸಿತು. ದುರ್ಗಾ ಪೂಜೆಯ ಆನಂದ ಉತ್ಸಾಹಗಳ ಆಭಾಸವು ನೆಲ-ಜಲ, ವಾಯು-ಆಕಾಶ, ಎಲ್ಲವನ್ನೂ ವ್ಯಾಪಿಸಿತ್ತು. ಅಪರಾಹ್ನದಲ್ಲಿ ನೀಲಾಂಬರ ಕಂಬಳಿಯ ಮೇಲೆ ಸುಮ್ಮನೆ ಕುಳಿತಿದ್ದ. ಆತನ ದೇಹ ಬಹಳ ಬಡವಾಗಿತ್ತು. ಮುಖದ ಬಣ್ಣ ಹಳದಿ ಬಣ್ಣಕ್ಕೆ ತಿರುಗಿತ್ತು. ತಲೆಗೂದಲು ಉದ್ದವಾಗಿ ಬೆಳೆದು ಚಿಕ್ಕ ಜಟೆಯಾಗಿತ್ತು. ಕಣ್ಣುಗಳಲ್ಲಿ ವೈರಾಗ್ಯಭಾವವೂ ವಿಶ್ವವ್ಯಾಪಿ ಕರುಣಾಭಾವವೂ ಮೇಳಗೂಡಿದಂತಿತ್ತು. ಮಹಾಭಾರತವನ್ನು ಮುಚ್ಚುತ್ತ ವಿಧವೆಯಾದ ಮೋಹಿನಿಯನ್ನು ಸಂಬೋಧಿಸಿ– "ಮಗೂ, ಪುಟ್ಟಿ ಬಹುಶಃ ಈ ದಿನವೂ ಬರಲಿಕ್ಕಿಲ್ಲ" ಎಂದ ಅವನು.

ಮೋಹಿನಿ ಮಲಿನವಾದ ಬಟ್ಟೆ ಉಟ್ಟುಕೊಂಡಿದ್ದಳು. ಯಾವ ಒಡವೆ ಆಭರಣಗಳನ್ನೂ ತೊಟ್ಟುಕೊಂಡಿರಲಿಲ್ಲ. ಭಾವನವರಿಂದ ಸ್ವಲ್ಪ ದೂರದಲ್ಲಿ ಕುಳಿತು ಮಹಾಭಾರತವನ್ನು ಕೇಳುತ್ತಿದ್ದ ಅವಳು– "ಹಾಗೇನಿಲ್ಲ ಭಾವಯ್ಯ! ಇನ್ನೂ ಸಾಕಷ್ಟು ಸಮಯವಿದೆ. ಅವರು ಈಗ ನಡುದಾರಿಯಲ್ಲಿರಬಹುದು" ಎಂದಳು.

ಹರಿಮತಿಯ ಮಾವ ಬಹು ಸಿಡುಕಿನ ಸ್ವಭಾವದವನು. ಈಗ ಅವನ ಅವಸಾನವಾಗಿತ್ತು. ಆದುದರಿಂದ ಹರಿಮತಿ ಸರ್ವತಂತ್ರ ಸ್ವತಂತ್ರಳಾಗಿದ್ದಳು. ಅವಳು ಗಂಡನ ಜೊತೆಗೆ, ದಾಸ ದಾಸಿಯರನ್ನು ಕರೆದುಕೊಂಡು ತೌರಿಗೆ ಬರುವಳೆಂದೂ ದುರ್ಗಾಪೂಜೆ ಮುಗಿಯುವ ವರೆಗೆ ಇಲ್ಲಿಯೇ ಉಳಿಯುವಳೆಂದೂ ವರ್ತಮಾನ ಬಂದಿತ್ತು. ಅವಳ ಮದುವೆಯಾದ ನಂತರ ಈವರೆಗೆ ಇಲ್ಲಿ ಅನೇಕ ದುರ್ಘಟನೆಗಳು ನಡೆದವು. ತಾಯಿಯಂತೆ ಸ್ನೇಹವನ್ನು ಕರೆವ ಅವಳ ದೊಡ್ಡ-ತ್ತಿಗೆ ಮನೆಯಿಂದ ತೊಲಗಿದ್ದಳು. ಆರು ತಿಂಗಳ ಹಿಂದೆ ಅವಳ ಚಿಕ್ಕ ಅಣ್ಣ ಹಾವು ಕಡಿತದಿಂದ ಕಾಲವಶನಾಗಿದ್ದ. ಈ ಎಲ್ಲ ಕೆಟ್ಟ ಸುದ್ದಿಗಳು ಈ ವರೆಗೂ ಅವಳ ಕಿವಿಗೆ ಹೋಗಿರಲಿಲ್ಲ.

ನೀಲಾಂಬರ ಉಸಿರ್ಗರೆಯುತ್ತ–"ಅವಳು ಬಾರದಿದ್ದರೇ ಒಳಿತು. ಈ ಎಲ್ಲ ದುಃಖದ ಸಂಗತಿಯನ್ನು ಒಮ್ಮೆಲೇ ಅವಳು ಸಹಿಸಕೊಳ್ಳಬಹುದೆ?" ಎಂದ.

ಪ್ರಾಣಕ್ಕಿಂತಲೂ ಪ್ರಿಯಳಾದ ತನ್ನ ತಂಗಿಯ ಸವಿನೆನಪಿನಿಂದ ಅನೇಕ ದಿನಗಳ ತರುವಾಯ ಇಂದು ನೀಲಾಂಬರನ ಕಣ್ಣುಗಳಲ್ಲಿ ಕಂಬನಿ ಕದಡಿತು. ಹಾವು ಕಚ್ಚಿದ ದಿನದ ರಾತ್ರಿ ಪೀತಾಂಬರ ಅಣ್ಣನ ಎರಡೂ ಪಾದಗಳನ್ನು ಗಟ್ಟಿಯಾಗಿ ಹಿಡಿದು–"ನನಗೆ ಯಾವ ಔಷಧೋಪಚಾರವೂ ಬೇಕಾಗಿಲ್ಲಣ್ಣಾ! ನಿನ್ನ ಪಾದಧೂಳಿಯನ್ನು ನನ್ನ ತಲೆಗೆ ಸವರಿದರೆ ಸಾಕು. ಅಲ್ಲದೆ, ಅದನ್ನು ನನ್ನ ಬಾಯಿಗೂ ಕೊಂಚ ಹಾಕು. ಅದರಿಂದ ನಾನು ಬದುಕಿದರೆ ಒಳಿತೇ ಆಯಿತು. ಅಥವಾ ಇನ್ನು ಹೆಚ್ಚು ಕಾಲ ಜೀವಿಸಲು ನನಗೂ ಮನಸ್ಸಿಲ್ಲ" ಎಂದು ಸೊಪ್ಪು ಬೇರುಗಳ ಔಷಧಿಯ ಉಪಚಾರವನ್ನು ಪ್ರಬಲ ಹಟದಿಂದ ನಿರಾಕರಿಸಿ ತನ್ನ ಹಣೆ ಚಚ್ಚಿಕೊಳ್ಳತೊಡಗಿದ. ವಿಷಜ್ವಾಲೆಯಿಂದ ಮುಕ್ತಿ ಹೊಂದುವ ಆಸೆಯಿಂದ ಅವನು ಕೊನೆಯ ಗಳಿಗೆಯ ವರೆಗೂ ಅಣ್ಣನ ಪಾದಗಳನ್ನು ಬಿಡಲಿಲ್ಲ. ಈ ರೀತಿ ತಮ್ಮನ ದೇಹಾವಸಾನವಾದ್ದ ಬಳಿಕ ನೀಲಾಂಬರ ಅತ್ತು ಅತ್ತು ಸುಮ್ಮನಾದ. ಆನಂತರ ಅವನ ಕಣ್ಣುಗಳಲ್ಲಿ ಕಂಬನಿ ಮೂಡಿದ್ದು ಇಂದೇ. ಸತೀಸಾಧ್ವಿ ಮೋಹಿನಿಯೂ, ಕಾಣದಂತೆ ತನ್ನ ಕಣ್ಣುಗಳನ್ನೊರಸಿಕೊಂಡಳು. ಅವಳು ಯಾವ ಮಾತನ್ನೂ ಆಡಲಿಲ್ಲ.

ನೀಲಾಂಬರ ಮೆಲ್ಲಮೆಲ್ಲನೆ ಹೇಳತೊಡಗಿದ: "ನನಗೆ ಇಷ್ಟು ದುಃಖವಾದದ್ದು ಅದಕ್ಕಾಗಿ ಅಲ್ಲಮ್ಮಾ! ಭಗವಂತನು ನಮ್ಮ ಪೀತಾಂಬರನನ್ನು ಕರೆದುಕೊಂಡಂತೆ ವಿರಾಜಳನ್ನೂ ಕರೆದುಕೊಂಡಿದ್ದರೆ, ಇಂದು ನನಗೆ ಇವೆಲ್ಲ ಸುಖದ ದಿನಗಳಾಗುತ್ತಿದ್ದವು. ಆದರೆ ಹಾಗಾಗಲಿಲ್ಲ. ಪುಟ್ಟಿ ಈಗ ದೊಡ್ಡವಳಾಗಿದ್ದಾಳೆ. ಒಳಿತು ಕೆಡುಕು ತಿಳಿದುಕೊಳ್ಳುವ ಬುದ್ಧಿ ಈಗ ಅವಳಿಗಿದೆ. ಇಂಥ ಅವಸ್ಥೆಯಲ್ಲಿ ತಾಯಿಗೆ ಸಮಾನಳಾದ ಅತ್ತಿಗೆಯ ಕಲಂಕಿತ ಸಮಾಚಾರ ಕೇಳಿದಾಗ ಅವಳ ಮನಸ್ಸಿನ ಸ್ಥಿತಿ ಹೇಗಾದೀತು ? ಮುಂದೆ ಜನರೆದುರು ಮುಖವೆತ್ತಿ ತಿರುಗಾಡಲು ಸಾಧ್ಯವೆ ಅವಳಿಗೆ ?"

ಸುಂದರಿಗೆ ಆತ್ಮಗ್ಲಾನಿಯನ್ನು ಸಹಿಸುವುದಾಗಲಿಲ್ಲ. ಆದುದರಿಂದ ಈಗ ಎರಡು ತಿಂಗಳ ಹಿಂದೆ ನೀಲಾಂಬರನ ಬಳಿಗೆ ಬಂದು– "ಅಮ್ಮನವರು ಅಂದು ರಾತ್ರಿ ಆತ್ಮಹತ್ಯೆ ಮಾಡಿಕೊಂಡಿಲ್ಲ. ಜಮೀನುದಾರ್ ರಾಜೇಂದ್ರಬಾಬುಗಳೊಂದಿಗೆ ಓಡಿಹೋದರು" ಎಂದು ಹೇಳಿದಳು. ವಿರಾಜಳ ವಿಯೋಗದಿಂದ ನೀಲಾಂಬರ ಮೇರೆ ಮೀರಿದ ವೇದನೆಗೆ ಒಳಗಾಗಿದ್ದ. ಅದು ಸುಂದರಿಗೆ ಸಹಿಸದಂತಾಗಿ, ನಿಜಸಂಗತಿ ಅರಿತ ಮೇಲಾದರೂ ಒಡೆಯನಿಗೆ ವಿರಾಜಳ ವಿಷಯದಲ್ಲಿ

ಕೋಪ, ಜುಗುಪ್ಸೆಯುಂಟಾಗುವುದು ; ಹಾಗೂ ಅವಳಿಗಾಗಿ ಪಡುತ್ತಿದ್ದ ಅವನ ಕಳವಳ ದೂರವಾಗಬಹುದು ಎಂದು ಬಗೆದಿದ್ದಳು. ನೀಲಾಂಬರ ಮನೆಗೆ ಬಂದು ಈ ಸಮಾಚಾರವನ್ನು ಮೋಹಿನಿಗೆ ತಿಳಿಸಿದ.

ಇಂದು ನೀಲಾಂಬರ ಈ ವಿಷಯದ ಮಾತನ್ನೆತ್ತಿದಾಗ ಮೋಹಿನಿ ಕ್ಷಣ ಹೊತ್ತು ಸುಮ್ಮನಿದ್ದು—"ಪುಟ್ಟಿಗೆ ಈ ವಿಷಯ ತಿಳಿಸುವ ಅಗತ್ಯವಿಲ್ಲ" ಎಂದಳು.

"ಅವಳಿಂದ ಅದನ್ನು ಹೇಗೆ ಬಚ್ಚಿಡಬಲ್ಲೆಯಮ್ಮಾ? ದೊಡ್ಡ ಅತ್ತಿಗೆ ಎಲ್ಲಿ ಎಂದು ಕೇಳಿದಾಗ ಏನು ಹೇಳುವುದು?"

"ಎಲ್ಲರೂ ತಿಳಿದುಕೊಂಡಿದ್ದನ್ನೇ—ನದಿಯಲ್ಲಿ ಮುಳುಗಿ ಆತ್ಮಹತ್ಯೆ ಮಾಡಿಕೊಂಡಳೆಂದು—ಹೇಳುವುದು."

ನೀಲಾಂಬರ ತಲೆಯಲ್ಲಾಡಿಸುತ್ತಾ—"ಅದು ಒಳಿತಲ್ಲವಮ್ಮ. ಪಾಪವನ್ನು ಮುಚ್ಚಿಡುವುದರಿಂದ ಅದು ಇನ್ನೂ ಹೆಚ್ಚಾಗುವುದೆಂದು ನಾನು ಕೇಳಿದ್ದೇನೆ. ನಾವು ಅವಳ ರಕ್ತಸಂಬಂಧಿಕರು. ಆದುದರಿಂದ ನಾವೇ ಅವಳ ಪಾಪದ ಭಾರವನ್ನು ಹೆಚ್ಚಿಸುವುದು ಸರಿಯಲ್ಲ" ಎಂದ.

ಹೀಗೆಂದು ನೀಲಾಂಬರ ನಸು ನಕ್ಕ. ಆ ನಗೆಯೊಳಗಿನ ವ್ಯಥೆಯನ್ನು, ಕರುಣಾರ್ದ್ರಭಾವವನ್ನು ಮೋಹಿನಿ ಹೃದಯಂಗಮಮಾಡಿಕೊಂಡಳು. ಸ್ವಲ್ಪ ಹೊತ್ತಿನ ನಂತರ ಅವಳು ಸಂಕೋಚದ ಇಳಿದನಿಯಿಂದ—"ಇವೆಲ್ಲ ನಿಜಸಂಗತಿಗಳೆಂದು ಹೇಳಲು ಸಾಧ್ಯವಿಲ್ಲ ಭಾವಯ್ಯ!" ಎಂದಳು.

"ಯಾವ ಸಂಗತಿಯಮ್ಮಾ? ನಿನ್ನ ಅಕ್ಕನಿಗೆ ಸಂಬಂಧಿಸಿದ ಸಂಗತಿಯೆ?"

ಅಧೋಮುಖಿಯಾಗಿ ಕುಳಿತಿದ್ದ ಮೋಹಿನಿ ಹಾಗೆಯೇ ಕುಳಿತಳು.

ನೀಲಾಂಬರ ಪುನಃ—"ಇಲ್ಲಮ್ಮಾ! ಆ ಸಂಗತಿ ನಿಜಸಂಗತಿಯೇ. ಅದರಲ್ಲೊಂದಕ್ಕರವೂ ಸುಳ್ಳಲ್ಲ. ಅಲ್ಲದೆ ಕೋಪ ಬಂದಾಗ ಆ ಹುಚ್ಚಿಗೆ ಬುದ್ಧಿಶುದ್ಧಿ ಲೋಪವಾಗುತ್ತಿತ್ತೆಂಬುದನ್ನು ನೀನೂ ಬಲ್ಲೆ. ಚಿಕ್ಕ ಮಗುವಿದ್ದಾಗಲೂ ಹಾಗೆಯೇ ಇತ್ತು ಅವಳ ಸ್ವಭಾವ. ದೊಡ್ಡವಳಾದ ಮೇಲೆ ಕೂಡ ಅದರಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ಮೇಲಾಗಿ ನಾನು ಮಾಡಿದ ಅನ್ಯಾಯ, ಅಪಮಾನಗಳನ್ನು ಬಹುಶಃ ಭಗವಂತನಿಗೂ ಸಹಿಸಲಸಾಧ್ಯ; ಅವಳಂತೂ ಮನುಷ್ಯ ಮಾತ್ರಳು" ಎಂದು ಹೇಳಿ ಕೈಯಿಂದ ಕಂಬನಿ ಒರಸಿಕೊಳ್ಳುತ್ತಾ

ಮತ್ತೆ ಹೇಳಿದ: "ಈ ವಿಚಾರ ನೆನಪಾದಾಗ ನನ್ನ ಹೃದಯವೇ ಒಡೆದು ಹೋದಂತಾಗುವುದು. ಆ ಬಡಪ್ರಾಣಿ ಮೂರು ದಿನಗಳ ವರೆಗೆ ಏನೂ ತಿಂದಿರ ಲಿಲ್ಲ. ಜ್ವರದ ತಾಪದಿಂದಲೇ ನಡುಗುತ್ತ ನಡುಗುತ್ತ ನನಗಾಗಿ ಅಕ್ಕಿ ಬೇಡಲು ಹೋಗಿದ್ದಳು. ಆ ಅಪರಾಧಕ್ಕಾಗಿಯೆ ನಾನು....."

ನೀಲಾಂಬರನ ಗಂಟಲು ಒಮ್ಮೆಲೇ ಕಟ್ಟಿಕೊಂಡಿತು. ಪಂಚೆಯ ಚುಂಗನ್ನು ಬಾಯಿಯಲ್ಲಿ ಅದುಮಿ ಹಿಡಿದು ಹೊರಗೆ ಉಕ್ಕಲಿದ್ದ ಅಳುವನ್ನು ಹತ್ತಿಕ್ಕಿದ. ಅವನ ಮುಖವೆಲ್ಲವೂ ಉಬ್ಬಿಕೊಂಡಿತು.

ಮೋಹಿನಿ ಅಳುತ್ತಿದ್ದಳು. ಅವಳೂ ಮಾತನಾಡಲೇ ಇಲ್ಲ. ಎಷ್ಟೋ ಹೊತ್ತು ಹೀಗೆಯೇ ಕಳೆಯಿತು.

ಬಹಳ ಹೊತ್ತಿನ ಮೇಲೆ ನೀಲಾಂಬರ ಪೂರ್ವಸ್ಥಿತಿಗೆ ಬಂದ. ಅವನು ಮುಖ ಕಣ್ಣುಗಳನ್ನೊರಸಿಕೊಂಡು–"ಬಹುಶಃ ನಿನಗೆ ಎಲ್ಲ ವಿಷಯವೂ ಗೊತ್ತಿರಬೇಕು. ಆದರೂ ಒಂದು ಸಂಗತಿ ಹೇಳುತ್ತೇನೆ: ಅಂದು ರಾತ್ರಿ ಬುದ್ಧಿಹೀನಳಾಗಿ ಆ ಉನ್ಮಾದಾವಸ್ಥೆಯಲ್ಲಿ ಅವಳು ಸುಂದರಿಯ ಮನೆಗೆ ಹೇಗೆ ಹೋದಳೋ ದೇವರು ಬಲ್ಲ! ಆದರೆ ಸುಂದರಿ–ದುರ್ದೈವವೆನ್ನಬೇಕು–ಹಣದಾಸೆ ಯಿಂದ ಆ ಅರೆಹುಚ್ಚಿಯನ್ನು ಆಗಿಂದಾಗ ಜಮೀನ್‌ದಾರ್ ರಾಜೇಂದ್ರನ ನಾವೆಯನ್ನು ಹತ್ತಿಸಿ ಬಂದಳು" ಎಂದ.

ನೀಲಾಂಬರನ ಮಾತು ಮುಗಿಯುವಷ್ಟರಲ್ಲಿ ಮೋಹಿನಿ ತನ್ನನ್ನು ತಾನೇ ಮರೆತು ನಾಚಿಕೆಸಂಕೋಚಗಳನ್ನೆಲ್ಲ ತೊರೆದು ಏರುದನಿಯಿಂದ–"ಅದೆಂದಿಗೂ ದಿಟವಲ್ಲ ಭಾವಯ್ಯ, ಎಂದಿಗೂ ದಿಟವಲ್ಲ. ತಾನು ಜೀವಂತಳಿರುವಾಗ ಅಕ್ಕ ನಿಂದ ಇಂಥ ಕೆಲಸ ಮಾಡಿಸಲು ಯಾರಿಗೂ ಸಾಧ್ಯವಿಲ್ಲ– ಅಕ್ಕನು ಇತ್ತೀಚೆ ಸುಂದರಿಯ ಮುಖವನ್ನೂ ನೋಡುತಿದ್ದಿಲ್ಲ" ಎಂದಳು.

ನೀಲಾಂಬರ ಶಾಂತಭಾವದಿಂದ ನುಡಿದ: "ಅದನ್ನು ನಾನು ಬಲ್ಲೆ ನಮ್ಮಾ. ಬಹುಶಃ ನಿನ್ನ ಮಾತಿನಲ್ಲಿಯೂ ಸತ್ಯವಿರಬಹುದು! ಆಗ ಅವಳ ದೇಹದಲ್ಲಿ ಪ್ರಾಣವಿರಲಿಕ್ಕಿಲ್ಲ! ತನ್ನ ಬುದ್ಧಿ ಪೂರ್ಣವಾಗಿ ನಷ್ಟವಾಗುವ ಮೊದಲೇ ಅವಳು ತನ್ನ ಪ್ರಾಣವನ್ನು ನನಗೆ ಒಪ್ಪಿಸಿದ್ದಾಳೆ. ಮನೆ ಬಿಟ್ಟು ಹೋಗುವಾಗ ಅವಳು ತನ್ನೊಂದಿಗೆ ಅದನ್ನು ಒಯ್ದಿಲ್ಲ. ಇಂದಿಗೂ ಅವಳ ಜೀವ ನನ್ನ ಬಳಿಯಲ್ಲಿಯೆ ಇದೆ."

ಬಳಿಕ ನೀಲಾಂಬರ ಕಣ್ಣುಗಳನ್ನು ಮುಚ್ಚಿ ತನ್ನ ಹೃದಯಾಂತರಾಳ

ವನ್ನು ಹೊಕ್ಕು ಅವನ್ನು ಅರಸುವ ಯತ್ನ ಮಾಡತೊಡಗಿದ.

ಮೋಹಿನಿ ಮುಗ್ಧಳಾಗಿ, ಕಣ್ಣು ಮುಚ್ಚಿ ಕುಳಿತ ಭಾವನವರ ಪ್ರಶಾಂತ ವಾದ, ಪೀತವರ್ಣದ ಮುಖವನ್ನೇ ನಿಟ್ಟಿಸಿದಳು. ಆ ಮುಖಕ್ಕೆ ಈರ್ಷೆ, ಕೋಪ–ದ್ವೇಷಗಳ ನೆರಳು ಲವಲೇಶವೂ ಸೋಂಕಿರಲಿಲ್ಲ. ಕೇವಲ ಅಪರಿ ಸೀಮ ವ್ಯಥೆ, ಅನಂತ ಕ್ಷಮಾದಾನದ ಅದಮನೀಯ ಮಹಿಮೆ ಆ ಮುಖದಲ್ಲಿ ಕಾಣುತ್ತಿತ್ತು. ಮೋಹಿನಿ ಕೊರಳಿಗೆ ಸೆರಗು ಸುತ್ತಿಕೊಂಡು ಭಾವನಿಗೆ ತಿಳಿಯ ದಂತೆ ಪ್ರಣಾಮ ಮಾಡಿ ಪಾದಧೂಳಿಯನ್ನು ಕೊಂಡು ಸುಮ್ಮನೆ ಎದ್ದು ಹೋದಳು. ಸಂಜೆಯ ಸಮಯಕ್ಕೆ ದೀವಿಗೆ ಹಚ್ಚುತ್ತಿರುವಾಗ ಮನದ ಲ್ಲಿಯೆ–"ಭಾವನವರನ್ನು ಅಕ್ಕ ಚನ್ನಾಗಿ ಗುರುತಿಸಿದ್ದಾಳೆ. ಅದುದರಿಂದಲೆ ಅವರನ್ನು ಒಂದು ದಿನವೂ ಬಿಟ್ಟಿರಲು ಅವಳಿಗೆ ಸಾಧ್ಯವಾಗಿರಲಿಲ್ಲ" ಎಂದು ಕೊಂಡಳು.

ನಾಲ್ಕು ವರ್ಷಗಳ ಸುದೀರ್ಘ ಸಮಯದ ನಂತರ ಹರಿಮತಿ ತನ್ನ ತವರು ಮನೆಗೆ ಬಂದಳು. ದೊಡ್ಡ ಮನೆತನದ ಸ್ತ್ರೀಯಂತೆಯೇ ಅವಳ ಆಗಮನ ವಾಯಿತು.

ಜೊತೆಗೆ ಗಂಡ, ಕಂಕುಳಲ್ಲಿ ಆರು ತಿಂಗಳ ಮಗು, ಅಲ್ಲದೆ ಐದಾರು ದಾಸ ದಾಸಿಯರೊಂದಿಗೆ ಗೃಹಪ್ರವೇಶ ಮಾಡಿದಳು ಅವಳು. ಸಾಮಾನು ಸರಂಜಾಮುಗಳಿಗೂ ಮಿತಿ ಇರಲಿಲ್ಲ. ಇದರಿಂದ ಮನೆಯೆಲ್ಲವೂ ತುಂಬಿ ಹೋಯಿತು. ರೈಲು ಬಂಡಿಯಿಳಿದು ನಿಲ್ದಾಣದಲ್ಲಿ ಕಾಲಿಟ್ಟಾಗಲೇ ಅವಳಿಗೆ ಯದುವಿನಿಂದ ಮನೆಯ ಸಮಾಚಾರವೆಲ್ಲವೂ ತಿಳಿಯಿತು. ಆದ್ದರಿಂದ ಅವಳು ಅಲ್ಲಿಯೇ ಅಳಲು ತೊಡಗಿದಳು. ಗಂಟಲು ಹರಿಯುವಂತೆ ಅಳುತ್ತ ಊರನ್ನೇ ನಡುಗಿಸುತ್ತ ಮೂರು ಗಂಟೆ ರಾತ್ರಿಯ ಹೊತ್ತಿಗೆ ಮನೆ ಸೇರಿದಳು. ಸೇರಿದ್ದೇ ತಡ, ಅಣ್ಣನ ಮಡಿಲಲ್ಲಿ ತಲೆಯಿಟ್ಟು ಬೋರಲುಬಿದ್ದಳು. ಅಂದು ರಾತ್ರಿ ಪುಟ್ಟಿ ತಾನೂ ತುಟಿಗೆ ನೀರು ಸಹ ಹಚ್ಚಿಕೊಳ್ಳಲಿಲ್ಲ; ಅಣ್ಣನಿಗೂ ಬಿಡಲಿಲ್ಲ. ಹಾಗೆಯೇ ಬಿದ್ದುಕೊಂಡು ಒಂದೊಂದಾಗಿ ಎಲ್ಲ ವಿಷಯವನ್ನೂ ಕೇಳಿ ಕೊಂಡಳು. ಮೊದಲು ಪುಟ್ಟಿ ಅತ್ತಿಗೆಗೆ ಕೊಂಚ ಹೆದರುತ್ತಿದ್ದಳು. ಅವಳೆದು ರಿಗೆ ಪುಟ್ಟಿಗೆ ತುಂಬ ಸಂಕೋಚವೆನಿಸುತ್ತಿತ್ತು. ಆದರೆ ಅಣ್ಣನಲ್ಲಿ ಅವಳಿ ಗಾವ ಸಂಕೋಚವೂ ಇರಲಿಲ್ಲ. ಅಣ್ಣ ಒಬ್ಬ ಗಂಡುಸು; ಅವನೊಂದಿಗೆ ಎಂಥ ಮಾತುಗಳನ್ನಾಡಬೇಕು, ಯಾವ ರೀತಿಯ ವ್ಯವಹಾರವಿಟ್ಟುಕೊಳ್ಳ

ಬೇಕು, ಎಂಬುದು ಯಾವುದೂ ಅವಳಿಗೆ ತಿಳಿಯುತ್ತಿರಲಿಲ್ಲ. ಯಾವ ವಿಷಯವಾಗಿಯೇ ಆಗಲಿ, ಅವಳು ಹಟಮಾಡುವುದು ಅಣ್ಣನೊಂದಿಗೇ. ಅತ್ತೆಯ ಮನೆಗೆ ಹೋಗುವ ಮುನ್ನಾದಿನ ಅವಳು ಅತ್ತಿಗೆಯಿಂದ ಬೈಸಿಕೊಂಡಿದ್ದಳು. ಆಗಲೂ ಅಣ್ಣನ ಕೊರಳು ಸುತ್ತಿ ತನ್ನ ಕಂಬನಿಯಿಂದ ಮನೆಯೆಲ್ಲವನ್ನೂ ತೋಯಿಸಿದ್ದಳು. ಈಗ ಆ ಅಣ್ಣನನ್ನು ಈ ವರೆಗೂ ದುಃಖಕ್ಕೀಡುಮಾಡಿದವರ ಮೇಲೆ, ದುಃಖಸಾಗರದಲ್ಲಿ ಮುಳುಗಿಸಿ ಜೀರ್ಣಶೀರ್ಣನನ್ನಾಗಿ ಮಾಡಿದವರ ಮೇಲೆ, ಅವಳ ಕೋಪ ದ್ವೇಷಗಳಿಗೆ ಮೇರೆಯೇ ಉಳಿಯಲಿಲ್ಲ. ಅಣ್ಣನ ದುಃಖದೆದುರು ತನ್ನ ದುಃಖ ತೀರ ಸಾಮಾನ್ಯವಾದುದೆಂದು ಅವಳಿಗೆನಿಸಿತು. ಆ ಬಗೆಗೆ ತನ್ನ ಮನೆಯವರ ಮೇಲೂ ಅವಳಿಗೆ ಜುಗುಪ್ಸೆಯುಂಟಾಯಿತು. ಚಿಕ್ಕ ಅಣ್ಣ ಹಾವಿನ ಕಡಿತದಿಂದ ಅಕಾಲಿಕ ಮೃತ್ಯುವಿಗೆರವಾದ ಬಗೆಗೆ ಅವಳಿಗೆ ಹೇಳಿಕೊಳ್ಳುವಂತಹ ದುಃಖ ಉಂಟಾಗಲಿಲ್ಲ. ಅದಲ್ಲದೆ, ದುಃಖಕ್ಕೀಡಾದ ಚಿಕ್ಕ ಅತ್ತಿಗೆಯಿಂದಲೂ ಆಕೆ ಮುಖ ಹೊರಳಿಸಿದಳು.

ಎರಡು ದಿನಗಳಾದ ಮೇಲೆ ಹರಿಮತಿ ಗಂಡನನ್ನು ಕರೆದು– "ನಾನು ಅಣ್ಣನನ್ನು ಸಂಗಡ ಕರೆದುಕೊಂಡು ಪಶ್ಚಿಮದೆಡೆಗೆ ಹೋಗಬೇಕೆಂದಿದ್ದೇನೆ. ಆದ್ದರಿಂದ ನೀವು ಆಳು–ಹೋಳುಗಳೊಂದಿಗೆ ಮನೆಗೆ ಹೋಗಿ; ಅಥವಾ ಮನಸ್ಸಿದ್ದರೆ ನೀವೂ ನಮ್ಮೊಟ್ಟಿಗೆ ಬನ್ನಿ" ಎಂದಳು.

ಬಹಳ ಯೋಚಿಸಿದ ಬಳಿಕ ಹರಿಮತಿಯ ಗಂಡ ಯತೀನನಿಗೆ ಹೆಂಡತಿಯ ಜೊತೆಗೆ ಹೋಗುವುದೇ ವಿಹಿತವೆನಿಸಿತು. ಆದ್ದರಿಂದ ಪುನಃ ಗಂಟು ಮೂಟೆಗಳನ್ನೆಲ್ಲ ಕಟ್ಟಿಡುವುದಕ್ಕಾಗಿ ಹೊರಟುಹೋದ. ಪ್ರಯಾಣದ ಸಿದ್ಧತೆ ನಡೆಯಿತು. ಮನೆಯವರಿಗೆ ಯಾರಿಗೂ ತಿಳಿಯದಂತೆ ಪುಟ್ಟಿ ಸುಂದರಿಯನ್ನೊಮ್ಮೆ ಕರೆಕಳುಹಿದ್ದಳು. ಆದರೆ ಸುಂದರಿ ಬರಲೇ ಇಲ್ಲ. ಕರೆಯಹೋಗಿದ್ದ ವ್ಯಕ್ತಿಗೆ–"ಇನ್ನು ಈ ಮುಖ ಯಾರಿಗೂ ತೋರಿಸುವಂತಿಲ್ಲ. ಅಲ್ಲದೆ ನಾನು ಈಗಾಗಲೇ ಎಲ್ಲ ವಿಷಯ ತಿಳಿಸಿಬಿಟ್ಟಿದ್ದರಿಂದ ಇನ್ನು ಹೇಳಬೇಕಾದ ಸಂಗತಿ ಯಾವುದೂ ಇಲ್ಲ" ಎಂದು ಹೇಳಿಕಳುಹಿದ್ದಳು. ಹರಿಮತಿ ಕೋಪದಿಂದ ತುಟಿಗಚ್ಚಿ ತೆಪ್ಪಗುಳಿದಳು.

ಪುಟ್ಟಿಯ ಅತ್ಯಧಿಕ ಉಪೇಕ್ಷಾಭಾವ, ಅದಕ್ಕೂ ಹೆಚ್ಚಾಗಿ ಅವಳ ನಿಷ್ಠುರ ನಡತೆ, ಇದರಿಂದ ಮೋಹಿನಿಗಾದ ಹೃದಯವೇದನೆ ಅಂತರ್ಯಾಮಿ ಒಬ್ಬನೇ

ಬಲ್ಲ. ಕೈಜೋಡಿಸಿ ಅವಳು ಅಕ್ಕನನ್ನು ಸ್ಮರಿಸಿ ಮನದಲ್ಲಿಯೇ– "ಅಕ್ಕ, ನೀನ ಲ್ಲದೆ ಬೇರಾರು ನನ್ನನ್ನು ಗುರುತಿಸಬಲ್ಲರು ? ನೀನು ಇದ್ದಲ್ಲಿಂದಲೇ ನನ್ನನ್ನು ಕ್ಷಮಿಸಿದ್ದಾದರೆ ನನಗೆ ಅಷ್ಟೇ ಸಾಕು " ಎಂದು ಬೇಡಿಕೊಳ್ಳತೊಡಗಿದಳು.

ಕೈಕಾಲು ಮುದುಡಿಕೊಂಡು ಏಕಾಂತ ಸ್ಥಳದಲ್ಲಿ ಮೌನವಾಗಿ ಕುಳಿತಿರು ವುದು ಮೋಹಿನಿಯ ಸ್ವಭಾವ. ವಿಶೇಷ ಕಾರಣವಿಲ್ಲದೆ ಅವಳು ಬಹುಶಃ ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಈ ಹೊತ್ತು ನೀರವಭಾವದಿಂದ ಎಲ್ಲರ ಸೇವೆಯಲ್ಲಿ ತೊಡಗಿದ್ದಳು. ಅವಳು ಯಾರೊಂದಿಗೂ ಮಾತಾಡಲಿಲ್ಲ. ಅಣ್ಣನ ಊಟದ ವ್ಯವಸ್ಥೆ ಸ್ವತಃ ಹರಿಮತಿಯೆ ಹೊತ್ತಿದ್ದರಿಂದ, ಎಷ್ಟೋ ದಿನ ಗಳಿಂದ ಭಾವನವರ ಬಳಿ ಕುಳಿತುಕೊಳ್ಳಬೇಕಾಗಿದ್ದಂತೆ ಇಂದು ಕುಳಿತು ಕೊಳ್ಳುವ ಅಗತ್ಯವೂ ಮೋಹಿನಿಗೆ ಉಳಿಯಲಿಲ್ಲ.

ಯಾತ್ರೆಗೆ ಹೊರಡುವ ದಿನ ನೀಲಾಂಬರ ಅತ್ಯಂತ ಸೋಜಿಗದಿಂದ– "ಏಕಮ್ಮಾ, ನೀನೂ ನಮ್ಮೊಂದಿಗೆ ಹೊರಡುವುದಿಲ್ಲವೆ ? " ಎಂದು ಕೇಳಿದಾಗ ಮೋಹಿನಿ ನಕಾರಾತ್ಮಕವಾಗಿ ತಲೆ ಅಲ್ಲಾಡಿಸಿದಳು.

ಕಂಕುಳಲ್ಲಿ ಮಗುವನ್ನೆತ್ತಿಕೊಂಡು ಹರಿಮತಿ ಅಣ್ಣನ ಬಳಿ ಬಂದು ಭಾವ ನಾದಿನಿಯರ ಮಾತುಕತೆಯನ್ನು ಕೇಳತೊಡಗಿದಳು.

ನೀಲಾಂಬರನೆಂದ– "ಅದು ಆಗದ ಮಾತು. ನೀನೊಬ್ಬಳೇ ಇಲ್ಲಿ ಹೇಗೆ ಇರಬಲ್ಲೆ ? ಅಲ್ಲದೆ ಇಲ್ಲಿ ಇದ್ದಾದರೂ ಮಾಡುವುದೇನು ? ಆದುದರಿಂದ ನೀನು ನಮ್ಮೊಂದಿಗೆ ಹೊರಡಲೇಬೇಕು. "

ಮೋಹಿನಿ ಪುನಃ ತಲೆಯಲ್ಲಾಡಿಸಿ– "ಇಲ್ಲ ಭಾವಯ್ಯ–ನಾನೆಲ್ಲಿಯೂ ಹೋಗಲಾರೆ" ಎಂದಳು.

ಮೋಹಿನಿಯ ತವರಿನವರು ಸಿರಿವಂತರು. ವಿಧವೆಯಾದ ಮಗಳನ್ನು ತಮ್ಮ ಮನೆಗೆ ಕರೆದೊಯ್ಯಲು ಅವರು ಎಷ್ಟು ಸಲ ಯತ್ನಿಸಿದರೂ ಅವಳು ಹೋಗಲೇ ಇಲ್ಲ.

ಅವಳು ಎಲ್ಲಿಯೂ ಹೋಗದಿರುವುದು ತನ್ನ ಸಲುವಾಗಿಯೇ ಎಂದು ನೀಲಾಂಬರ ಆಗ ಭಾವಿಸಿದ್ದ. ಆದರೆ ಈಗ ನಿರ್ಜನವಾದ ಮನೆಯಲ್ಲಿ ತಾನೊಬ್ಬಳೇ ಏಕೆ ಇರುವಳೆಂಬ ಸಂಗತಿ ಎಷ್ಟು ಯೋಚಿಸಿದರೂ ಅವನಿಗೆ ಹೊಳೆಯಲಿಲ್ಲ. "ಆದೇಕೆ ನೀನೆಲ್ಲಿಯೂ ಹೋಗಬಯಸುವುದಿಲ್ಲವಮ್ಮಾ ? "– ಕೇಳಿದ ಅವನು.

ಮೋಹಿನಿ ಸುಮ್ಮನಿದ್ದಳು.

"ಆದರೆ ನೀನು ಕಾರಣವನ್ನು ಹೇಳುವ ವರೆಗೆ ನಾನೂ ಎಲ್ಲಿಯೂ ಹೋಗುವುದಿಲ್ಲ."

ಮೋಹಿನಿ ಇಳಿದನಿಯಿಂದ – "ನೀವು ಹೋಗಿ ಬನ್ನಿ. ನಾನು ಇಲ್ಲಿಯೇ ಇರುತ್ತೇನೆ" ಎಂದಳು.

"ಅದೇಕೆ ?"

ಮೋಹಿನಿ ಕೆಲ ಹೊತ್ತು ಮೌನವಾಗಿ ಉಳಿದಳು. ಸಂಕೋಚವಶದಿಂದ ಅವಳಲ್ಲಿ ಜಡತೆಯುಂಟಾಗಿತ್ತು. ಅದನ್ನು ದೂರಗೊಳಿಸಲು ಅವಳು ಒಳಗೊಳಗೇ ತನ್ನ ಎಲ್ಲ ಶಕ್ತಿಯನ್ನೂ ವಿನಿಯೋಗಿಸಿ ಯತ್ನಿಸತೊಡಗಿದಳು. ಕೊನೆಗೆ ಮನಸ್ಸನ್ನೂ ಸ್ಥಿರಗೊಳಿಸಿ ಇಳಿದನಿಯಿಂದ– "ಅಕ್ಕ ಖಂಡಿತವಾಗಿ ಒಂದಿಲ್ಲ ಒಂದು ದಿನ ಬಂದೇ ಬರುವಳು. ಆದುದರಿಂದಲೇ ನಾನು ಇಲ್ಲಿಂದ ಎಲ್ಲಿಯೂ ಹೋಗಲಾರೆ" ಎಂದಳು.

ನೀಲಾಂಬರ ದಂಗುಬಡೆದಂತಾದ. ಮಿಂಚಿನ ಪ್ರಖರ ಪ್ರಕಾಶದಿಂದ ಮುಖ ಬೆಂದಂತಾಗಿ ಕಂಣಿಗೆ ಮಬ್ಬು ಕವಿದು ಎಲ್ಲಿಯೂ ಏನೂ ಕಾಣಿಸದ ಹಾಗೆ ಆಗುವಂತೆ ನೀಲಾಂಬರನಿಗೂ ಒಮ್ಮೆಲೇ ಮಬ್ಬು ಆವರಿಸಿತು. ಆದರೆ ಹಾಗಾದುದು ಒಂದು ಕ್ಷಣ ಮಾತ್ರ. ಮರುಕ್ಷಣದಲ್ಲಿ ಅವನು ತನ್ನನ್ನು ಸಾವರಿಸಿಕೊಂಡು ಕಿರುನಗೆಯೊಂದನ್ನು ನಕ್ಕು– "ಛೀ ಛೀ, ನೀನು ಹೀಗೆ ಹುಚ್ಚಿಯಂತೆ ಬಡಬಡಿಸತೊಡಗಿದರೆ, ಮಕ್ಕಳ ಹಾಗೆ ಮಾಡಿದರೆ, ನನ್ನ ಗತಿಯೇನು ?" ಎಂದ.

ಮೋಹಿನಿ ಕ್ಷಣಮಾತ್ರದಲ್ಲಿ ತನ್ನ ಹೃದಯುವನ್ನು ಬಗೆದು ನೋಡಿದ ಬಳಿಕ ನಿಸ್ಸಂದೇಹದ ಸ್ಥಿರವಾದ ಮೃದು ದನಿಯಿಂದ– "ನಾನು ಚಿಕ್ಕ ಮಕ್ಕಳ ಹಾಗೆ ಮಾಡುತ್ತಿಲ್ಲ ಭಾವಯ್ಯ ! ನೀವು ನಿಮ್ಮ ಮನಬಂದಂತೆ ಅಂದುಕೊಳ್ಳಿ. ಆದರೆ ನನ್ನ ಜೀವವಿರುವ ವರೆಗೆ ಅನ್ಯರ ಮಾತಿಗೆ ನಾನು ಕಿವಿಗೊಡಲಾರೆ" ಎಂದಳು.

ಹತ್ತಿರವೇ ನಿಂತುಕೊಂಡಿದ್ದ ಅಣ್ಣತಂಗಿಯರಿಬ್ಬರೂ ಅವಾಕ್ಕಾಗಿ ಮೋಹಿನಿಯನ್ನೇ ದಿಟ್ಟಿಸಿ ನೋಡತೊಡಗಿದರು. ಪುನಃ ಅವಳು ಅಷ್ಟೇ ದೃಢ ಕಂಠದಿಂದ ಹೇಳತೊಡಗಿದಳು : "ನಿಮ್ಮ ಚರಣಗಳ ಮೇಲೆಯೇ ತಲೆಯಿಟ್ಟು ಪ್ರಾಣಬಿಡುವಂತಾಗಲೆಂದು ಅಕ್ಕ ನಿಮ್ಮಲ್ಲಿ ವರ ಬೇಡಿದ್ದಾಳೆ. ಆ ವರ

ವೆಂದಿಗೂ ನಿಷ್ಫಲವಾಗದು. ನನ್ನ ಅಕ್ಕ ನಿಜವಾಗಿಯೂ ಸತೀಲಕ್ಷ್ಮಿ. ಅವಳು ಖಂಡಿತವಾಗಿ ಮರಳಿ ಬರುತ್ತಾಳೆ. ನನ್ನ ದೇಹದಲ್ಲಿ ಪ್ರಾಣವಿರುವ ವರೆಗೆ ಆ ಆಸೆಯನ್ನೆಂದಿಗೂ ಬಿಡಲಾರೆ. ಆದುದರಿಂದ ದಯವಿಟ್ಟು ಇಲ್ಲಿಂದ ಹೋಗಲು ನನ್ನನ್ನು ಒತ್ತಾಯಪಡಿಸಬೇಡಿ ಭಾವಯ್ಯಾ!”

ನೀಲಾಂಬರನಿಗೆ ದುಃಖ ತಡೆಯಲಾಗಲಿಲ್ಲ. ಅಳು ಒಳಗೊಳಗೇ ನೂಕು ನುಗ್ಗುತ್ತ ಅವನ ಕಂಠನಾಳದ ವರೆಗೂ ಬಂದಿತ್ತು. ಅದನ್ನು ಹೊರಗೆ ಹಾಕುವ ಇಚ್ಛೆಯಿಂದ ಅವನು ಯಾವುದೋ ಏಕಾಂತಸ್ಥಾನಕ್ಕೆ ದ್ರುತಗತಿಯಿಂದ ಹೊರಟುಹೋದ.

ಹರಿಮತಿ ಒಂದು ಸಲ ಸುತ್ತಲೂ ನಿರೀಕ್ಷಿಸಿ ತನ್ನ ಮಗುವನ್ನು ಚಿಕ್ಕ ಅತ್ತಿಗೆಯ ಬಳಿ ಕುಳ್ಳಿರಿಸಿದಳು. ಅಂದು ತನ್ನ ಜೀವನದಲ್ಲಿ ಮೊತ್ತ ಮೊದಲ ಸಲ ಈ ವಿಧವೆಯಾದ ಅತ್ತಿಗೆಯ ಕೊರಳನ್ನು ಅಪ್ಪಿಕೊಂಡು ಅಳುತ್ತಳುತ್ತಲೇ ಸ್ಫುಟ ಸ್ವರದಿಂದ–“ಅತ್ತಿಗೆ, ಈ ವರೆಗೂ ನಾನು ನಿನ್ನನ್ನು ಗುರುತಿಸಿರಲಿಲ್ಲ. ನನ್ನನ್ನು ಕ್ಷಮಿಸು” ಎಂದು ಬೇಡಿಕೊಂಡಳು.

ಸ್ವಲ್ಪ ಬಾಗಿ ಮೋಹಿನಿ ಹರಿಮತಿಯ ಮಗುವನ್ನು ಎತ್ತಿಕೊಂಡಳು. ಬಳಿಕ ಮಗುವಿನ ಮುಖಕ್ಕೆ ಮುತ್ತಿಟ್ಟು ತನ್ನ ಕಂಬನಿಗಳನ್ನು ಒರೆಸುತ್ತ ಅಡುಗೆಮನೆಗೆ ಹೋದಳು.




೧೪

ವಿರಾಜಳು ಸಾವನಪ್ಪಿಕೊಂಡಿದ್ದರೆ ವಿಹಿತವಿತ್ತು. ಆದರೆ ಅವಳು ಹಾಗೆ ಮಾಡಲಿಲ್ಲ. ಅಂದು ರಾತ್ರಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಅವಳು ನಿಶ್ಚಯಿಸಿಕೊಂಡಿದ್ದಳು. ಆದರೆ ಮೃತ್ಯುಮಾರ್ಗವನ್ನು ಬಿಟ್ಟು ಅದಕ್ಕೆ ವಿಪರೀತವಾದ ಬೇರೆ ದಾರಿಯನ್ನೇ ಹಿಡಿದಳು. ಅನೇಕ ದಿನಗಳಿಂದ ಒಂದೇ ಸಮನಾಗಿ ದುಃಖ ಕ್ಲೇಶ ಹಾಗೂ ದಾರಿದ್ರ್ಯದೊಂದಿಗೆ ಕಾದಾಡಿ ಅವಳ ಬುದ್ಧಿಯೂ ಮಂಕಾಗಿತ್ತು. ಈಗ ಮೂರು ದಿನಗಳಿಂದ ಉಪವಾಸವಿದ್ದುದರಿಂದ ಅವಳು ಹಸಿವೆಯ ಕಿಚ್ಚಿನಿಂದ ವ್ಯಾಕುಲಗೊಂಡಿದ್ದಳು. ಸಾಲದ್ದಕ್ಕೆ ಅಪಮಾನದ ಅಸಹನೀಯ ಆಘಾತದಿಂದ ಮತ್ತಷ್ಟು ಜರ್ಜರಿತಳಾದಳು. ಅದರಿಂದ ಅವಳ

ಬುದ್ಧಿ ತೀರ ವಿಕಾರಗೊಂಡು ಅವಳನ್ನು ಅಡ್ಡದಾರಿ ಹಿಡಿಯುವಂತೆ ಮಾಡಿತು. ಮೃತ್ಯುವನ್ನಪ್ಪಿಕೊಳ್ಳಲು ಅವಳು ತನ್ನ ಕೈಕಾಲುಗಳನ್ನು ಸೀರೆಯಿಂದ ಗಟ್ಟಿಯಾಗಿ ಕಟ್ಟಿಕೊಳ್ಳುತ್ತಿರುವಾಗ ಒಮ್ಮೆಲೇ ಎಲ್ಲಿಯೋ ಸಿಡಿಲೆರಗಿದಂತಾಯಿತು ! ಸಿಡಿಲಿನ ಅಬ್ಬರದ ದನಿಯಿಂದ ಚಕಿತಳಾಗಿ ಮುಖವೆತ್ತಿದಾಗ ನದಿಯ ಆಚೆಗೆ ಸ್ನಾನಕ್ಕಾಗಿ ಕಟ್ಟಿಸಿದ ಘಟ್ಟವೂ ಮೀನು ಹಿಡಿಯುವ ಕಟ್ಟಿಗೆಯ ಮಂಚವೂ ಅವಳ ಕಣ್ಣಿಗೆ ಬಿದ್ದವು. ಆ ಘಟ್ಟವೂ ಆ ಮಂಚವೂ ಈ ವರೆಗೆ ಕಣ್ಣು ತೆರೆದು ಮೌನವಾಗಿ ಅವಳ ದಾರಿಯನ್ನೇ ನೋಡುತ್ತಿದ್ದವೆನಿಸಿತು ಅವಳಿಗೆ. ದೃಷ್ಟಿಮಿಲನವಾದೊಡನೆಯೇ ಅವು ತನ್ನನ್ನು ಸನ್ನೆಯಿಂದ ಕರೆಯುತ್ತಿರುವಂತೆ ತೋರಿತು. ಅವಳು ಒಮ್ಮಿಂದೊಮ್ಮೆಲೇ ಭೀಷಣಕಂಠದಿಂದ – "ಸಾಧು ಪುರುಷರಾದ ನನ್ನ ಪತಿ ನಾನು ಮುಟ್ಟಿದ ನೀರನ್ನೂ ಕುಡಿಯುವುದಿಲ್ಲವಾದರೆ ಬಿಡಲಿ! ಈ ಪಾಪಿಷ್ಠನಾದರೂ ಸೇವಿಸುವನಲ್ಲ ! ಹಾಗೆಯೇ ಆಗಲಿ !" ಎಂದು ಒರಲಿದಳು.

ಕಮ್ಮಾರನ ಕುಲಿಮೆಯಲ್ಲಿ ಹಾಕಿದ ಇದ್ದಲು ಭಗ್‌ಭಗ್ಗೆಂದು ಉರಿದು ಬೂದಿಯಾಗುವಂತೆ ವಿರಾಜಳ ಕಾಯ್ದ ಮಿದುಳಿನಲ್ಲಿ, ಅತ್ಯಂತ ಅಮೌಲ್ಯವಾದ ಅವಳ ಹೃದಯವು ಸುಟ್ಟು ಬೂದಿಯಾಯಿತು. ಅವಳು ಗಂಡನನ್ನು ಮರೆತಳು; ಧರ್ಮವನ್ನು ಮರೆತಳು ; ಸಾವನ್ನೂ ಮರೆತಳು. ಕಣ್ಣುಗಳನ್ನು ಸಾಧ್ಯವಿದ್ದಷ್ಟು ಹಿಗ್ಗಿಸಿ ಏಕದೃಷ್ಟಿಯಿಂದ ಆಚೆ ಬದಿಯ ಘಟ್ಟದೆಡೆ ನೋಡತೊಡಗಿದಳು. ಪುನಃ ಖಡ್‌ಖಡಲ್ಲೆಂದು ಸಿಡಿಲೆರಗಿತು. ಕತ್ತಲಲ್ಲಿ ಮಿಂಚು ಆಕಾಶದ ಒಡಲನ್ನೇ ಸೀಳಿ ಹೊರಹೊಮ್ಮಿದಂತಾಯಿತು.

ವಿರಾಜಳ ಕಣ್ಣು ಒಮ್ಮೆಲೇ ಸಂಕುಚಿತವಾಗಿ ಅವಳ ದೃಷ್ಟಿ ಆ ಮಿಂಚಿನೆಡೆ ಹೋಯಿತು. ಅವಳು ಮುಖವೆತ್ತಿ ಒಮ್ಮೆ ನೀರಿನೆಡೆ ನೋಡಿದಳು; ಹೊರಳಿ ಒಮ್ಮೆ ಮನೆಯ ಕಡೆಗೆ ನೋಡಿದಳು. ಬಳಿಕ ತಾನೇ ಕಟ್ಟಿಕೊಂಡಿದ್ದ ಬಂಧನಗಳನ್ನೆಲ್ಲ ತನ್ನ ಕೈಗಳಿಂದಲೇ ಸಡಲಿಸಿ ನಿಮಿಷಮಾತ್ರದಲ್ಲಿ ವನದ ಮಧ್ಯದಲ್ಲಿ ಅದೃಶ್ಯಳಾದಳು. ಅವಳು ದ್ರುತಗತಿಯಿಂದ ಮುಂದುವರೆಯುತ್ತಿದ್ದಳು. ಅವಳ ಕಾಲ ಸದ್ದಿಗೆ ಎಷ್ಟೋ ಕ್ರಿಮಿಕೀಟಗಳು ಸರ ಸರ ಎಂದು, ಬುಳು ಬುಳು ಎಂದು, ಸರಿದು ಅವಳಿಗೆ ದಾರಿಮಾಡಿಕೊಟ್ಟವು. ಆದರೆ ಅವಳಿಗಾವುದೂ ಲಕ್ಷ್ಯವಿರಲಿಲ್ಲ. ಅವಳು ಹೋಗುತ್ತಿದ್ದುದು ಸುಂದರಿಯ ಮನೆಗೆ. ದೇವಮಂದಿರದ ಪೂಜಾಸಾಮುಗ್ರಿ ಕಳುಹಲು ಎಷ್ಟೋ ಸಲ ಪೂಜಾರಿಯ ಮನೆಗೆ

ಹೋಗಿ ಬರುತ್ತಿದ್ದಾಗ ಆವಳು ಸುಂದರಿಯ ಮನೆಯನ್ನೂ ನೋಡಿದ್ದಳು. ಆ ಹಳ್ಳಿಯಲ್ಲಿ ದೊಡ್ಡವರ ಮನೆಯ ಸೊಸೆಯಾಗಿ ಬಂದಿದ್ದರೂ ಚಿಕ್ಕಂದಿನಲ್ಲೇ ಅವಳಿಗೆ ಆ ಹಳ್ಳಿಯ ಎಲ್ಲ ಓಣಿ ಸಂದಿಗಳು ಪರಿಚಿತವಾಗಿದ್ದುವು. ಆದುದ ರಿಂದ ಆವಳು ಸ್ವಲ್ಪ ಹೊತ್ತಿನಲ್ಲೇ ಸುಂದರಿಯ ಮನೆಬಾಗಿಲಿಗೆ ಬಂದು ನಿಂತಳು. ಬಾಗಿಲು ಒಳಗಿನಿಂದ ಇಕ್ಕಿತ್ತು.

ವಿರಾಜಳು ಸುಂದರಿಯ ಮನೆಯ ಬಾಗಿಲನ್ನು ತಟ್ಟಿದ ಎರಡು ಗಂಟೆಗಳ ತರುವಾಯ ಆಂಬಿಗ ಕಂಗಾಲಿ ದೋಣಿಯನ್ನು ನೀರಿನಲ್ಲಿ ತೇಲಬಿಟ್ಟ. ಹೀಗೆ ರಾತ್ರಿಯಲ್ಲಿ ದೋಣಿ ಬಿಡುವುದು ಕಂಗಾಲಿಗೆ ಹೊಸದಲ್ಲ. ಅವನು ಹಣದಾಸೆ ಯಿಂದ ಇಂಥ ಕಗ್ಗತ್ತಲು ರಾತ್ರಿಯಲ್ಲಿ ಎಷ್ಟೋ ಸಲ ಸುಂದರಿಯನ್ನು ನದಿ ಯಾಚೆಗೆ ತಲ್ಪಿಸಿ ಬಂದಿದ್ದ. ಆದರೆ ಇಂದು ಒಂದು ವೈಶಿಷ್ಟ್ಯವಿತ್ತು. ಅವನ ದೋಣಿಯಲ್ಲಿ ಈಗ ಒಬ್ಬರ ಬದಲು ಇಬ್ಬರು ನೀರವಭಾವದಿಂದ ಕುಳಿತಿದ್ದರು. ಆ ಕತ್ತಲಲ್ಲಿ ಕಂಗಾಲಿಗೆ ವಿರಾಜಳ ಮುಖ ಚನ್ನಾಗಿ ಕಾಣಲಿಲ್ಲ. ಕಂಡಿದ್ದರೂ, ಆವಳನ್ನು ಗುರುತಿಸುವುದು ಸಾಧ್ಯವಾಗುತ್ತಿದ್ದಿಲ್ಲ.

ಘಟ್ಟದ ಬಳಿ ಬಂದಾಗ, ದೂರದಲ್ಲಿ ಕತ್ತಲಲ್ಲಿ ಉದ್ದ ನಿಲುವಿಕೆಯ ವ್ಯಕ್ತಿ ಯೊಂದು ವಿರಾಜಳ ಕಣ್ಣಿಗೆ ಸ್ಪಷ್ಟವಾಗಿ ಕಂಡಿತು. ಕೂಡಲೇ ವಿರಾಜಳ ಕಣ್ಣು ಮುಚ್ಚಿಕೊಂಡವು.

ವಿರಾಜಳಿಗೆ ಸುಂದರಿ ಮೆಲ್ಲನೆ ಕೇಳಿದಳು–"ಹೌದು ತಾಯೀ, ನಿಮ್ಮನ್ನು ಯಾರು ಹೀಗೆ ಹೊಡೆದದ್ದು ?"

ವಿರಾಜಳು ಚಂಚಲಚಿತ್ತಳಾಗಿ ಉತ್ತರವಿತ್ತಳು–"ಇದೇನು ಸುಂದರಿ, ನನ್ನ ಮೈಗೆ ಕೈಹಚ್ಚುವ ಅಧಿಕಾರ ಅವರಿಗಲ್ಲದೆ ಬೇರೆ ಯಾರಿಗಿದೆ ? ಇದೆಲ್ಲ ಗೊತ್ತಿದ್ದೂ ಯಾವಾಗಲೂ ಈ ಪ್ರಶ್ನೆ ಕೇಳುವುದೇಕೆ ?"

ಸುಂದರಿ ನಾಚಿಕೊಂಡು ಸುಮ್ಮನುಳಿದಳು.

ಅರ್ಧ ಗಂಟೆಯ ಬಳಿಕ ಸುಸಜ್ಜಿತ ದೋಣಿಯೊಂದು ಎದುರುಬಂದು ನಿಂತಿತು. ಆ ದೋಣಿಗೆ ಲಂಗರುಹಾಕುವುದನ್ನು ಕಂಡು–"ಹೌದು ಸುಂದರಿ, ನನ್ನೊಟ್ಟಿಗೆ ನೀನೂ ಬರುವೆಯಲ್ಲವೆ?" ಎಂದಳು ವಿರಾಜ್.

"ಇಲ್ಲ ತಾಯೀ, ನಾನು ಇಲ್ಲಿ ಇರದಿದ್ದರೆ ಜನ ಸಂಶಯಪಡಬಹುದು. ನೀವೊಬ್ಬರೇ ಹೋಗಿ. ಅನಂತರ ನಿಮ್ಮನ್ನು ಕಾಣಲು ಬರುತ್ತೇನೆ."

ವಿರಾಜಳು ಸುಮ್ಮನಾದಳು. ಸುಂದರಿಯು ಕಂಗಾಲಿಯ ದೋಣಿಯಲ್ಲಿ

ಕುಳಿತು ತನ್ನ ಮನೆಗೆ ಹಿಂತಿರುಗಿದಳು.

ಚಿಕ್ಕ ಕೊಠಡಿಯುಳ್ಳ ಜಮೀನುದಾರನ ಆ ದೋಣಿ ಅಲಂಕಾರವಾಗಿ ಸಿಂಗರಿಸಲ್ಪಟ್ಟಿತ್ತು. ವಿರಾಜಳನ್ನು ಹೊತ್ತುಕೊಂಡು ಆ ದೋಣಿ ಬಾಣ ವೇಗದಿಂದ ತ್ರಿವೇಣಿಯೆಡೆಗೆ ಓಡತೊಡಗಿತು.

ಬೆಸ್ತರು ಬಲವಾಗಿ ಹುಟ್ಟುಹಾಕುತ್ತಿದ್ದಾಗ ಚಪ್‌ಚಪ್ಪೆಂದು ಸದ್ದುಂಟಾಗುತಿತ್ತೇನೋ ನಿಜ. ಆದರೆ ಆಗ ಗಾಳಿಯು ಸುಯ್ಯೆಂದು ಬೀಸುತ್ತಿದ್ದುದರಿಂದ ಆ ಹುಟ್ಟಿನ ಸದ್ದು ಗಾಳಿಯ ಸದ್ದಿನೊಂದಿಗೆ ವಿಲೀನವಾಗುತ್ತಿತ್ತು. ರಾಜೇಂದ್ರನು ದೋಣಿಯ ಒಂದು ಬದಿಗೆ ಮುಖ ಕೆಳಗೆಮಾಡಿ ಮೌನವಾಗಿ ಹೆಂಡ ಕುಡಿಯತೊಡಗಿದ. ಕೊಂಚವೇ ದೂರ ಕಲ್ಲುಮೂರ್ತಿಯಂತೆ ಕುಳಿತ ವಿರಾಜಳು ನೀರಿನೆಡೆಗೆ ನಿಟ್ಟಿಸಿನೋಡುತ್ತಿದ್ದಳು. ರಾಜೇಂದ್ರ ಇಂದು ಮಿತಿಇಲ್ಲದೆ ಕುಡಿದ. ಅಮಲಿನಿಂದ ಅವನ ರಕ್ತವೆಲ್ಲವೂ ಕಾಯ್ದಂತಾಯಿತು. ಅವನು ಉನ್ಮತ್ತನಾದನು. ದೋಣಿಯು ಸಪ್ತಗ್ರಾಮದ ಸೀಮೆಯನ್ನು ದಾಟಿದ ಬಳಿಕ ಅವನು ವಿರಾಜಳ ಮಗ್ಗುಲಿಗೆ ಬಂದು ಕುಳಿತ. ವಿರಾಜಳ ಒರಟು ಕೂದಲು ಬೆನ್ನ ಮೇಲಿಂದ ಇಳಿದು ದೋಣಿಯ ನೆಲದ ಮೇಲೆ ಬಿದ್ದಿದ್ದವು. ತಲೆಯ ಮೇಲಿನ ಸೆರಗು ಜಾರಿ ಹೆಗಲ ಮೇಲೆ ಬಿದ್ದಿತ್ತು. ಆದರೆ ಅವಳಿಗಿದಾವುದೂ ಗೊತ್ತಿರಲಿಲ್ಲ. ತನ್ನ ಮಗ್ಗುಲಲ್ಲಿ ಯಾರು ಕುಳಿತರೆಂಬುದೂ ಅವಳ ಲಕ್ಷ್ಯಕ್ಕೆ ಬರಲಿಲ್ಲ.

ಆದರೆ ರಾಜೇಂದ್ರನ ಸ್ಥಿತಿ ಮಾತ್ರ ವಿಚಿತ್ರವಾಯಿತು. ಭಯಾನಕ ಸ್ಥಾನಕ್ಕೆ ಏಕಾಂಗಿಯಾಗಿ ಒಮ್ಮೆಲೇ ಬಂದಾಗ ಭೂತ ಪಿಶಾಚಿಗಳು ಎದುರುಗೊಂಡರೆ ಹೆದರಿಕೆಯಿಂದ ಹಿಂಡಿಹಿಪ್ಪೆಯಾದ ಮನುಷ್ಯನು ಬಂದು ಕುಳಿತುಕೊಳ್ಳುವಂತೆ ರಾಜೇಂದ್ರ ವಿರಾಜಳ ಮಗ್ಗುಲಲ್ಲಿ ಕುಳಿತುಕೊಂಡ. ಕೂಡಲೇ ಅವನ ಎದೆಯಲ್ಲಿ ಭಯದ ಸುಂಟರಗಾಳಿಯೇ ಎದ್ದಿತು. ಅವನು ಅವಳನ್ನೇ ದಿಟ್ಟಿಸಿ ನೋಡತೊಡಗಿದ. ಅವಳನ್ನು ತಾನಾಗಿ ಮಾತನಾಡಿಸುವ ಧೈರ್ಯ ಬರಲಿಲ್ಲ ಅವನಿಗೆ.

ವಿರಾಜಳನ್ನು ಹೊಂದಲು ರಾಜೇಂದ್ರ ಅಸಾಧ್ಯ ಪ್ರಯತ್ನ ಮಾಡಿದ್ದ. ಎರಡು ವರ್ಷ ಅವನು ಅವಳನ್ನು ನೆಳಲಿನಂತೆ ಅನುಸರಿಸಿದ್ದ. ನಿದ್ರಾವಸ್ಥೆಯಲ್ಲಾಗಲಿ, ಜಾಗೃತಾವಸ್ಥೆಯಲ್ಲಾಗಲಿ, ಅವನು ವಿರಾಜಳನ್ನೇ ನೆನೆಸುತ್ತಿದ್ದ. ಅವಳನ್ನು ಒಮ್ಮೆ ಕಣ್ತುಂಬ ನೋಡುವ ಆಸೆಯಿಂದ ಊಟ ನಿದ್ದೆಗಳ ಪರಿವೆ

ಇಲ್ಲದೆ ಎಷ್ಟೋ ಸಮಯದ ವರೆಗೆ ಪೊದೆ ಪೊದರುಗಳಲ್ಲಡಗಿ ಕುಳಿತಿರುತ್ತಿದ್ದ. ಆದರೆ ತಾನು ಕನಸು ಮನಸ್ಸಿನಲ್ಲಿಯೂ ನಂಬದ ಸಂಗತಿಯನ್ನು ಇಂದು ಸುಂದರಿ ಕಿವಿಯಲ್ಲಿ ಉಸಿರಿದಾಗ ಅವನು ಬೆರಗಾದ. ಎಷ್ಟೋ ಹೊತ್ತಿನ ವರೆಗೆ ಆ ಮಾತು ನಿಜವೆಂದು ತಿಳಿಯಲು ಅವನಿಂದಾಗಲಿಲ್ಲ.

ಹತ್ತಿರವೇ ನದಿಯು ಹೊರಳಿ ಮುಂದೆ ಸಾಗಿತ್ತು. ನದಿಯ ಇಬ್ಬದಿಯಲ್ಲಿಯೂ ಮೆಳೆಯ ಗುಂಪುಗಳು ದಟ್ಟವಾಗಿ ಬೆಳೆದಿದ್ದವು. ಆಲದ ಎಷ್ಟೋ ಹಳೆಯ ಹೆಮ್ಮರಗಳೂ ಇದ್ದುವು. ನದಿಯು ಹರಿಯುತ್ತಿದ್ದುದು ಅವುಗಳ ನಡುವೆ. ಹೆಜ್ಜೆಹೆಜ್ಜೆಗೆ ಮೆಳೆಯ ತುದಿಗಳೂ ಮರಗಳ ಗೆಲ್ಲುಗಳೂ ನದಿಯ ಮುಖದ ವರೆಗೆ ಬಾಗಿದ್ದರಿಂದ ಆ ಭಾಗವೆಲ್ಲವೂ ಅಂಧಕಾರಮಯವಾಗಿತ್ತು. ನದಿಯು ಹೊರಳುವ ಭಾಗವನ್ನು ದೋಣಿ ಸೇರುವ ಮೊದಲೇ ರಾಜೇಂದ್ರ ಬಹು ಪ್ರಯತ್ನದಿಂದ ಧೈರ್ಯವನ್ನು ತಂದುಕೊಂಡ. ದನಿಯೊಳಗಿನ ಜಡತೆಯನ್ನು ದೂರಮಾಡಿ ಅತ್ಯಂತ ಪ್ರಯಾಸದಿಂದ–" ನೀವು....ತಾವು....ತಾವು ಸ್ವಲ್ಪ ಒಳಗೆ ಕುಳಿತುಕೊಳ್ಳಿ. ಇಲ್ಲಿ ಗಿಡಗಳ ರೆಂಬೆ ತಲೆಗೆ ತಾಕಬಹುದು " ಎಂದ ಅವನು.

ವಿರಾಜಳು ಮುಖ ಹೊರಳಿಸಿ ರಾಜೇಂದ್ರನನ್ನು ನೋಡಿದಳು. ಹತ್ತಿರವೇ ಚಿಕ್ಕ ದೀವಿಗೆಯೊಂದು ಉರಿಯುತ್ತಿತ್ತು. ಅದರ ಮಸುಕು ಬೆಳಕಿನಲ್ಲಿ ಅವರಿಬ್ಬರ ದೃಷ್ಟಿಯೂ ಸೇರಿತು. ಈ ಮೊದಲೂ ಒಮ್ಮೆ ಅವರ ಕಣ್ಮಿಲನವಾಗಿತ್ತು. ಆದರೆ ದುಷ್ಟಹೇತುವುಳ್ಳ ರಾಜೇಂದ್ರ ಮೊದಲನೇ ಸಲ, ತನಗೆ ಹಕ್ಕಿಲ್ಲದ ಭೂಮಿಯ ಮೇಲೆ ನಿಂತು ವಿರಾಜಳನ್ನು ನೋಡಿದ್ದ. ಆದುದರಿಂದ ಆಗ ಯಾರು ಏನು ಹೇಳಿದರೂ, ಅದನ್ನು ಸಹಿಸಿಕೊಳ್ಳದೆ ಗತ್ಯಂತರವಿರಲಿಲ್ಲ. ಈ ಮಾತೂ ಅವನಿಗೆ ಗೊತ್ತಿತ್ತು. ಆದರೆ ಇಂದು ವಿರಾಜಳನ್ನು ನೋಡುತ್ತಿದ್ದುದು ತನ್ನ ಅಧಿಕಾರದ ಭೂಮಿಯ ಮೇಲೆ ನಿಂತುಕೊಂಡು. ಇಂದು ಉನ್ಮತ್ತನಾಗುವಷ್ಟು ಹೆಂಡ ಕುಡಿದಿದ್ದ. ಆದರೂ, ವಿರಾಜಳ ದೃಷ್ಟಿಯನ್ನು ಅವನು ಇಂದೂ ಸಹಿಸಲು ಸಮರ್ಥನಾಗಲಿಲ್ಲ. ಒಂದು ಸಲ ವಿರಾಜಳ ಮುಖದೆಡೆಗೆ ದಿಟ್ಟಿಸಿನೋಡಿ ಅಧೋಮುಖನಾಗಿ ಕುಳಿತ.

ಇತ್ತ ವಿರಾಜಳ ಪರಿಸ್ಥಿತಿ ಬೇರೆಯೇ ಇತ್ತು. ಅವಳು ರಾಜೇಂದ್ರನನ್ನು ದಿಟ್ಟಿಸುತ್ತಲೇ ಇದ್ದಳು. ಈ ದಿನ ಅವಳ ಹತ್ತಿರವೇ ಪರಪುರುಷನೊಬ್ಬ ಕುಳಿತಿದ್ದ. ಆದರೂ ಅವಳು ತನ್ನ ಮುಖದ ಮೇಲೆ ಸೆರಗು ಎಳೆದುಕೊಳ್ಳಲಿಲ್ಲ.

ಅಲ್ಲದೆ ತಲೆಯ ಮೇಲೂ ಸೆರಗಿರಲಿಲ್ಲ. ಅಷ್ಟರಲ್ಲಿ ದೋಣಿಯು ಗಾಢ ನೆಳಲಿನ ಭಾಗಕ್ಕೆ ಬಂದಿತು. ಬೆಸ್ತರು ಹುಟ್ಟುಹಾಕುವುದನ್ನು ನಿಲ್ಲಿಸಿ ಗಿಡಗಳ ಗೆಲ್ಲುಗಳನ್ನು ಸರಿಸಿ ದಾರಿ ಮಾಡತೊಡಗಿದರು. ಆ ಭಾಗದಲ್ಲಿ ನದಿಯ ಪಾತ್ರ ಉಳಿದ ಭಾಗಕ್ಕಿಂತ ಕಿರಿದಾಗಿದ್ದರಿಂದ ನೀರಿನ ಸೆಳೆತವೂ ಅತ್ಯಂತ ಪ್ರಬಲವಾಗಿತ್ತು. ದೋಣಿಯು ಸಾವಧಾನದಿಂದ ಸಾಗಲಿ ಎಂದು ಬೆಸ್ತರಿಗೆ ರಾಜೇಂದ್ರ ಏರುದನಿಯಲ್ಲಿ ಆದೇಶವಿತ್ತ. ಇವೆಲ್ಲ ಸಂಗತಿಗಳತ್ತ ಲಕ್ಷ್ಯವೀಯುತ್ತಿದ್ದಂತೆ ವಿರಾಜಳನ್ನುದ್ದೇಶಿಸಿ–“ ಸ್ವಲ್ಪ ಒಳಗೆ ನಡೆಯಿರಿ. ಇಲ್ಲಿ ನಿಮಗೆ ರೆಂಬೆಗಳು ತಾಕಬಹುದು ” ಎಂದು ಹೇಳಿದವನೇ ತಾನು ಕೋಣೆಗೆ ಹೋದ. ವಿರಾಜಳಿಗೆ ಆಗ ಇನ್ನೂ ಪ್ರಜ್ಞೆ ಬಂದಿರಲಿಲ್ಲ. ಯಂತ್ರದಿಂದ ಎಳೆದಂತಾಗಿ ಅವಳೂ ರಾಜೇಂದ್ರನ ಹಿಂದೆಯೇ ಕೋಣೆಯನ್ನು ಪ್ರವೇಶಿಸುವುದರಲ್ಲಿದ್ದಳು. ಆದರೆ ಒಳಗೆ ಕಾಲಿಡುತ್ತಲೆ–‘ ಅಮ್ಮಯ್ಯಾ ! ’ ಎಂದು ಚೀರಿದಳು.

ವಿರಾಜಳ ಬೊಬ್ಬೆಯಿಂದ ರಾಜೇಂದ್ರ ಬೆಚ್ಚಿಬಿದ್ದ. ದೀಪದ ಮಸುಕು ಬೆಳಕಿನಲ್ಲೇ ಅವನಿಗೆ ವಿರಾಜಳ ಕಣ್ಣುಗಳೆರಡೂ ಕೆಂಪಾಗಿ ಕಂಡವು ; ಹಣೆಯ ಮೇಲಿನ ಕುಂಕುಮ, ರಕ್ತದಲ್ಲಿ ತೊಯ್ದುದ್ದರಿಂದ ಚಾಮುಂಡಿಯ ಉರಿಯುವ ಮೂರನೆಯ ಕಣ್ಣಿನಂತೆಯೂ ತೋರಿತು. ಹೆಂಡದ ಅಮಲಿನಲ್ಲಿ ಲೋಲಾಡುತ್ತಿದ್ದ ರಾಜೇಂದ್ರ ಹೆದರಿ, ಏಟು ತಿಂದ ನಾಯಿ ಕುಂಯಿಗುಡುವಂತೆ ಚೀರುತ್ತ ನಡುಗುತ್ತ, ಆ ಜ್ಯೋತಿಯ ಎದುರಿಗೆ ನಿಲ್ಲಲಾರದೆ ಮರೆಯಾದ. ಕತ್ತಲಲ್ಲಿ ಹಾವಿನ ಮೇಲೆ ಆಕಸ್ಮಾತ್ತಾಗಿ ಕಾಲಿಟ್ಟಾಗ ಅದರ ನುಣ್ಣನೆಯ, ತಣ್ಣನೆಯ, ಮೈಯ ಸ್ಪರ್ಶದಿಂದ ಭಯಗೊಂಡು ಒಂದೇ ಸಲ ಹಾರಿ ದೂರ ನಿಲ್ಲುವಂತೆ, ವಿರಾಜಳು ಒಂದೇ ಏಟಿಗೆ ಆ ಕೋಣೆಯಿಂದ ಹಾರಿ ಹೊರಬಂದು ನಿಂತಳು. ಅನಂತರ ಒಂದು ಸಲ ನೀರಿನ ಕಡೆಗೆ ನೋಡಿ– “ ಅಮ್ಮಯ್ಯಾ, ನಾನಿದನ್ನೇನು ಮಾಡಿದೆ ! ” ಎನ್ನುತ್ತ ಮೈ ನವಿರೇಳುವಷ್ಟು ಭಯಾನಕವಾದ ಆ ನದಿಯಲ್ಲಿ ಹಾರಿದಳು.

ಬೆಸ್ತರು ಕೂಡ ಹೆದರಿಕೆಯಿಂದ ಚೀರಿದರು; ದೋಣಿ ಮಗುಚಿ ಬೀಳುವಂತೆ ಅತ್ತಿಂದಿತ್ತ ಇತ್ತಿಂದತ್ತ ಓಡಾಡತೊಡಗಿದರು. ಆದರೆ ಅವರಿಂದ ವಿರಾಜಳನ್ನು ಹುಡುಕುವುದಾಗಲಿಲ್ಲ. ಅವರು ಎಲ್ಲರೂ ವ್ಯಾಕುಲಚಿತ್ತರಾಗಿ ಕಣ್ಣು ಹಿಗ್ಗಿಸಿ ಅತ್ತ ಇತ್ತ ನೋಡತೊಡಗಿದರು. ಆದರೆ ಆ ಗಾಢಕತ್ತಲೆಯಲ್ಲಿ ಅವರಿಗೆ ಎಲ್ಲಿಯೂ ಏನೂ ಕಾಣಲಿಲ್ಲ. ರಾಜೇಂದ್ರ ದಂಗಾಗಿ ಕಲ್ಲಿನ

ಮೂರ್ತಿಯಂತೆ ಕುಳಿತಿದ್ದ. ಅವನ ಅಮಲು ಆಗಲೇ ಇಳಿದುಬಿಟ್ಟಿತ್ತು. ಆದರೆ ಆತ ನಿಂತಲ್ಲಿಯೇ ನಿಂತನಲ್ಲದೆ ಸ್ವಲ್ಪವೂ ಅಲುಗಾಡಲಿಲ್ಲ. ಸ್ವಲ್ಪ ಸಮಯದ ನಂತರ ದೋಣಿಯು ಪ್ರವಾಹದ ವೇಗಕ್ಕೆ ತಾನಾಗಿಯೇ ದಂಡೆಗೆ ಬಂದು ನಿಂತಿತು. ಆಗ ಬೆಸ್ತರೆಲ್ಲರೂ ಉದ್ವಿಗ್ನರಾಗಿ ರಾಜೇಂದ್ರನ ಬಳಿ ಬಂದರು. ಭಯದಿಂದ ಅವರ ಉಸಿರೇ ಕಟ್ಟಿದಂತಾಗಿತ್ತು. ಅವರು ನಡುಗುತ್ತ– "ಬಾಬೂಸಾಹೇಬರೆ, ಈಗ ಏನು ಮಾಡುವುದು! ಪೋಲೀಸರಿಗೆ ವರದಿ ಕಳಿಸುವುದೆ?" ಎಂದು ಕೇಳಿದರು. ರಾಜೇಂದ್ರನಿಗೂ ತುಂಬಾ ದಿಗಿಲಾಗಿತ್ತು. ಅವನು ಬೆಸ್ತರನ್ನು ನೋಡುತ್ತ ಒಡಕು ದನಿಯಿಂದ– "ಪೋಲೀಸರಿಗೆ ವರದಿ ಮಾಡುವುದೆ? ಏಕೆ, ಸೆರೆಮನೆ ಕಾಣುವ ಬಯಕೆ ಆಗಿದೆಯೆ? ಏ ಗದಾಯಿ, ನೀವೆಲ್ಲರೂ ಸಾಧ್ಯವಿದ್ದಷ್ಟು ಬೇಗ ಇಲ್ಲಿಂದ ಕಾಲುಕೀಳುವ ಯೋಚನೆ ಮಾಡಿ" ಎಂದು ಆದೇಶವಿತ್ತ.

ಗದಾಯಿ ರಾಜೇಂದ್ರ ಕುಮಾರನ ಬಹಳ ಹಳೆಯ ಸೇವಕ. ಅವನು ರಾಜೇಂದ್ರ ಕುಮಾರನ ಸ್ವಭಾವವನ್ನು ಮೊದಲಿನಿಂದಲೂ ಚನ್ನಾಗಿ ಬಲ್ಲವನು. ಆದುದರಿಂದ ಈ ಸಂದರ್ಭವನ್ನು ಅರ್ಥಮಾಡಿಕೊಳ್ಳಲು ಅವನಿಗೆ ತಡವಾಗಲಿಲ್ಲ. ಯಜಮಾನನ ಸಂಕೇತಮಾತ್ರದಿಂದಲೇ ಅವನ ಕಂಣು ನಿಚ್ಚಳವಾದವು. ಅವನು ಬೆಸ್ತರೆಲ್ಲರನ್ನೂ ಒಂದೆಡೆ ಕರೆದು ಪಿಸುದನಿಯಿಂದ – "ಬಲವಾಗಿ ಹುಟ್ಟುಹಾಕಿರಿ" ಎಂದು ಸೂಚನೆಯಿತ್ತ. ಕ್ಷಣದಲ್ಲಿ ದೋಣಿ ಮಿಂಚಿನ ವೇಗದಿಂದ ಓಡತೊಡಗಿತು.

ರಾಜೇಂದ್ರ ಸಮಾಧಾನದ ಉಸಿರನ್ನೆಳೆದುಕೊಂಡದ್ದು ಕಲ್ಕತ್ತೆಯ ಹತ್ತಿರ ಬಂದ ನಂತರವೇ. ಮುನ್ನಾ ರಾತ್ರಿ ವಿರಾಜಳೊಂದಿಗೆ ದೃಷ್ಟಾದೃಷ್ಟಿಯಾದಾಗ ಅವನು ಆವಳ ಸಿಡಿಗಂಣುಗಳನ್ನು ನೋಡಿದ್ದ. ಇಂದು ನಡುಹಗಲಿನಲ್ಲಿ ಅದನ್ನು ನೆನೆಸಿದಾಗ, ಅವನು ಇಷ್ಟು ದೂರದಲ್ಲಿದ್ದರೂ, ಅವನ ದೇಹ ಥರಥರ ನಡುಗತೊಡಗಿತು. ಅವನು ಕಿವಿ ಹಿಂಡಿಕೊಂಡು ಮನಸ್ಸಿನಲ್ಲೇ–"ಈ ಜೀವನದಲ್ಲಿ ಇನ್ನೆಂದಿಗೂ ಇಂಥ ಹೊಲೆಗೆಲಸ ಮಾಡಲಾರೆ. ಯಾರ ಅಂತರಂಗದಲ್ಲಿ ಎಂಥ ಶಕ್ತಿ ಅಡಗಿದೆಯೋ ಯಾರು ಬಲ್ಲರು? ಆ ಹುಚ್ಚಿ ತನ್ನ ಸಿಡಿಗಂಣುಗಳಿಂದ ನನ್ನ ತಂದೆ ತಾತಂದಿರ ಪ್ರಾಣವನ್ನೂ ಸುಟ್ಟುಬಿಡದಿದ್ದುದು ನನ್ನ ಪರಮ ಸೌಭಾಗ್ಯ!" ಎಂದುಕೊಂಡ. ಮುಂದೆ ಪುನಃ ಇಂಥ ಹೀನ ಕೆಲಸ ಮಾಡುವ ಧೈರ್ಯ ತನ್ನಲ್ಲಿ ಉಳಿದೀತೆಂಬ ಆಸೆ ರಾಜೇಂದ್ರನಿಗಿರಲಿಲ್ಲ.

ಇಷ್ಟು ದಿನಗಳ ವರೆಗೆ ಮೂರ್ಖ ಕುಲಟೆಯರ ಜಾಲದಲ್ಲಿ ಬಿದ್ದು ತನ್ನ ಮನೋವಿನೋದ ಮಾಡಿಕೊಳ್ಳುತ್ತಿದ್ದ. ಸತೀಸಾಧ್ವಿಯರ ಶಕ್ತಿ ಎಂಥದೆಂಬುದು ಅವನಿಗೆ ಗೊತ್ತಿರಲಿಲ್ಲ. ಇಂದು ಆ ಪಾಪಿಷ್ಠನ ಜೀವನದಲ್ಲಿ ಮೊದಲನೆಯ ಸಲ ವಿವೇಕ ಮೂಡಿತು. ಹಾವಿನ ಪರೆಯೇನೋ ಚಿನ್ನಾಟದ ವಸ್ತುವಾಗಬಹುದು; ಆದರೆ ದೊಡ್ಡ ಜಮೀನುದಾರನ ಮಗನಾದರೇನು – ಸಜೀವ ಹಾವು ಅವನ ಚಿನ್ನಾಟದ ಸಾಮಗ್ರಿಯಾಗಲು ಒಪ್ಪೀತೆ ?

೧೫

ಅಂದು ಮೂರನೆಯ ಜಾವದಲ್ಲಿ ವಿರಾಜಳು ತನ್ನ ತಲೆಯ ಬಳಿ ಕುಳಿತ ಹೆಂಗುಸನ್ನು ವಿಚಾರಿಸಲಾಗಿ ತಾನು ಹುಗುಳಿಯ ಆಸ್ಪತ್ರೆಯಲ್ಲಿದ್ದುದಾಗಿ ಅವಳಿಗೆ ತಿಳಿಯಿತು. ಕಫದ ವಿಕಾರದಿಂದ ಎಷ್ಟೋ ದಿನಗಳ ವರೆಗೆ ಅವಳಿಗೆ ಪ್ರಜ್ಞೆ ಇರಲಿಲ್ಲ. ಪ್ರಜ್ಞೆ ಬಂದ ನಂತರ ಅವಳು ಮೆಲ್ಲ ಮೆಲ್ಲನೆ ತನ್ನ ಸಂಬಂಧವಾಗಿ ಎಲ್ಲವನ್ನೂ ಸ್ಮರಿಸಿಕೊಳ್ಳಲು ಯತ್ನಿಸತೊಡಗಿದಳು. ಒಂದೊಂದಾಗಿ ಅವಳಿಗೆ ಎಲ್ಲವೂ ನೆನಪಾಯಿತು.

ಮಳೆಗಾಲದ ಒಂದು ರಾತ್ರಿ ಅವಳ ಗಂಡ ಅವಳ ಪವಿತ್ರತೆಯ ವಿಷಯದಲ್ಲಿ ಶಂಕೆ ತೋರಿದ. ರೋಗದಿಂದಲೂ ಉಪವಾಸದಿಂದಲೂ ಅವಳ ದೇಹ ಬಳಲಿ ಬೆಂಡಾಗಿ ಶಿಥಿಲಗೊಂಡಿತ್ತು; ಮನವೂ ಚಂಚಲವಾಗಿತ್ತು. ಅಂಥ ಸ್ಥಿತಿಯಲ್ಲಿ ಈ ದೊಡ್ಡ ಅಪಮಾನವನ್ನು ಸಹಿಸುವುದು ಅವಳಿಂದಾಗಲಿಲ್ಲ. ಅನೇಕ ದಿನಗಳಿಂದ ಇಂಥ ಅಪಮಾನವನ್ನು ಸಹಿಸಿ ಸಹಿಸಿ ಅವಳು ಒಂದು ರೀತಿಯಿಂದ ಹುಚ್ಚಳಂತಾಗಿದ್ದಳು. ಅಂದು ಅಭಿಮಾನ ಪ್ರೇರಿತಳಾಗಿ ಜುಗುಪ್ಸೆಗೊಂಡು ಗಂಡನ ಮುಖವನ್ನೆಂದಿಗೂ ನೋಡಲಾರೆನೆಂದು ನಿಶ್ಚಯಿಸಿದಳು. ಮತ್ತು ಆತ್ಮೀಯ ಬಂಧನಗಳನ್ನೆಲ್ಲ ಹರಿದು ಆತ್ಮಹತ್ಯೆ ಮಾಡಿಕೊಳ್ಳುವ ಉದ್ದೇಶದಿಂದ ನದಿಯೆಡೆಗೆ ಹೊರಟಳು. ಆದರೆ ನದಿಯ ಹತ್ತಿರ ಬಂದ ಬಳಿಕ ಅವಳ ಮನಸ್ಸು ಆತ್ಮಹತ್ಯೆಯಿಂದ ಪರಾವೃತ್ತವಾಯಿತು.

ಹಾಗೆಯೇ ಅವಳು ಜ್ವರದ ಬೇಗೆಯ ಮಬ್ಬಿನಲ್ಲಿ ಬಂದು ದೋಣಿಯಲ್ಲಿ ಕುಳಿತಳು. ಅರ್ಧ ದಾರಿ ದಾಟಿದ ನಂತರ ಒಮ್ಮೆಲೇ ನದಿಯಲ್ಲಿ ಹಾರಿ

ಈಜುತ್ತ ದಂಡೆ ಸೇರಿದಳು. ಅಲ್ಲಿಯೇ, ಒದ್ದೆಗೂದಲುಗಳಿಂದಲೇ, ಒದ್ದೆ ಬಟ್ಟೆಯಿಂದಲೇ ಇಡಿಯ ರಾತ್ರಿಯನ್ನು ಜ್ವರದಿಂದ ನಡುಗುತ್ತ ಕಳೆದಳು. ಕೊನೆಗೆ ಅದು ಹೇಗೋ ಒಬ್ಬ ಗೃಹಸ್ಥನ ಮನೆಯ ಬಾಗಿಲ ಬಳಿ ಬಂದು ಅಲ್ಲಿಯೇ ಒರಗಿದಳು. ಅವಳಿಗೆ ನೆನಪಿದ್ದದ್ದು ಇದಿಷ್ಟೇ. ತನ್ನನ್ನು ಆಸ್ಪತ್ರೆಗೆ ಯಾರು ತಂದರು, ಯಾವಾಗ ತಂದರು, ಹಾಗೂ ಈ ಅವಸ್ಥೆಯಲ್ಲಿ ತಾನು ಎಷ್ಟು ದಿನಗಳಿಂದ ಆಸ್ಪತ್ರೆಯಲ್ಲಿ ಬಿದ್ದಿರುವೆನೆಂಬುದು ಅವಳಿಗೆ ಹೊಳೆಯ ಲಿಲ್ಲ. ಆದರೆ, ಮನೆಯನ್ನು ತೊರೆದು ಪರಪುರುಷನ ಬೆನ್ನು ಹತ್ತಿ ಓಡಿ ಹೋದ ಕುಲಟೆ ತಾನೆಂಬ ಸಂಗತಿ ಮಾತ್ರ ಅವಳಿಗೆ ನೆನಪಾಗುತ್ತಿತ್ತು.

ವಿರಾಜಳಿಗೆ ಮುಂದಿನ ಸಂಗತಿಗಳ ಯಾವ ನೆನಪೂ ಆಗಲಿಲ್ಲ. ಅಲ್ಲದೆ ಅವುಗಳ ಬಗೆಗೆ ಯೋಚನೆ ಮಾಡುವ ಇಚ್ಛೆಯೂ ಅವಳಿಗಿರಲಿಲ್ಲ. ಅವಳಿಗೆ ಕ್ರಮೇಣ ಗುಣವಾಗತೊಡಗಿತು. ಎದ್ದು ಕುಳಿತುಕೊಳ್ಳುವಷ್ಟು ಶಕ್ತಿಯೂ ಬಂದಿತು. ಕೆಲ ದಿನಗಳಲ್ಲಿ ಮೆಲ್ಲನೆ ಅತ್ತಿತ್ತ ನಡೆಯುವ ಶಕ್ತಿಯೂ ಬಂದಿತು. ಆದರೆ ಅವಳು ಭವಿಷ್ಯತ್ತಿನ ಚಿಂತೆಯನ್ನು ಬೇಕೆಂದೇ ಅದುಮಿಕೊಂಡಳು. ಅವಳ ದೇಹದ ಅಣು ಅಣುವಿಗೂ ಆ ಘಟನೆಗಳ ಅನುಭವ ಉಂಟಾಗತೊಡ ಗಿತು. ಆದರೆ ನಾಟಕದ ಅಂಕದ ತೆರೆ ಬಿದ್ದ ಮೇಲೆ ಆ ತೆರೆಯ ಕೆಳ ತುದಿ ಯನ್ನೆತ್ತಿ ಒಳಗೆ ಇಣಿಕಿ ನೋಡಲಿಕ್ಕೂ ಅವಳಿಗೆ ಭಯ. ಈ ಭಯದಿಂದ ಅವಳ ಶರೀರ ಮಂಜುಗಡ್ಡೆಯಂತಾಗುತಿತ್ತು. ಅಲ್ಲದೆ ತಲೆಯೂ ಸುತ್ತಿದಂತಾ ಗುತಿತ್ತು. ಫಾಲ್ಗುಣ ಮಾಸದ ಒಂದು ದಿನ ಆ ಆಸ್ಪತ್ರೆಯೊಳಗಿನ ಹೆಂಗುಸು ಪುನಃ ಬಂದು– "ಈಗ ನಿಮಗೆ ಗುಣವಾಗಿದೆಯಮ್ಮಾ, ಇನ್ನು ಮುಂದೆ ನೀವು ಬೇರೆ ವ್ಯವಸ್ಥೆ ನೋಡಿಕೊಳ್ಳಬೇಕು" ಎಂದು ಹೇಳಿದಳು. "ಒಳ್ಳೆಯದು" ಎಂದು ವಿರಾಜಳು ಸುಮ್ಮನಾದಳು. ಅವಳಿಗೆ ಈ ಸೂಚನೆಯಿತ್ತ ಹೆಂಗುಸು ಆ ವೈದ್ಯಶಾಲೆಯ ಒಬ್ಬ ದಾಯಿ. ಈ ಬಡ ಹೆಂಗುಸಿಗೆ ಬಹುಶಃ ಆತ್ಮೀಯ ರಾರೂ ಇರಲಿಕ್ಕಿಲ್ಲವೆಂದು ಆ ದಾಯಿಗೂ ಅನಿಸುತ್ತಿತ್ತು. ಆದ್ದರಿಂದ ಅವಳು– "ತಪ್ಪು ತಿಳಿದುಕೊಳ್ಳಬೇಡಿರಮ್ಮಾ– ನಿಮ್ಮನ್ನು ಇಲ್ಲಿ ತಂದು ಬಿಟ್ಟ ಆ ಜನ ನಿಮ್ಮ ಬಳಗದವರಲ್ಲವೆ? ಅವರು ನಿಮ್ಮನ್ನು ನೋಡಲು ಸಹ ಒಮ್ಮೆಯೂ ಬರಲಿಲ್ಲವಲ್ಲ?" ಎಂದು ಕೇಳಿದಳು.

ವಿರಾಜಳು–"ಅಲ್ಲ, ಅವರು ನಮ್ಮ ಬಳಗದವರಲ್ಲ. ನಾನು ಅವರನ್ನು ಕಣ್ಣಾರೆ ನೋಡಲು ಸಹ ಇಲ್ಲ. ಅವರು ಯಾರೆಂಬುದೂ ನನಗೆ ಗೊತ್ತಿಲ್ಲ.

ಮಳೆಗಾಲದ ರಾತ್ರಿ ನಾನು ತ್ರಿವೇಣೀ ನದಿಯಲ್ಲಿ ಮುಳುಗಿಬಿಟ್ಟೆ. ಬಹುಶಃ ಪ್ರಾಣಿದಯೆಯಿಂದ ಅವರು ನನ್ನನ್ನು ಇಲ್ಲಿ ತಂದು ಬಿಟ್ಟಿರಬೇಕು" ಎಂದಳು.

"ಏನು! ನದಿಯಲ್ಲಿ ಮುಳುಗಿದ್ದಿರಾ? ಹಾಗಾದರೆ ನಿಮ್ಮ ಊರಾವುದು?"

ವಿರಾಜಳು ತನ್ನ ಸೋದರಮಾವನ ಊರಿನ ಹೆಸರು ಹೇಳಿ–"ನಾನಲ್ಲಿಗೇ ಹೋಗುತ್ತೇನೆ. ಅಲ್ಲಿ ನನ್ನ ಬಳಗದವರಿದ್ದಾರೆ" ಎಂದಳು.

ಆ ದಾಯಿ ಮುದಿ ವಯಸ್ಸಿನವಳು. ವಿರಾಜಳ ಮಧುರ ಸ್ವಭಾವವನ್ನು ಕಂಡು ಆ ದಾಯಿಯ ಹೃದಯದಲ್ಲಿ ಮಮತೆಯ ಸೆಲೆ ಉಕ್ಕಿತು. ಅವಳು ದಯಾರ್ದ್ರ ಕಂಠದಿಂದ–"ಹಾಗೆಯೆ ಆಗಲಿ, ನೀವು ಅಲ್ಲಿಗೇ ಹೋಗಿರಮ್ಮ. ಈಗ ಸ್ವಲ್ಪ ಜೋಕೆಯಿಂದಿರಿ. ಒಂದೆರಡು ದಿನಗಳಲ್ಲೇ ನಿಮ್ಮ ಆರೋಗ್ಯ ಪೂರ್ಣ ಸುಧಾರಿಸುವುದು" ಎಂದಳು.

ವಿರಾಜಳು ನಸುನಗುತ್ತ– "ಇನ್ನೇನು ಸುಧಾರಿಸುವುದಮ್ಮಾ! ಈ ಕಣ್ಣೂ ಸರಿ ಆಗುವಂತಿಲ್ಲ; ಈ ಕೈಯೂ ಕೆಲಸಕ್ಕೆ ಬರುವಂತಿಲ್ಲ" ಎಂದಳು.

ಬೇನೆಬಿದ್ದ ಬಳಿಕ ಅವಳ ಎಡಗಣ್ಣಿನ ದೃಷ್ಟಿ ಹೋಗಿತ್ತು; ಅಲ್ಲದೆ ಎಡಗೈಯೂ ಮುರಿದಂತಾಗಿತ್ತು. ಆ ದಾಯಿ ಕಣ್ಣಲ್ಲಿ ಕಂಬನಿ ತುಂಬಿಕೊಂಡು– "ಅದೇಕಮ್ಮಾ? ನಿಮ್ಮ ಕಣ್ಣು ಕೈಗಳೆರಡೂ ಸರಿ ಆಗಬಹುದು" ಎಂದು ಸಮಾಧಾನಪಡಿಸಿದಳು.

ಮಾರನೆಯ ದಿನ ಆ ದಾಯಿ ವಿರಾಜಳಿಗೆ ತನ್ನ ಕಂಬಳಿಯನ್ನೂ ದಾರಿಯ ವೆಚ್ಚಕ್ಕಾಗಿ ಸ್ವಲ್ಪ ಹಣವನ್ನೂ ಕೊಟ್ಟಳು. ವಿರಾಜಳು ಅವುಗಳನ್ನು ಸ್ವೀಕರಿಸಿದಳು. ಬಳಿಕ ಆ ದಾಯಿಗೆ ನಮಸ್ಕರಿಸಿ ಬೀಳ್ಕೊಟ್ಟು ಮುಂದೆ ನಡೆದಳು. ನಾಲ್ಕಾರು ಹೆಜ್ಜೆ ಮುಂದೆ ಸಾಗಿದ ಬಳಿಕ ಪುನಃ ಮರಳಿ ಬಂದು– "ನನ್ನ ಮುಖವನ್ನೊಮ್ಮೆ ನೋಡಿಕೊಳ್ಳುವ ಇಚ್ಛೆಯಾಗಿದೆ. ಸ್ವಲ್ಪ ಕನ್ನಡಿ ಸಿಗುವಂತಿದ್ದರೆ........" ಎಂದು ದೈನ್ಯದಿಂದ ಕೇಳಿಕೊಂಡಳು.

"ಸಿಗುವಂತಿದ್ದರೆ.......ಏಕೆ? ಈಗಲೇ ತಂದುಕೊಡುತ್ತೇನೆ" ಎಂದು ಆ ದಾಯಿ ಒಳಗೆ ಹೋದಳು. ಸ್ವಲ್ಪ ಹೊತ್ತಿನ ಬಳಿಕ ಕನ್ನಡಿಯನ್ನು ತಂದು ವಿರಾಜಳ ಕೈಗಿತ್ತವಳೇ ಅಲ್ಲಿಂದ ತಟ್ಟನೆ ಕಾಲ್ತೆಗೆದಳು. ವಿರಾಜಳು ತನ್ನ ಮಂಚದ ಮೇಲೆ ಕುಳಿತು ತನ್ನ ಮುಖದೆದುರು ಕನ್ನಡಿ ಹಿಡಿದಳು. ಕನ್ನಡಿಯೊಳಗಿನ ತನ್ನ ಮುಖದ ಪ್ರತಿಬಿಂಬವನ್ನು ನೋಡಿ ಅತ್ಯಂತ ಜುಗುಪ್ಸೆಯಿಂದ ಅವಳ ಮುಖ ತನ್ನಷ್ಟಕ್ಕೆ ತಾನೇ ಬೇರೆ ಕಡೆಗೆ ಹೊರಳಿತು.

ಅವಳು ಕನ್ನಡಿಯನ್ನು ದೂರ ಎಸೆದು ಹಾಸಿಗೆಯಲ್ಲಿ ಮುಖವಡಗಿಸಿ ಕರುಣೆ ಉಕ್ಕುವಂತೆ ಅಳತೊಡಗಿದಳು. ಅವಳ ತಲೆಗೂದಲೆಲ್ಲವೂ ಉದುರಿಹೋಗಿದ್ದವು. ಆಗಸವನ್ನೇ ಮುಚ್ಚಿದ ಕಾರ್ಮೋಡದಂತಹ ಅವಳ ಕೇಶರಾಶಿ ಈಗೆಲ್ಲಿ? ಮುಖವನ್ನೂ ರೂಪವನ್ನೂ ಹೀಗೆ ಅಂದಗೆಡಿಸಿದವರಾರು ? ಕಮಲದಂತಹ ಅವಳ ಕಣ್ಣುಗಳು ಈಗ ಹೀಗೇಕಾದುವು ? ಅತುಲನೀಯವಾದ ಅವಳ ಬಂಗಾರದ ದೇಹಕಾಂತಿಯನ್ನು ಅದಾರು ಅಪಹರಿಸಿದರು? ಅವಳು ಮನದಲ್ಲಿಯೆ–"ಭಗವಂತ, ಇದೆಂಥ ಕಠಿಣ ಶಿಕ್ಷೆಯನ್ನು ನನಗೆ ವಿಧಿಸಿದೆ ? ಮುಂದೆ ಎಂದಾದರೂ ಅವರ ದರ್ಶನ ಲಭಿಸಿದರೆ ಅವರಿಗೆ ಈ ಮುಖವನ್ನು ಹೇಗೆ ತೋರಿಸಲಿ ? " ಎಂದುಕೊಂಡಳು. ಜೀವಿಸಿರುವ ವರೆಗೂ ಮನುಷ್ಯನಿಗೆ ಆಸೆ ಇರತಕ್ಕದ್ದೇ. ಈ ಕಾರಣದಿಂದಲೋ ಏನೋ, ಅತ್ಯಂತ ಕ್ಷೀಣ ಆಸೆಯೊಂದು ಅವಳ ಅಂತರಂಗದ ಏಕಾಂತಿಕ ಸ್ಥಳದಲ್ಲಿ ಒಸರಿನಂತೆ ಹರಿಯುತ್ತಿತ್ತು. ಓ, ದಯಾಮಯ ಭಗವಂತನೆ, ಈ ಚಿಕ್ಕ ಆಸೆಗೆ ಪುಟವೀಯುವುದರಲ್ಲಿ ಯಾವ ಲಾಭವಿದೆಯೆಂದು ನೀನು ಅದರಲ್ಲಿ ತೊಡಗಿರುವೆ?

ಪ್ರಜ್ಞೆ ಬಂದಂದಿನಿಂದ ವಿರಾಜಳು ರೋಗಶಯ್ಯೆಯ ಮೇಲೆ ಬಿದ್ದುಕೊಂಡೇ ತನ್ನ ಮನಶ್ಚಕ್ಷುಗಳಿಂದ ಪತಿಯ ಅತ್ಯುಜ್ವಲವಾದ ಮುಖವನ್ನು ನೋಡುತ್ತಿದ್ದಳು. ಅವನ ಸ್ವರೂಪವನ್ನು ನೆನೆಯುತ್ತಿರುವಾಗ ಅವಳಿಗೆ ಒಮ್ಮೊಮ್ಮೆ–"ನಾನು ಹಾಗೆ ಮಾಡಿದ್ದು ಪ್ರಜ್ಞೆಯಿಲ್ಲದಾಗ. ಬುದ್ಧಿಪೂರ್ವಕವಾಗಿ ಮಾಡಿದುದಲ್ಲ. ಎಂದಮೇಲೆ ನನ್ನ ಈ ಪಾಪಕಾರ್ಯ ಕ್ಷಮಾರ್ಹವಲ್ಲವೆ? ಮಾನವನ ಎಲ್ಲ ಪಾಪಕೃತ್ಯಗಳಿಗೂ ಪ್ರಾಯಶ್ಚಿತ್ತವಿದ್ದೇ ಇದೆ. ಎಂದಮೇಲೆ ಇದಕ್ಕೆ ಪ್ರಾಯಶ್ಚಿತ್ತವಿಲ್ಲವೆ? ನಿಜವಾಗಿಯೂ ನಾನು ಪಾಪ ಮಾಡಿಲ್ಲವೆಂದು ಅಂತರ್ಯಾಮಿಯೂ ಬಲ್ಲ. ಹೀಗಿದ್ದೂ ನನ್ನಿಂದಾದ ಈ ಚಿಕ್ಕ ಅಪರಾಧವು ಇಷ್ಟು ದಿನಗಳ ವರೆಗೆ ಮಾಡಿದ ಗಂಡನ ಸೇವೆಯ ಪುಣ್ಯಪ್ರಭಾವದಿಂದ ನಷ್ಟವಾಗುವುದಲ್ಲವೆ ? " ಎನಿಸುತ್ತಿತ್ತು.

ವಿರಾಜಳು ಒಂದೊಂದು ದಿನ ಮನಸ್ಸಿನಲ್ಲೇ–"ಅವರ ಮನಸ್ಸಿನಲ್ಲಿ ಕೋಪವೆಂದಿಗೂ ಉಳಿಯುವುದಿಲ್ಲ. ನಾನು ಅವರ ಬಳಿ ಹೋಗಿ ಕಾಲುಗಳ ಮೇಲೆ ಬಿದ್ದು ಎಲ್ಲವನ್ನೂ ಸವಿಸ್ತಾರವಾಗಿ ಹೇಳಿದರೆ ಅವರು ನನ್ನನ್ನು ಕಡೆಗಣಿಸಲಾರರು " ಎಂದುಕೊಳ್ಳುತ್ತಿದ್ದಳು. ತಾನು ಪ್ರಾರ್ಥಿಸಿಕೊಂಡರೆ ಗಂಡ ಏನು ಮಾಡಬಹುದೆಂಬ ಕಲ್ಪನಾಚಿತ್ರವನ್ನು ತನ್ನ ಮಾನಸಪಟಲದ ಮೇಲೆ ವಿಧವಿಧ

ವಾಗಿ ಮೂಡಿಸುವುದರಲ್ಲಿಯೇ ಅವಳು ಇಡಿಯ ರಾತ್ರಿಯನ್ನು ಜಾಗರಣೆ ಯಿಂದ ಕಳೆಯುತ್ತಿದ್ದಳು. ಈ ವಿಷಯವಾಗಿ ಯೋಚಿಸುವಾಗ ನಿದ್ದೆ ಬರುವಂತಾದರೆ ತಟ್ಟನೆದ್ದು ಮೋರೆ ಕಣ್ಣುಗಳನ್ನು ಚನ್ನಾಗಿ ತೊಳೆದು ಕೊಂಡು ಬಂದು ಪುನಃ ಹೊಸ ರೀತಿಯ ಚಿತ್ರವನ್ನು ಮನದಲ್ಲೇ ಬರೆಯ ತೊಡಗುತ್ತಿದ್ದಳು. ಎಲೈ ಭಗವಂತ, ನೀನು ಅವಳ ಆ ವಿಚಿತ್ರ ಕಲ್ಪನಾ ಚಿತ್ರವನ್ನು ತೊಡೆದು ಅದೇಕೆ ಹಾಳುಮಾಡಿಬಿಟ್ಟೆ! ಇಂದು ಅವಳು ತನ್ನ ಗಂಡನ ಬಳಿಗೆ ಹೋಗಿ ಅವನ ಕಾಲುಗಳ ಮೇಲೆ ಹಣೆಯಿಟ್ಟು ಬೋರಲು ಬಿದ್ದರೂ, ಲಜ್ಜಾಪೀಡಿತಳಾದ ಅವಳಿಗೆ ತಲೆಯೆತ್ತಿ ಗಂಡನ ಮುಖ ನೋಡುವ ಧೈರ್ಯವುಂಟಾದೀತೆ?

ವೈದ್ಯಶಾಲೆಯ ಆ ಕೋಣೆಯಲ್ಲಿ ಇನ್ನೊಬ್ಬ ರೋಗಿಯಿದ್ದಳು. ಕೊನೆಯ ದಿನ ವಿರಾಜಳು ಅಳುತ್ತಿದ್ದುದನ್ನು ನೋಡಿ ಅವಳು ಎದ್ದು ಬಂದು ಅಚ್ಚರಿಯ ವಾಣಿಯಿಂದ–"ಏನಾಯಿತಮ್ಮ? ನೀವು ಹೀಗೇಕೆ ಅಳುತ್ತಿದ್ದೀರಿ?" ಎಂದು ವಿಚಾರಿಸಿದಳು. ಅಯ್ಯೋ ದೈವವೆ? ಬೇರೊಂದು ವ್ಯಕ್ತಿಗೆ ವಿರಾಜಳು ಅಳುವ ಕಾರಣವನ್ನು ತಿಳಿದುಕೊಳ್ಳುವ ಕುತೂಹಲವುಂಟಾಗಿದೆಯಲ್ಲ!

ವಿರಾಜಳು ಗಡಿಬಿಡಿಯಿಂದ ಕಂಬನಿಗಳನ್ನೊರಸಿಕೊಂಡು ಮೆಲ್ಲಮೆಲ್ಲನೆ ಕೋಣೆಯಿಂದ ಹೊರಬಿದ್ದಳು.

ವಿರಾಜಳು ಬೀದಿಯ ಒಂದು ಮೂಲೆಗೆ ಬಂದು ನಿಂತಿದ್ದಳು. ಈಗ ತಾನು ಎಲ್ಲಿಗೆ ಹೋಗಬೇಕೆಂಬುದೂ ಅವಳಿಗೆ ಗೊತ್ತಿರಲಿಲ್ಲ. ಬೀದಿಯಲ್ಲಿ ಅಸಂಖ್ಯ ಜನ ಅತ್ತಿತ್ತ ಅಲೆದಾಡುತ್ತಿದ್ದರು. ಜನರ ಹೆಜ್ಜೆಯ ಸದ್ದು, ಮಾತಿನ ಗಲಿಬಿಲಿ, ವಾಹನಗಳ ಖಡಖಡಾಟಗಳಿಂದ ಅಲ್ಲಿಯ ವಾಯುಮಂಡ-ಲವು ತುಂಬಿಹೋಗಿತ್ತು. ವಿರಾಜಳು, ಅಲೆಯುವ ಅಭ್ಯಾಸವಿಲ್ಲದ ನಿಶ್ಶಕ್ತ ವಾದ ತನ್ನ ಕಾಲುಗಳನ್ನು, ಸದ್ದು ಗದ್ದಲಗಳಿಂದ ತುಂಬಿದ ಆ ಮಾರ್ಗದ ಮೇಲೆ ಎಳೆಯತೊಡಗಿದಳು. ಆಗ ಉದ್ದವಾದ ಉಸಿರೊಂದು ಅವಳ ಎದೆಯನ್ನೇ ಸೀಳುವಂತೆ ಹೊರಹೊಮ್ಮಿತು. ಆಗ ಅವಳು ಮನಸ್ಸಿನಲ್ಲೇ– "ದೇವಾ, ನೀನು ಹೀಗೆ ಮಾಡಿದ್ದೇ ಸರಿ. ಇನ್ನು ನನ್ನ ಮುಖದ ಕಡೆಗೆ ಯಾರೂ ಹೊರಳಿ ನೋಡರು. ನನ್ನ ಈ ಮುಖ, ಕಂಬನಿ, ಈ ಆಕಾರ ತಾಳಿದ್ದು ಈ ಯಾತ್ರೆ ಗಾಗಿಯೆ ಇರಬೇಕು. ಅದಕ್ಕಾಗಿಯೆ ಇವುಗಳು ನಿರ್ಮಿತವಾದವುಗಳಾಗಿರಬೇಕು. ಮನೆ ಬಿಟ್ಟು ಓಡಿಹೋದ ಕುಲಟೆ ನಾನು ಎಂದು ನಮ್ಮ ಊರಿನ ಜನ ನಂಬಿ

ದ್ದಾರೆ. ಇನ್ನು ಮೇಲೆ ನಾನು ತಲೆಯೆತ್ತಿ ನನ್ನ ಪತಿದೇವನ ಮುಖವನ್ನಾಗಲಿ ನಮ್ಮ ಊರಿನ ಜನರನ್ನಾಗಲಿ ನೋಡುವಂತಿಲ್ಲ. ಆದುದರಿಂದಲೇ ದೇವರು ನನ್ನ ಈ ರೂಪವನ್ನು ವಿದ್ರೂಪಗೊಳಿಸಿದ್ದಾನೆ. ಹೇ ಭಗವಂತ, ನನ್ನ ಕಲ್ಯಾಣ ಕ್ಕಾಗಿಯೆ ನೀನು ಹೀಗೆ ಮಾಡಿದೆ ಎಂದು ನನ್ನ ನಂಬಿಕೆ" ಎಂದುಕೊಂಡು ದೇವರಿಗೆ ಧನ್ಯವಾದಗಳನ್ನರ್ಪಿಸುತ್ತ ಮುಂದೆ ಮುಂದೆ ಸಾಗಿದಳು.

## ೧೬

ಎಷ್ಟೋ ದಿನಗಳು ಉರುಳಿಹೋದವು. ವಿರಾಜಳು ಮೊದಲು ಮುಸುರೆ ಕೆಲಸಕ್ಕೆ ಸಿದ್ಧಳಾದಳು. ಆದರೆ ಅವಳ ದುರ್ಬಲ ದೇಹ ಆ ಕೆಲಸ ಮಾಡಲು ಸಮರ್ಥವಾಗಲಿಲ್ಲ. ಅವಳನ್ನು ಕೆಲಸಕ್ಕಿಟ್ಟುಕೊಂಡವರು ಕೆಲಸದಿಂದ ತಳ್ಳಿ ಹಾಕಿದರು. ಹೀಗಾಗಿ ಅವಳು ಭಿಕ್ಷಾಪಾತ್ರೆಯನ್ನು ನೆಚ್ಚಿಕೊಳ್ಳಬೇಕಾಯಿತು. ಮನೆಮನೆ ಅಲೆದು, ದೊರೆತಷ್ಟನ್ನು ಯಾವುದಾದರೊಂದು ಗಿಡದಡಿಯಲ್ಲಿ ಕುಚ್ಚಿ ಹೊಟ್ಟೆ ತುಂಬಿಕೊಳ್ಳುತಿದ್ದಳು. ರಾತ್ರಿಯನ್ನು ಗಿಡದಡಿಯಲ್ಲಿ ಮಲಗಿಕೊಂಡೇ ಕಳೆಯುತ್ತಿದ್ದಳು. ಅವಳ ಈಗಿನ ಜೀವನಕ್ಕೂ ಹಿಂದಿನ ಜೀವನಕ್ಕೂ ಎಷ್ಟು ವೈಷಮ್ಯ ! ಅವಳು ಸುತ್ತಿಕೊಂಡ ಸೀರೆ ಹತ್ತಾರು ಕಡೆ ಹರಿದಿತ್ತು. ತಲೆಯ ಮೇಲೆ ಇದ್ದ ಒಂದೆರಡು ಕೂದಲೂ ಒರಟಾಗಿದ್ದವು. ಯಾವನೋ ಒಬ್ಬ ದಯಾಳು ಕರುಣೆಗೊಂಡು ಅವಳಿಗೆ ಹಳೆಯ ಕೊಳಕು ಬಟ್ಟೆಯೊಂದನ್ನು ಕೊಟ್ಟಿದ್ದ. ಅದನ್ನೇ ಅವಳು ಉಟ್ಟುಕೊಂಡಿದ್ದಳು. ಅವಳ ದುರ್ಬಲವೂ ಸೌಂದರ್ಯಹೀನವೂ ಆದ ಶರೀರದಂತೆ ಅವಳು ಉಟ್ಟುಕೊಂಡ ಬಟ್ಟೆಯೂ ಕೊಳಕಾಗಿತ್ತಲ್ಲದೆ ತುಂಬ ಹರಿದಿದ್ದಿತು. ಆದರೆ ಅವಳ ವಯಸ್ಸಾದರೋ ಇನ್ನೂ ಮೂವತ್ತರ ಒಳಹೊರಗಿರಬಹುದು.

ವಿರಾಜಳಂತಹ ಸುಂದರ ಸ್ತ್ರೀಯನ್ನು ಕಾಣುವುದೇ ಅಪರೂಪವೆನ್ನುವ ದಿನವೊಂದಿತ್ತು. ಆದರೆ ದೇವರು ಅವಳ ಗತಕಾಲದ ಸ್ವತ್ತನ್ನು ಅಪಹರಿಸಿ, ಅವಳ ಅಂದ ಚಂದವನ್ನು ವಿದ್ರೂಪಗೊಳಿಸಿದ. ಅವಳೂ ತನ್ನ ಪೂರ್ವಸ್ಥಿತಿ ಯನ್ನು ಮರೆತಿದ್ದಳು. ಅವಳು ಮರೆಯದಿದ್ದದ್ದು ಎರಡು ಮಾತುಗಳನ್ನು ಮಾತ್ರ. ಕೈಯೊಡ್ಡುವುದೆಂದರೆ ಅವಳ ಪ್ರಾಣಕ್ಕೆ ಸಂಚಕಾರ ಬಂದಂತಾಗು

ತ್ತಿತ್ತು. ಜೀವನ ನಿರ್ವಹಣಕ್ಕಾಗಿ ಇತ್ತೀಚೆ ಭಿಕ್ಷಾಪಾತ್ರೆಯನ್ನು ಆಧಾರವಾಗಿ ಟ್ಟುಕೊಂಡಿದ್ದರೂ ಪಾತ್ರೆಯನ್ನು ಮುಂದೆ ಹಿಡಿಯುವಾಗ ಅವಳ ಗಂಟಲು ಕಟ್ಟಿದಂತಾಗಿ ಶಬ್ದಗಳು ಹೊರಬೀಳುತ್ತಿರಲಿಲ್ಲ. ಇದು ಮೊದಲನೆಯದು. ತಾನು ಬಹು ದೂರದೇಶಕ್ಕೆ ಹೋಗಿ ಸಾಯಬೇಕೆಂಬುದೇ ಎರಡನೆಯದು. ತನ್ನ ಸಮಾಧಿಯಾಗುವ ಸ್ಥಳ ಯಾವ ದೇಶದಲ್ಲಿದೆಯೆಂಬುದು ಅವಳಿಗೆ ಗೊತ್ತಿರಲಿಲ್ಲ. ಆದರೆ ತಾನು ನಿತ್ಯವೂ ಈ ಮಾರ್ಗಕ್ರಮಣಮಾಡುವುದು ಆ ಸ್ಥಾನವನ್ನು ಮುಟ್ಟುವುದಕ್ಕಾಗಿ ಎಂಬುದನ್ನು ಮಾತ್ರ ಅವಳು ಬಲ್ಲಳು. ತನ್ನ ಈ ಅವಸ್ಥೆಯನ್ನು ಗಂಡನ ಕಂಣಿಗೆಂದೂ ಬೀಳಗೊಡಬಾರದೆಂದು ಅವಳು ನಿರ್ಧರಿಸಿದ್ದಳು. ತಾನು ಎಂಥ ಅಪರಾಧವನ್ನೇ ಮಾಡಿರಲಿ; ಆದರೆ ಪತಿಯು ತನ್ನ ಈ ಅವಸ್ಥೆಯನ್ನು ಕಣ್ಣಾರೆ ಕಂಡರೆ ಅವನ ಹೃದಯ ಒಡೆದು ಹೋಗದಿರಲಾರದೆಂಬುದನ್ನು ಅವಳು ಒಂದು ಕ್ಷಣವೂ ಮರೆಯಲಿಲ್ಲ. ಆದುದರಿಂದಲೇ ಅವಳು ಸಾಧ್ಯವಿದ್ದಷ್ಟು ದೂರ ಹೊರಟುಹೋಗಲು ಯತ್ನಿಸುತ್ತಿದ್ದಳು.

ವಿರಾಜಳು ಹೀಗೆ ಒಂದು ವರ್ಷ ಮುಂದೆ ಮುಂದೆ ಸಾಗಿದಳು. ಆದರೆ ಅವಳು ಹೋಗಿ ಮುಟ್ಟುವ ಸ್ಥಾನವಾವುದು? ಲಜ್ಜಾಹತವಾದ ತನ್ನ ಈ ಕಾವೇರಿದ ತಲೆಯನ್ನು ಸುಖವಾಗಿ ಒರಗಿಸಿ ಕೊನೆಗೊಮ್ಮೆ ಈ ಅಪಮಾನಿತ ಜೀವನವನ್ನು ಮೌನವಾಗಿ ಮುಗಿಸುವ ಸ್ಥಳವಾವುದು? ಈ ಎರಡು ದಿನಗಳಿಂದ ಅವಳು ಒಂದು ಮರದಡಿಯಲ್ಲೇ ಬಿದ್ದಿದ್ದಳು. ಎದ್ದು ನಿಲ್ಲುವಷ್ಟು ಶಕ್ತಿಯೂ ಅವಳಿಗಿರಲಿಲ್ಲ. ಮೆಲ್ಲಮೆಲ್ಲನೆ ಕೆಮ್ಮು-ಜ್ವರಗಳೂ ಪುನಃ ಅವಳನ್ನು ಮುತ್ತಿಬಿಟ್ಟವು. ಅಲ್ಲದೆ ಎದೆಯಲ್ಲಿ ನೋವೂ ಪ್ರಾರಂಭವಾಯಿತು. ಮೊದಲಿನಿಂದಲೂ ಅವಳು ದುರ್ಬಲ ದೇಹಸ್ಥಿತಿಯವಳು. ಇಂಥ ದೈನ್ಯಾವಸ್ಥೆಯಲ್ಲೇ ಅವಳು ನದಿಯಲ್ಲಿ ಹಾರಿದಳು. ಆಗ ತಾಕಿದ ಪೆಟ್ಟಿನಿಂದ ನಿಶ್ಚೇತನಾವಸ್ಥೆಯಲ್ಲೇ ಆಸ್ಪತ್ರೆ ಸೇರಿದಳು. ಪೂರ್ಣ ಗುಣಮುಖಳಾಗುವ ಮೊದಲೇ ಆಸ್ಪತ್ರೆಯಿಂದ ಬಿಡುಗಡೆಯಾಯಿತು. ಜೊತೆಗೆ ದೂರ ಪ್ರವಾಸದ ವ್ರತವನ್ನು ಬೇರೆ ಕೈಕೊಂಡಳು. ಒಮ್ಮೊಮ್ಮೆ ಅರೆಹೊಟ್ಟೆ, ಒಮ್ಮೊಮ್ಮೆ ಬರಿಯ ನೀರಿನಿಂದ, ಒಮ್ಮೊಮ್ಮೆ ಉಪವಾಸದಿಂದಲೆ ತನ್ನ ದಿನಗಳನ್ನು ಸಾಗಿಸಿದ್ದಳು. ಆದರೂ ಅವಳು ತನ್ನ ಪಯಣವನ್ನು ನಿಲ್ಲಿಸಿರಲಿಲ್ಲ. ಈ ವರೆಗೂ ಅವಳಲ್ಲಿ ಸ್ವಲ್ಪ ಜಿಗುಟುತನವಿತ್ತು. ಅದರ ಬಲದಿಂದ ಈ ವರೆಗೆ ಎಲ್ಲ ಕಷ್ಟಗಳನ್ನೂ ಸಹಿಸಿದಳು. ಆದರೆ ಈಗ ಹೆಜ್ಜೆ ಇಡುವುದೂ ಅಸಾಧ್ಯವಾಯಿತು. ಇಂದು ಕಂಣು ಮುಚ್ಚಿ ಮಲಗಿಕೊಂಡಾಗ ಮನಸ್ಸಿನಲ್ಲಿ

—" ಈ ಗಿಡಪಡಿಯ ಭೂಮಿಯೇ ನನ್ನ ಸಮಾಧಿಸ್ಥಾನವೆ? ಇಷ್ಟು ದಿನಗಳ ವರೆಗೆ ಇಷ್ಟೊಂದು ದೇಶಕೋಶಗಳನ್ನು ಸುತ್ತಿದ್ದು ಈ ಸ್ಥಳ ಸೇರುವುದ ಕ್ಕಾಗಿಯೇ? ಇಷ್ಟು ದಿನಗಳಿಂದ ಕಾಲೆಳೆದು ಎಳೆದು ಸೋತು ಸುಂಣವಾದುದು ಇದೇ ತುಂಡುಭೂಮಿಗಾಗಿಯೆ? ಇನ್ನು ಪುನಃ ನಾನು ಏಳುವ ಆಸೆ ಇರಲಾರ ದಲ್ಲವೆ?" ಎಂದುಕೊಂಡಳು.

ಅಂತೂ ಹಗಲು ಕಳೆಯಿತು. ಮರಗಳ ತುಟ್ಟ ತುದಿಯ ಮೇಲೆ ಚಿನ್ನಾಟ ವಾಡುತ್ತಿದ್ದ ಸೂರ್ಯಾಸ್ತಸಮಯದ ಕಿರಣಗಳು ಅದೆಲ್ಲೋ ಮಾಯವಾದವು ಹಳ್ಳಿಯಲ್ಲಿ ಸಂಜೆಯ ಆರತಿಯ ಶಂಖದ ದನಿಯು ಗಾಳಿಯೊಂದಿಗೆ ಹರಿದು ಬಂದು ವಿರಾಜಳ ಕಿವಿಯಲ್ಲಿ ಇಳಿಯತೊಡಗಿತು. ತಟ್ಟನೇ, ಅವಳ ಮುಚ್ಚಿದ ಕಣ್ಣುಗಳೆದುರು ಅಪರಿಚಿತ ರಮಣಿಯರ ಶಾಂತವೂ ಮಂಗಲವೂ ಆದ ಮೂರ್ತಿಗಳು ಕಾಣತೊಡಗಿದವು. ಅವರೆಲ್ಲರೂ ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು. ಕೆಲವರು ದೀಪ ಹಚ್ಚುತ್ತಿದ್ದರು. ಕೆಲವರು ದೀಪವೆತ್ತಿಕೊಂಡು ಅತ್ತಿತ್ತ ಓಡಾಡುತ್ತಿದ್ದರು. ಕೆಲವರು ಕೊರಳಿಗೆ ಸೆರಗು ಸುತ್ತಿಕೊಂಡು ದೇವ ರಿಗೆ ನಮಸ್ಕರಿಸುತ್ತಿದ್ದರು. ಹಲವರು ತುಳಸೀಕಟ್ಟೆಯ ಮೇಲೆ ನೀಲಾಂಜನ ವನ್ನಿಟ್ಟು ದೇವಿಯ ಚರಣಗಳಲ್ಲಿ ತಮ್ಮ ಮನಸ್ಸಿನ ಬಯಕೆಗಳನ್ನು ನಿವೇದಿಸಿ ಕೊಳ್ಳುತ್ತಿದ್ದರು. ಇದೆಲ್ಲವನ್ನೂ ವಿರಾಜಳು ಕಣ್ಣಾರೆ ನೋಡತೊಡಗಿದಳು, ಕಿವಿ ಯಾರೆ ಕೇಳತೊಡಗಿದಳು. ಅನೇಕ ದಿನಗಳ ನಂತರ ಇಂದು ಅವಳ ಕಂಣಿನಲ್ಲಿ ನೀರು ಕದಡಿತು. ತಾನೂ ದೇವರೆದುರು ದೀಪವಿಟ್ಟು ಗಂಡನ ಮುಖವನ್ನು ಸ್ಮರಿಸಿ ಅವನ ಆಯುರಾರೋಗ್ಯ ಹೆಚ್ಚಲೆಂದು ಪ್ರಾರ್ಥಿಸಿಕೊಳ್ಳದೆ ಎಷ್ಟೋ ವರು ಷಗಳು ಸರಿದುಹೋದವೆಂದು ಅವಳಿಗೆನಿಸಿತು. ಈ ಎಲ್ಲ ಯೋಚನೆಗಳನ್ನು ಅವಳು ಯತ್ನಪೂರ್ವಕವಾಗಿ ತನ್ನ ಮನಸ್ಸಿನಿಂದ ದೂರವಿಡುತ್ತ ಬಂದಿದ್ದಳು. ಆದರೆ ಇಂದು ಆ ಪ್ರಯತ್ನದಲ್ಲಿ ಅವಳಿಗೆ ಗೆಲುವು ದೊರೆಯಲಿಲ್ಲ. ಶಂಖಧ್ವನಿ ಕೇಳಿ ಅವಳ ತೃಷಿತ ಮನವು ಒಂದು ಕ್ಷಣವೂ ತಡಮಾಡದೆ ಆ ಭಗಿನಿಯರ ಹೃದಯದಲ್ಲಿ ಸಮಾವೇಶವಾಯಿತು. ಅವಳ ಮಾನಸ ನೇತ್ರದೆದುರು ಮನೆ, ಬಾಗಿಲು, ಅಂಗಳ, ತುಳಸೀಕಟ್ಟೆ, ದೀಪ—ಎಲ್ಲವೂ ಏಕಾಕಾರವಾದವು. ಅವೆಲ್ಲವೂ ತನಗೆ ಸುಪರಿಚಿತವಾದುವೆಂದು ಅವಳಿಗೆ ಅನುಭವವಾಯಿತು. ಈ ಎಲ್ಲ ಕಾರ್ಯಗಳಲ್ಲಿಯೂ ತನ್ನ ಅಂಗವಿದ್ದೇ ಇದೆಯೆಂದು ಅವಳಿಗೆ ತೋರಿತು. ಇದರಿಂದ ಅವಳ ದುಃಖ ಶಮನವಾಯಿತು. ಅವಳ ಎಲ್ಲ ಆಸೆ-ಆಕಾಂಕ್ಷೆಗಳು

ಪೂರ್ತಿಯಾದವು; ದು:ಖ ಬವಣೆಗಳಿಂದ ಉಂಟಾದ ತಾಪವೂ ದೂರವಾಯಿತು. ಆ ಭಗಿನಿಯರಂತೆ ತಾನೂ ತನ್ಮಯಳಾದಳು. ಅಡುಗೆ ಮಾಡಲು ಅವರು ಅಡುಗೆಮನೆ ಸೇರಿದರು; ತಾನೂ ಅಡುಗೆಮನೆ ಸೇರಿದಳು. ಅಟ್ಟ ಬಳಿಕ ಅವರು ತಮ್ಮ ಪತಿರಾಯರಿಗೆ ಉಣಬಡಿಸಿದರು; ಅವಳೂ ಅದನ್ನೇ ಮಾಡ ತೊಡಗಿದಳು. ಮನೆಗೆಲಸಗಳನ್ನು ಮುಗಿಸಿದ ಬಳಿಕ ಅವರು, ನಿದ್ರಾಸಕ್ತರಾದ ತಮ್ಮ ಗಂಡನ ಹಾಸಿಗೆಯ ಬಳಿಗೆ ಹೋದರು. ಅವಳೂ ತನ್ನ ಗಂಡನ ಹಾಸಿ ಗೆಯ ಬಳಿ ಬಂದು ನಿಂತಳು. ಆಗ ಒಮ್ಮೆಲೇ ಅವಳಿಗೆ ನಡುಕ ಬಂದಿತು. ನಿಜವಾಗಿಯೂ ಇವರು ತನ್ನ ಯಜಮಾನರೇ ?— ಎಂದು ಅವಳಿಗೆನಿಸಿತು. ಅವಳು ರೆಪ್ಪೆ ಮಿಟುಕದೆ ನಿದ್ರಾಮಗ್ನನಾದ ಗಂಡನನ್ನು ನಿಟ್ಟಿಸುತ್ತಿದ್ದಂತೆಯೇ ರಾತ್ರಿಯನ್ನು ಕಳೆದಳು. ಮನೆಬಿಟ್ಟು ಹೊರಬಿದ್ದ ನಂತರ ಈ ವರೆಗೂ ಅವಳು ಗಂಡನ ಇಷ್ಟು ಹತ್ತಿರ ಕುಳಿತಿರಲಿಲ್ಲ.

ಅವಳು ಮನಸ್ಸಿನಲ್ಲೇ—“ನನ್ನ ಭಾಗ್ಯದಲ್ಲಿ ದೇವರು ಇವೆಂಥ ಸುಖಾನಂದ ವನ್ನು ಬರೆದಿಟ್ಟಿದ್ದಾನೆ! ಜಾಗರಣೆಯಲ್ಲಿ, ನಿದ್ದೆಯಲ್ಲಿ, ಅರೆನಿದ್ದೆಯಲ್ಲಿ ಗಾಢ ನಿದ್ದೆಯಲ್ಲಿ ಈ ಸುಖಾನುಭವ ಹೊಂದಿ ಅದೆಷ್ಟು ಆನಂದದಿಂದ ನನ್ನೀ ರಾತ್ರಿ ಕಳೆಯುತ್ತಿದೆ!” ಎಂದು ಯೋಚಿಸತೊಡಗಿದಳು.

ಕೊನೆಗೆ ಅವಳು ಚಂಚಲಚಿತ್ತಳಾಗಿ ಎದ್ದು ಕುಳಿತಳು. ಪೂರ್ವದಿಗಂ ತವು ಇನ್ನೂ ಪೂರ್ಣವಾಗಿ ಬೆಳ್ಳಗಾಗಿರಲಿಲ್ಲ. ಧೂಸರವರ್ಣದ ತಿಂಗಳ ಬೆಳಕು ಗಿಡಗಳ ತುಂಬ ಹೂವು ಅರಳಿದಂತೆ ಎಲೆಗಳ ಮಧ್ಯದಿಂದ ತೂರಿಕೊಂಡು ಸುತ್ತಲೂ ಹರಡಿತ್ತು. ಅವಳು ಮನಸ್ಸಿನಲ್ಲೇ—“ನಾನು ನಿಜವಾಗಿಯೂ ಪವಿತ್ರಳಲ್ಲದಿದ್ದರೆ ಅವರು ಇಂದು ನನಗೆ ದರ್ಶನವನ್ನೇಕೆ ಕೊಟ್ಟರು? ನನ್ನ ಪಾಪದ ಪ್ರಾಯಶ್ಚಿತ್ತವಾಯಿತೆಂದು ಸೂಚಿಸುವುದಕ್ಕಾಗಿಯೇ ನನ್ನ ಮಾನಸ ನೇತ್ರಗಳಿಗೆ ದರ್ಶನವಿತ್ತಿರಬೇಕಲ್ಲವೆ? ಹಾಗಾದರೆ ನಾನು ಒಂದು ಕ್ಷಣ ಸಹ ತಡಮಾಡಕೂಡದು” ಎಂದು ಯೋಚಿಸಿದಳು.

ಪ್ರಾತಃಕಾಲ ಯಾವಾಗ ಆಗುವುದೋ ಎಂದು ವಿರಾಜ್ ಕುತೂಹಲದಿಂದ ನಿರೀಕ್ಷಿಸತೊಡಗಿದಳು. ಈ ವರೆಗೂ ಅವಳ ಕಣ್ಣಿನ ಮೇಲೆ ಒಂದು ತೆರೆಯಿತ್ತು. ಇಂದು ಅದು ಹಾರಿಹೋಗಿ ಅವಳ ಹೃದಯವು ಆನಂದದಿಂದಲೂ ಮಾಧುರ್ಯ ದಿಂದಲೂ ತುಂಬಿ ತುಳುಕಿತು. ಅವಳು ಮನಸ್ಸಿನಲ್ಲೇ ಎಂದುಕೊಂಡಳು: “ನಮ್ಮಿಬ್ಬರ ಬೆಟ್ಟಿ ಇನ್ನು ಮುಂದೆ ಎಂದಾದರೂ ಘಟಿಸಲಿ, ಬಿಡಲಿ; ಆದರೆ

ನಾನು ಅವರನ್ನು ಬಿಟ್ಟು ಒಂದು ಕ್ಷಣವೂ ಇರಲಾರೆ. ಅವರ ಸಾನ್ನಿಧ್ಯ ಪಡೆಯಲು ನನಗೆ ಈ ಮಾರ್ಗವಿದ್ದಿದ್ದರೂ ನಾನು ಈವರೆಗೂ ವ್ಯರ್ಥವಾಗಿ ಅವರ ವಿಯೋಗದುಃಖವನ್ನು ಸಹಿಸುತ್ತಿದ್ದೆನಲ್ಲ !" ಇದನ್ನು ನೆನಿಸಿ ಅವಳಿಗೆ ದುಃಖ ಉಕ್ಕೇರಿ ಬಂತು. ತನ್ನ ಈ ಅಪರಾಧ ಅವಳ ಹೃದಯವನ್ನು ಶೂಲದಂತೆ ಇರಿಯತೊಡಗಿತು. ಪತಿದೇವನು ತನ್ನನ್ನು ಕರೆಯುತ್ತಿದ್ದಾನೆಂಬುದನ್ನು ಅವಳು ಅದೇಕೆ ಖಚಿತವಾಗಿ ನಂಬಿದಳೋ ದೇವರು ಬಲ್ಲ !

ಈ ದುಃಖ ಭರದಲ್ಲಿಯೂ ಅವಳ ಯೋಚನಾಧಾರೆ ಇನ್ನೂ ಮುಂದುವರಿಯಿತು–"ಅದೂ ಒಂದು ರೀತಿಯಾಗಿ ನಿಜವೆ ! ಅವರ ಅಪ್ಪಣೆಯಿಲ್ಲದೆ ಈ ನನ್ನ ದೇಹವನ್ನು ಹಾಳುಮಾಡಲು ನಿಜವಾಗಿ ಇದು ನನ್ನದೇ? ನಾನು ತಪ್ಪಿತಸ್ಥಳೋ ಅಲ್ಲವೋ ಎಂದು ನಿರ್ಣಯಿಸುವ ಅಧಿಕಾರ ನನಗಿಲ್ಲ; ಆ ಅಧಿಕಾರವಿರುವುದು ಅವರಿಗೊಬ್ಬರಿಗೆ ಮಾತ್ರ. ಅದಕ್ಕೆ ಯೋಗ್ಯ ಶಾಸನ ಮಾಡುವವರೂ ಅವರೇ. ನಡೆದ ಸಂಗತಿಯನ್ನೆಲ್ಲ ಅವರ ಚರಣಾರವಿಂದದಲ್ಲಿ ನಿವೇದಿಸಿ ನಾನು ನಿಶ್ಚಿಂತಳಾಗುತ್ತೇನೆ."

ಹೀಗೆ ಯೋಚಿಸಿ ವಿರಾಜಳು ಮನೆಯ ಕಡೆಗೆ ಮುಖವನ್ನು ತಿರುಗಿಸಿದಳು. ಇಂದು ಅವಳ ಶರೀರ ಅತ್ಯಂತ ದುರ್ಬಲವಾಗಿತ್ತು. ಮುಂದಡಿಯಿಡುತ್ತಿರುವಾಗ ಅವಳ ಪಾದಕ್ಕೆ ಭೂಮಿ ಬಹು ಬಿರುಸಾಗಿದೆಯೆನಿಸುತ್ತಿತ್ತು. ಈ ದಿನ ಅವಳಿಗೆ ಗ್ಲಾನಿಯು ಎಷ್ಟೂ ಇರಲಿಲ್ಲ. ಅವಳಿಗೊಂದೇ ಯೋಚನೆ–"ನಾನೆಂಥ ಭಯಂಕರ ತಪ್ಪು ಮಾಡಿದೆ ! ಇದೆಂಥ ಅಹಂಕಾರ ನನ್ನಲ್ಲಿ ಮನೆಮಾಡಿತ್ತು ! ನನ್ನ ಈ ಅಸಹ್ಯವಾದ, ನಾಚಿಕೆಗೆಟ್ಟ ಮುಖವನ್ನು ಈ ಪ್ರಪಂಚದೆದುರು ಪ್ರದರ್ಶಿಸುವಾಗ ನನಗೆ ಎಳ್ಳಷ್ಟೂ ನಾಚಿಕೆಯಾಗಲಿಲ್ಲ ! ನನ್ನ ಗುಣ ದೋಷಗಳನ್ನೆಲ್ಲ ಪತಿಗೆ ನಿವೇದಿಸುವ ಅಧಿಕಾರವನ್ನು ನಾನು ಒಂಬತ್ತು ವರುಷದವಳಿರುವಾಗಲೇ, ಸ್ವತಃ ಭಗವಂತನೇ ನನಗೆ ಕೊಟ್ಟಿದ್ದ. ಆದರೆ ಅವರೆದುರಿಗೆ ಮಾತ್ರ ನಾನು ನಾಚಿಕೊಂಡೆನಲ್ಲ !"

## ೧೭

ಅಣ್ಣನಿಗೆ ಹರಿಮತಿಯು ಕೊಂಚವೂ ಬಿಡುವೆಂಬುದನ್ನೇ ಕೊಡುತ್ತಿದ್ದಿಲ್ಲ. ದುರ್ಗಾಪೂಜೆಯಲ್ಲಿ ತವರುಮನೆಗೆ ಹೊರಟಂದಿನಿಂದ ಪುಷ್ಯ ಮಾಸದ

ಸಂಕ್ರಾಂತಿಯ ವರೆಗೂ ಒಂದೂರಿನಿಂದ ಮತ್ತೊಂದೂರಿಗೆ, ಒಂದು ತೀರ್ಥ ಸ್ಥಳದಿಂದ ಮತ್ತೊಂದಕ್ಕೆ ಬಿಟ್ಟೂಬಿಡದೆ ಅವನನ್ನು ಸುತ್ತಿಸಿದಳು. ಅವಳಿಗೆ ಆಗ ಜೌವನ. ಜೊತೆಗೆ ಆರೋಗ್ಯಕರವಾದ ಸದೃಢ ದೇಹ. ಅಲ್ಲದೆ ಹೊಸ ಹುರುಪು ಬೇರೆ. ಅವಳಂತೆ ವೇಗವಾಗಿ ಊರಿಂದೂರಿಗೆ ಅಲೆಯುವುದು ನೀಲಾಂಬರನ ಶಕ್ತಿಗೆ ಮೀರಿದ್ದು. ಆತ ಆಯಾಸದಿಂದ ಸೋತುಹೋಗಿದ್ದ. ಎಲ್ಲಿಯಾದರೂ ಸ್ವಸ್ಥವಾಗಿ ಕುಳಿತು ಒಂದಿಷ್ಟು ವಿಶ್ರಾಂತಿ ಪಡೆಯುವ ಇಚ್ಛೆಯೂ ಅವನಿಗಿರಲಿಲ್ಲ. ದೇಹದ ಅಣು ಅಣುವೂ ಮನೆಯ ಕಡೆಗೆ ಆಕರ್ಷಿಸಲ್ಪಡುತ್ತಿದ್ದುದರಿಂದ ಊರನ್ನು ಯಾವಾಗ ಕಂಡೇನೆಂದು ಅವನು ತವಕಪಡುತಿದ್ದ. ಆ ಆತುರತೆ ಅವನ ಮನಸ್ಸಿನಲ್ಲಿ ರಾತ್ರಂದಿನ ತೋರುತ್ತಿದ್ದರೂ ಅದರ ಮೂಲ ಕಾರಣ ಅವನ ಬುದ್ಧಿಗೂ ಹೊಳೆಯಲಿಲ್ಲ. ಊರಲ್ಲಾದರೂ ಅಂಥದೇನಿದೆ ? ಇಂಥ ಆರೋಗ್ಯಕರವಾದ ಊರಲ್ಲಿಯೂ ಅವನ ಮನಸ್ಸೇಕೆ ಚಂಚಲವಾಗುತ್ತಿದೆ? ಮೋಹಿನಿ ಹರಿಮತಿಗೆ ಆಗಾಗ ಕಾಗದ ಬರೆಯುತ್ತಿದ್ದರೂ ಅದರಲ್ಲಿ ಹೇಳಿಕೊಳ್ಳುವಂತಹದೇನೂ ಇರುತ್ತಿದ್ದಿಲ್ಲ. ಆದರೂ ಆ ಹಾಳೂರೇ ಅವನ ಮನಸ್ಸನ್ನು ನಿರಂತರವೂ ಆಕರ್ಷಿಸುತ್ತಿದೆಯಲ್ಲ ! ಮೊದಲಿಗೇ ಕೊರಗಿ ಕೃಶವಾದ ಅವನ ದೇಹ ಮನೆಯ ಗೀಳಿನಿಂದ ಮತ್ತಿಷ್ಟು ಬಡವಾಯಿತು.

ಹರಿಮತಿಗೆ ಒಂದೇ ಯೋಚನೆ–ಅಣ್ಣನು ಹಿಂದಿನ ಹಳೆಯ ಚಿಂತೆಯನ್ನೆಲ್ಲ ಮರೆತು ಪುನಃ ಮೊದಲಿನಂತೆ ನಿಶ್ಚಿಂತೆಯಿಂದಿರಬೇಕು ; ಸದಾ ಮಿನುಗುವ ಮುಗುಳು ನಗೆ ಅವನ ತುಟಿಯ ಮೇಲೆ ಪುನಃ ಸುಳಿಯಬೇಕು; ಅವನ ಬಾಯಿಯಲ್ಲಿ ಹಾಡು ಸದಾ ಗುಣುಗುಟ್ಟುತ್ತಿರಬೇಕು. ಅವನ ಕಂಠದಲ್ಲಿ ನಗುವು ಮೊದಲಿನಂತೆ ತುಂಬಿಬರಬೇಕು. ಹಾಗೂ ಆ ಗೆಲುನಗೆ ಅಕಾರಣವಾಗಿ ಅವನ ಮುಖದಿಂದ ಹರಿದು ಹೊರಗೆ ಬರಬೇಕು ! ಆದರೆ ತನ್ನ ಈ ಎಲ್ಲ ಆಸೆಗಳನ್ನು ನಿಷ್ಫಲಗೊಳಿಸಲು ಅಣ್ಣನು ಬದ್ಧಕಂಕಣನಾಗಿದ್ದಾನೆಂದು ಅವಳಿಗೆ ತೋರಿತು.

ಹೀಗಾಗಬಹುದೆಂದು ಮೊದಲು ಅವಳು ಭಾವಿಸಿರಲಿಲ್ಲ. ಎರಡು ದಿನ ಕಳೆದ ಮೇಲೆ, ಎಲ್ಲ ತಾನೇ ಸರಿಹೋದೀತೆಂದು ಬಗೆದಿದ್ದಳು. ಆದರೆ ಎರಡೆರಡು ದಿನಗಳೆಂದು ನಾಲ್ಕೈದು ತಿಂಗಳುಗಳುರುಳಿದರೂ ನೀಲಾಂಬರನಲ್ಲಿ ಯಾವ ಮಾರ್ಪಾಟೂ ಕಾಣಬರಲಿಲ್ಲ. ಇದರಿಂದ ಅವಳ ಚಿಂತೆಗೆ ಮೇರೆಯೇ ಉಳಿಯಲಿಲ್ಲ.

ತೀರ್ಥಯಾತ್ರೆಗೆ ಹೊರಡುವ ದಿನ ಮೋಹಿನಿ ಆಡಿದ ಮಾತು ಕೇಳಿ, ವಿರಾಜಳ ಬಗೆಗೆ ನೀಲಾಂಬರನಲ್ಲಿ ಕರುಣೆಯ ಸೆಲೆ ಉಕ್ಕೇರಿತ್ತು. ಅವನು ಮೋಹಿನಿಯ ಎಲ್ಲ ಮಾತುಗಳನ್ನೂ ನಂಬಿದ. ಈ ಕಾರಣದಿಂದಲೆ, ಅಣ್ಣನು ಗುಣಮುಖನಾದ ಬಳಿಕ ಚಿಕ್ಕಂದಿನ ಮಾತುಗಳನ್ನೆಲ್ಲ ಸ್ಮರಿಸಿ ಅತ್ತಿಗೆಯನ್ನು ಮನಸ್ಸಿನಲ್ಲೇ ಕ್ಷಮಿಸಿಬಿಡಬಹುದೆಂದು ಹರಿಮತಿ ಆಸೆ ತಳೆದಿದ್ದಳು. ಅವಳಿಗಿನ್ನೊಂದು ಆಸೆ: ಅಣ್ಣನೆದುರು ಅತ್ತಿಗೆಯ ಮಧುರವಾದ ಸನ್ನಿವೇಶಗಳ ಪ್ರಸ್ತಾಪವನ್ನೆತ್ತಿ ಅವನೆದೆಯಲ್ಲಿ ಅವಳ ಬಗೆಗೆ ಕ್ಷಮಾಭಾವನೆಯನ್ನು ಉದ್ದೀಪಿಸಬೇಕು ಎಂದು. ಆದರೆ ಅಂತಹ ಅನುಕೂಲ ಸಂದರ್ಭಗಳೇ ಒದಗಿಬರಲಿಲ್ಲವೆಂದು ಆಕೆ ಕಳವಳಗೊಂಡಳು. ಇತ್ತ ಅವಳ ಅಣ್ಣನಲ್ಲಿಯೂ ಯಾವ ಸುಧಾರಣೆಯೂ ಕಾಣಲಿಲ್ಲ.

ಸ್ತ್ರೀಯು ಜೀವನದಲ್ಲಿ ಬೇಸರಗೊಂಡು ತನ್ನ ಗಂಡನನ್ನು ಅತ್ಯಂತ ಘೋರ ಸಂಕಟಕ್ಕೆ ಈಡುಮಾಡಿ ದೂರ ಸರಿಯುವಂತಹ ಕಾರಣವಾಗಲಿ ದುಃಖವಾಗಲಿ ಎಂತಹದಿದ್ದೀತೆಂಬ ಕಲ್ಪನೆಯೂ ಹರಿಮತಿಗೆ ಹೊಳೆಯಲಿಲ್ಲ; ಅತ್ತಿಗೆ ಒಳ್ಳೆಯವಳೆ, ಕೆಟ್ಟವಳೆ ?– ಎಂಬುದು ಅವಳಿಗೆ ದೊಡ್ಡ ಮಾತಾಗಿರಲಿಲ್ಲ. ಆದರೆ ಅವಳು ಗಂಡನನ್ನು ಬಿಟ್ಟುಹೋದುದು ಹರಿಮತಿಯ ಕಣ್ಣಿನಲ್ಲಿ ಮಹಾಪರಾಧವಾಗಿತ್ತು. ಆ ಬಗೆಗೆ ಅವಳು ಅತ್ತಿಗೆಯ ಮೇಲೆ ಕೆಂಡಕಾರುತ್ತಿದ್ದಳು. ಆದರೆ ಅದೇ ದುರ್ದೈವೀ ಅತ್ತಿಗೆಯ ವಿಯೋಗವ್ಯಥೆಯಲ್ಲಿಯೇ ಅಣ್ಣನು ಮುಳುಗಿರುವುದನ್ನು ಕಂಡು ಅವಳಿಗೆ ಅವನ ಮೇಲೂ ಕೋಪ.

ಒಂದು ದಿನ ಬೆಳಿಗ್ಗೆ ಹರಿಮತಿ ಮುಖ ದಪ್ಪಮಾಡಿಕೊಂಡು ಬಂದು– "ಅಣ್ಣಾ, ನಾವಿನ್ನು ಮನೆಗೆ ಹಿಂದಿರುಗಬಹುದಲ್ಲ!" ಎಂದಳು.

ನೀಲಾಂಬರ ಸ್ವಲ್ಪ ಅಚ್ಚರಿಪಟ್ಟು ತಂಗಿಯ ಮುಖವನ್ನೇ ನೋಡತೊಡಗಿದ. ಮಾಘ ಮಾಸ ಮುಗಿಯುವ ವರೆಗೆ ಪ್ರಯಾಗದಲ್ಲಿಯೇ ಉಳಿಯಬೇಕೆಂದು ಮೊದಲೇ ನಿಶ್ಚಿತವಾಗಿತ್ತು.

ಅಣ್ಣನ ಮನಸ್ಸಿನ ಇಂಗಿತವನ್ನರಿತು ಹರಿಮತಿ :– "ನಾನಿನ್ನು ಒಂದು ದಿನವೂ ಇಲ್ಲಿ ಇರಲಾರೆ. ನಾವು ನಾಳೆಯೇ ಹೊರಡಬೇಕು" ಎಂದಳು.

ಹರಿಮತಿಗೆ ಕೋಪ ಬಂದಿದೆ ಎಂಬುದಾಗಿ ನೀಲಾಂಬರನಿಗೆ ಗೊತ್ತಾಯಿತು. ಅವಳನ್ನು ಶಾಂತಪಡಿಸಲು ದೀನವಾಣಿಯಿಂದ ಅವನೆಂದ: "ಏಕಮ್ಮ, ಮನೆಗೆ ಈಗಲೇ ಮರಳಬೇಕಾದ ಆವಶ್ಯಕತೆ ಏನು?"

ಹರಿಮತಿ ಯತ್ನಪೂರ್ವಕವಾಗಿ ಕಂಬನಿ ತಡೆಹಿಡಿದಿದ್ದಳು. ಈಗ ಅವಳಿಗೆ ಕಣ್ಣೀರಿನ ಕೋಡಿ ಹರಿದುಬಂದಿತು. ಅವಳು ಗದ್ಗದ ಕಂಠದಿಂದ– "ಇಲ್ಲಿ ಉಳಿಯುವುದರಿಂದೇನು ಲಾಭವಣ್ಣಾ? ನಿನ್ನ ಮನಸ್ಸೂ ಇಲ್ಲಿ ನಿಲ್ಲುವಂತೆ ತೋರಲಿಲ್ಲ; ಮನೆ ಸೇರಬೇಕೆಂದು ತವಕಪಡುತ್ತಿದೆ. ಆ ಬವಣೆಯಿಂದ ನೀನು ದಿನ ದಿನಕ್ಕೆ ಬಡವಾಗುತ್ತಿರುವೆ. ನಾನಿನ್ನು ಯಾವ ಕಾರಣದಿಂದಲೂ ಇಲ್ಲಿ ನಿಲ್ಲಲಾರೆ, ಒಂದು ದಿನವೂ ನಿಲ್ಲಲಾರೆ" ಎಂದಳು.

ನೀಲಾಂಬರನು ಸ್ನೇಹಪೂರ್ವಕವಾಗಿ ಹರಿಮತಿಯ ಕೈಹಿಡಿದು ತನ್ನ ಬಳಿ ಕುಳ್ಳಿರಿಸಿ– "ಮನೆಗೆ ಹಿಂದಿರುಗುವುದರಿಂದ ನನಗೆ ಸಮಾಧಾನವಾಗುವುದೆಂದು ಬಗೆದಿರುವೆಯಾ ತಂಗಿ? ಈ ನನ್ನ ದೇಹ ಪೂರ್ವಸ್ಥಿತಿಗೆ ಬಂದೀತೆಂಬ ನಂಬಿಗೆ ನನಗೇ ಇಲ್ಲಮ್ಮ! ಮನೆಗೆ ತೆರಳುವುದೇ ನಿನ್ನ ಇಚ್ಛೆಯಾಗಿದ್ದರೆ ಅದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಆಗುವುದೆಲ್ಲ ಮನೆ ತಲ್ಪಿದ ಬಳಿಕವೇ ಆಗಲಿ" ಎಂದ.

ಅಣ್ಣನ ಮಾತು ಕೇಳಿ ಅವಳು ಗಟ್ಟಿಯಾಗಿ ಅಳತೊಡಗಿದಳು. ಅಳುತ್ತಾ ಅಳುತ್ತಾ – "ಅಣ್ಣಾ, ನೀನೇಕೆ ಅತ್ತಿಗೆಯ ಯೋಚನೆಯಲ್ಲೇ ಮುಳುಗಿರುವೆ? ಚಿಂತಿಸಿ ಚಿಂತಿಸಿಯೆ ನಿನ್ನ ಪಾಡು ಹೀಗಾಯಿತು" ಎಂದಳು.

"ನಾನು ಅವಳ ಚಿಂತೆಯಲ್ಲೇ ಮುಳುಗಿರುವೆನೆಂದು ನಿನಗೆ ಯಾರು ಹೇಳಿದರಮ್ಮಾ?"

ಅವಳು ಅಷ್ಟೇ ನೆಡವಿನಿಂದ– "ಯಾರೇಕೆ ಹೇಳಬೇಕು? ನನಗೇ ಗೊತ್ತಾಗುವುದಿಲ್ಲವೆ?" ಎಂದಳು.

"ನೀನೂ ಅವಳನ್ನು ಸ್ಮರಿಸುತ್ತಿಲ್ಲವೆ?"

ಹರಿಮತಿ ಕಣ್ಣನ್ನೊರಸಿಕೊಂಡು ರುಷ್ಟಸ್ವರದಿಂದ– "ಇಲ್ಲ, ನಾನೆಂದಿಗೂ ಸ್ಮರಿಸುವುದಿಲ್ಲ. ಅವಳ ಸ್ಮರಣಮಾತ್ರದಿಂದಲೆ ಪಾಪ ತಟ್ಟುವುದು" ಎಂದಳು.

ನೀಲಾಂಬರ ತಬ್ಬಿಬ್ಬಾಗಿ– "ಏನೆಂದೆ?" ಎಂದ.

"ಅದರಿಂದ ಪಾಪ ತಟ್ಟುವುದಿಷ್ಟೇ ಅಲ್ಲ– ಅವಳ ಹೆಸರು ಉಚ್ಚರಿಸುವುದರಿಂದ ಬಾಯಿಯೂ ಅಶುದ್ಧವಾಗುವುದು; ಅದೇಕೆ, ಸ್ನಾನವನ್ನೂ ಮಾಡಬೇಕಾಗುವುದು" ಎನ್ನುತ್ತ ಅವಳು ಅಣ್ಣನೆಡೆಗೆ ನೋಡಿದಳು. ಆಗ ಅವನ ಕಣ್ಣಲ್ಲಿ ಸ್ನೇಹಭರಿತ ಕೋಮಲ ದೃಷ್ಟಿ ಮಾಯವಾಗಿತ್ತು. ಅವನು ತಂಗಿಯ ಮುಖವನ್ನು ನೋಡುತ್ತ ಗಡಚುದನಿಯಿಂದ– "ಪುಟ್ಟೀ!" ಎಂದು ಚೀರಿದ.

ಅಣ್ಣನ ಈ ವಿಚಿತ್ರ ವರ್ತನೆಯಿಂದ ಹರಿಮತಿ ಭೂಮಿಗೆ ಇಳಿದು ಹೋದಳು. ಅವಳು ಅಣ್ಣನ ಮುದ್ದಿನ ತಂಗಿಯಾಗಿದ್ದಳು. ಚಿಕ್ಕಂದಿನಲ್ಲಿ ಸಾವಿರ ತಪ್ಪು ಮಾಡಿದಾಗಲೂ ಅಣ್ಣನ ಇಂಥ ಬಿರುನೋಟವನ್ನು ಅವಳು ಕಂಡಿರಲಿಲ್ಲ; ಇಂಥ ಕರ್ಕಶ ದನಿಯ ಪರಿಚಯವೂ ಆಗಿರಲಿಲ್ಲ. ಇಂದು ದೊಡ್ಡವಳಾಗಿದ್ದರೂ ಅಣ್ಣನಿಂದ ಬೈಸಿಕೊಂಡು ಲಜ್ಜೆ ತಿರಸ್ಕಾರಗಳಿಂದ ಅವಳ ಮುಖ ಕೆಳಗಾಯಿತು. ಅವಳು ಹೆಚ್ಚು ಮಾತನಾಡದೆ ಅಲ್ಲಿಂದ ಓಡಿಹೋಗಿ ಸೆರಗಿನಿಂದ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮಧ್ಯಾಹ್ನದ ಊಟದ ಹೊತ್ತಿಗೂ ಅವಳು ಅಣ್ಣನ ಹತ್ತಿರ ಬರಲಿಲ್ಲ. ಸಾಯಂಕಾಲವೂ ಬಡಿಸಿದ ತಟ್ಟೆಯನ್ನು ಕೆಲಸದವಳ ಮೂಲಕ ಅಣ್ಣನಿಗೆ ಕಳಿಸಿ ಮರೆಯಲ್ಲೇ ಕುಳಿತಳು.

ನೀಲಾಂಬರನು ಕೂಡ ಹರಿಮತಿಯನ್ನು ಕರೆಯಲೂ ಇಲ್ಲ, ಮಾತನಾಡಿಸಲೂ ಇಲ್ಲ.

ಮಧ್ಯಾಹ್ನದ ಸಮಯ. ನೀಲಾಂಬರ ಸಂಧ್ಯಾಹ್ನಿಕವನ್ನು ಮುಗಿಸಿ ಅದೇ ಆಗ ಆಸನದ ಮೇಲೆ ಸುಮ್ಮನೆ ಕುಳಿತಿದ್ದ. ಹರಿಮತಿ ಸದ್ದಿಲ್ಲದೆ ಕೋಣೆಯನ್ನು ಹೊಕ್ಕು ಅಣ್ಣನ ಹಿಂದೆ ಮೊಣಕಾಲೂರಿ ಕುಳಿತಳು. ಸ್ವಲ್ಪ ಸಮಯ ತಡೆದು ಅಣ್ಣನ ಬೆನ್ನಿನಲ್ಲಿ ತನ್ನ ಮುಖ ಹುದುಗಿಸಿಕೊಂಡಳು. ದೂರು ಹೇಳುವಾಗ ಇಲ್ಲವೆ ಮೊರೆಹೊಗುವಾಗ ಅವಳು ಹೀಗೆ ಮಾಡುವ ವಾಡಿಕೆ. ಚಿಕ್ಕಂದಿನಲ್ಲಿ ತನ್ನ ತಪ್ಪಿಗಾಗಿ ಅತ್ತಿಗೆಯಿಂದ ಪೆಟ್ಟುತಿಂದಾಗ ಅಣ್ಣನ ಹತ್ತಿರ ಬಂದು ಈ ರೀತಿ ಮುಖ ಮರೆಸಿ ಕುಳಿತು ದೂರುಹೇಳುತ್ತಿದ್ದಳು. ನೀಲಾಂಬರನಿಗೆ ಅವಳ ಈ ವರ್ತನೆಯ ಅರ್ಥವಾಯಿತು. ಅವನ ಕಣ್ಣುಗಳಲ್ಲಿ ನೀರು ತುಂಬಿತು. ತಂಗಿಯ ತಲೆಯ ಮೇಲೆ ಕೈಯನ್ನಿಟ್ಟು ಕೋಮಲ ಸ್ವರದಿಂದ– "ಏನಮ್ಮ!" ಎಂದ.

ಹರಿಮತಿ ಮುಂದೆ ಬಂದು ಅಣ್ಣನ ತೊಡೆಯಲ್ಲಿ ಮುಖ ಹುದುಗಿಸಿ ಬೋರಲು ಬಿದ್ದು ಅಳತೊಡಗಿದಳು. ಅವಳ ತಲೆಯ ಮೇಲೆ ಕೈಯನ್ನಿಟ್ಟು ನೀಲಾಂಬರ ಸುಮ್ಮನೆ ಕುಳಿತ. ಹರಿಮತಿ ಬಹಳ ಹೊತ್ತು ತಡೆದು ಗದ್ಗದ ಕಂಠದಿಂದ– "ಇನ್ನೆಂದಿಗೂ ಹಾಗೆ ಹೇಳುವುದಿಲ್ಲವಣ್ಣಾ" ಎಂದಳು.

ಅವಳ ತಲೆಯನ್ನು ನೇವರಿಸುತ್ತ ನೀಲಾಂಬರ– "ಆಗಲಿ, ಇನ್ನೆಂದಿಗೂ ಅಂಥ ಮಾತುಗಳನ್ನಾಡಬೇಡ" ಎಂದು ಸಮಾಧಾನಪಡಿಸಿದ.

ಹರಿಮತಿ ಮೌನವಾಗಿ ಹಾಗೆಯೇ ಬಿದ್ದಿದ್ದಳು. ಅವಳ ಮನದಿಂಗಿತವ ನ್ನರಿತು ಮೃದು ದನಿಯಿಂದ ನೀಲಾಂಬರ– " ಅವಳು ನಿನಗೆ ಹಿರಿಯಳಮ್ಮ. ಅವಳು ನಿನ್ನ ಅತ್ತಿಗೆಯಷ್ಟೇ ಅಲ್ಲ; ನಿನಗೆ ಮಾತೃಸ್ವರೂಪಳು. ಅವಳು ನಿನ್ನನ್ನು ತಾಯಿಯಂತೆ ಸಲಹಿ ಮನುಷ್ಯಳನ್ನಾಗಿ ಮಾಡಿದ್ದಾಳೆ. ಅವಳ ವಿಷಯವಾಗಿ ಬೇರೆಯವರು ಏನೇ ಆಡಿಕೊಳ್ಳಲೊಲ್ಲರೇಕೆ, ನಿನ್ನ ಬಾಯಿಂದ ಇಂಥ ಮಾತು ಹೊರಟರೆ ಅದು ಅಕ್ಷಮ್ಯ ಅಪರಾಧವೇ ಸೈ " ಎಂದ.

ಹರಿಮತಿ ಕಂಣುಜ್ಜಿಕೊಳ್ಳುತ್ತ ಎಂದಳು : "ಅವಳು ನಮ್ಮನ್ನೆಲ್ಲ ತೊರೆದು ಹೋದಳೇಕೆ ಅಂಣ ?"

" ಅದರ ಕಾರಣವನ್ನು ನಾನು ಬಲ್ಲೆ, ಆ ಅಂತರ್ಯಾಮಿಯೂ ಬಲ್ಲ. ತಾನೇಕೆ ಹಾಗೆ ಮಾಡಿದಳೆಂಬ ಕಾರಣ ಸ್ವತಃ ಅವಳಿಗೂ ತಿಳಿಯದು. ಆಗ ಅವಳು ಹುಚ್ಚಿಯಾಗಿದ್ದಳು. ಸ್ವಲ್ಪವಾದರೂ ಪ್ರಜ್ಞೆಯಿದ್ದಿದ್ದರೆ, ಅವಳು ಆತ್ಮ ಹತ್ಯೆ ಮಾಡಿಕೊಳ್ಳುತ್ತಿದ್ದಳಲ್ಲದೆ ಅಂಥ ಕೆಲಸವನ್ನೆಂದಿಗೂ ಮಾಡುತ್ತಿರಲಿಲ್ಲ. "

ಹರಿಮತಿ ಪುನಃ ಕಂಣೊರಸಿಕೊಂಡು ಕಟ್ಟಿದ ಕಂಠದಿಂದ– " ಆದರೆ. . . ಈಗ. . .ಈಗೇಕೆ ಅವಳು ಮರಳಿ ಬರುವುದಿಲ್ಲವಂಣಾ ? " ಎಂದಳು.

" ಏಕೆಂದು ಕೇಳುವೆಯಾ ತಂಗಿ? ಮರಳಿ ಬರಲು ಅವಳಿಗೆ ದಾರಿಯೇ ಉಳಿದಿಲ್ಲ. ಆದುದರಿಂದಲೇ ಬರುವುದಿಲ್ಲ " ಎಂದು ನೀಲಾಂಬರ ಅತಿ ಪ್ರಯಾಸದಿಂದ ಸಾವರಿಸಿಕೊಂಡ. ಕ್ಷಣ ಹೊತ್ತು ಬಿಟ್ಟು – " ಮನೆ ಬಿಟ್ಟು ಹೋದಾಗಿನ ಅವಸ್ಥೆಯಲ್ಲಿ, ಮರಳಿ ಬರಲು ಇಂಬು ಇದ್ದಿದ್ದರೆ, ಅವಳು ಖಂಡಿತವಾಗಿ ಮರಳಿ ಬರುತ್ತಿದ್ದಳು; ಒಂದು ಕ್ಷಣವೂ ಎಲ್ಲಿಯೂ ನಿಲ್ಲು ತ್ತಿದ್ದಿಲ್ಲ " ಎಂದ.

ಮುಖವನ್ನೆತ್ತದೆಯೆ ತಲೆಯಲ್ಲಾಡಿಸುತ್ತ ಹರಿಮತಿಯೆಂದಳು–"ಬಹುಶಃ ಅವಳು. . ."

ನೀಲಾಂಬರ ಉತ್ತೇಜಿತನಾಗಿ–" ಅದು ನಿಜವಮ್ಮ. ಮನೆಗೆ ಮರಳಿ ಬರಲು ಅವಳಿಗೆ ಮನಸ್ಸೇನೋ ಇದೆ. ಆದರೆ ಪರಿಸ್ಥಿತಿ ವಿಪರೀತವಾಗಿದೆ. ಇಂಥ ಪೇಚಾಟ ನಿಜವಾಗಿಯೂ ಒಂದು ಕಠಿಣ ಶಿಕ್ಷೆಯೆಂದು ನಿನಗೆ ಗೊತ್ತಾ ಗಲಿಕ್ಕಿಲ್ಲ. ಆದರೆ ಕಂಣುಮುಚ್ಚಿದಾಗಲೆಲ್ಲಾ ನನಗೆ ಆ ತಾಪದ ಅನುಭವ ವಾಗುವುದು. ಈ ಕಾರಣದಿಂದಲೇ ನನ್ನ ಈ ಮೈಯು ದಿನದಿನಕ್ಕೆ ಬಡವಾಗು ತ್ತಿದೆ. ಇದೊಂದೇ ಚಿಂತೆ ನನಗೆ " ಎಂದ.

ಹರಿಮತಿ ಅಳತೊಡಗಿದಳು.

ಆಗ ಕ್ಷೀಣಿಯಿಂದ ಕಂಬನಿಗಳನ್ನೊರಸಿಕೊಂಡು ನೀಲಾಂಬರನೆಂದ: "ಅವಳು ಯಾವಾಗಲೂ ನನಗೆ ಹೇಳುತಿದ್ದಳು–ನನ್ನ ತೊಡೆಯ ಮೇಲೆ ತಲೆಯಿಟ್ಟೇ ತಾನು ಪ್ರಾಣ ಬಿಡಬೇಕು. ಸೀತೆ ಸಾವಿತ್ರಿಯರಂತೆ ತಾನಾಗಬೇಕು ತನ್ನ ಮರಣಾನಂತರ ನನ್ನ ಹತ್ತಿರವೇ ತನಗೆ ಸ್ಥಾನ ದೊರೆಯಬೇಕು– ಎಂದು. ಇವೇ ಅವಳ ಹಿರಿಯಾಸೆಗಳು. ಆದರೆ ಪಾಪ, ಅವಳ ಆಸೆಗಳೆಲ್ಲಾ ಇದ್ದಕ್ಕಿದ್ದಂತೆಯೇ ಕಮರಿಬಿಟ್ಟವು."

ಹರಿಮತಿ ಸುಮ್ಮನೆ ಕೇಳುತ್ತಿದ್ದಳು.

ನೀಲಾಂಬರನು ತನ್ನ ಕಟ್ಟಿದ ಕಂಠವನ್ನು ಸರಿಪಡಿಸಿಕೊಂಡು ಹೇಳಿದ: "ಅವಳು ಅಪರಾಧಿನಿಯೆಂದು ನೀವೆಲ್ಲರೂ ನಂಬಿದ್ದೀರಿ. ಆದರೆ ಅದನ್ನು ವಿರೋಧಿಸುವಷ್ಟು ಬಲ ನನ್ನಲ್ಲಿಲ್ಲ. ಆದುದರಿಂದ ಬಾಯಿ ಮುಚ್ಚಿಕೊಂಡು ತೆಪ್ಪಗೆ ಕುಳಿತು ಕೇಳುತ್ತಲಿದ್ದೇನೆ. ಆದರೆ ನಾನು ಭಗವಂತನ ಕಣ್ಣಿಗೆ ಮಣ್ಣನ್ನು ಎರಚಬಲ್ಲೆನೆ? ಯಾರ ತಪ್ಪಿನ ಭಾರ ಹೊತ್ತುಕೊಂಡು ಅವಳ ಜೀವನ ಹಾಳಾಯಿತೆಂಬುದು ದೇವರಿಗೆ ಗೊತ್ತಿಲ್ಲವೆ? ನೀನೇ ಹೇಳು–ಅವಳು ಅಪರಾಧಿಯೆಂದು ನಾನು ಯಾವ ಬಾಯಿಯಿಂದ ಹೇಳಬಲ್ಲೆ? ಅವಳನ್ನು ಹರಸದೆ ನಾನು ಹೇಗೆ ಇರಲಿ? ಇಲ್ಲವಮ್ಮಾ, ಲೋಕದ ದೃಷ್ಟಿಯಲ್ಲಿ ಅವಳೆಷ್ಟೇ ಕಲಂಕಿತಳಾಗಿರಲಿ, ನಾನು ಮಾತ್ರ ಅವಳ ಮೇಲೆ ಯಾವ ದೋಷಾರೋಪಣೆಯನ್ನೂ ಮಾಡಲಾರೆ, ಯಾವ ಅಪರಾಧವನ್ನೂ ಹೊರಿಸಲಾರೆ. ನನ್ನ ಅಪರಾಧಗಳ ಮೂಲಕವೇ ನಾನು ಅವಳನ್ನು ಈ ಜನ್ಮದಲ್ಲಿ ಕಳೆದುಕೊಂಡೆ. ಆದರೆ ಮುಂದಿನ ಜನ್ಮದಲ್ಲಾದರೂ ಅವಳು ನನಗೇ ದೊರಕುವಂತೆ ಭಗವಂತನು ಅನುಗ್ರಹಿಸಲಿ."

ಹೆಚ್ಚಿಗೆ ಮಾತನಾಡಲು ನೀಲಾಂಬರನಿಂದ ಸಾಧ್ಯವಾಗಲಿಲ್ಲ. ಇಷ್ಟಕ್ಕೇ ಅವನ ಗಂಟಲು ಬಿಗಿದುಕೊಂಡಿತು. ಅದನ್ನು ನೋಡಿ ಹರಿಮತಿ ತ್ವರೆಯಿಂದೆದ್ದು ಅವನ ಬಳಿಗೆ ಬಂದು ಅವನ ಕಂಬನಿಗಳನ್ನು ಒರೆಸತೊಡಗಿದಳು. ಆಗ ಅವಳಿಗೂ ಅಳು ಬಂದಿತು. ಅಣ್ಣನು ಜರ್‍ರನೆ ಕುಸಿದುಹೋಗುತ್ತಿದ್ದಾನೆಂದು ಒಮ್ಮೆಲೇ ಅವಳಿಗೆ ಭಾಸವಾಯಿತು. ಅದರಿಂದ ಅವಳು ಅಳುತ್ತಳುತ್ತ–"ನಡೆ ಅಣ್ಣಾ, ನಿನಗೆ ಎಲ್ಲಿಗೆ ಬೇಕೋ ಅಲ್ಲಿಗೆ ಹೋಗೋಣ. ನಿನ್ನೊಬ್ಬನನ್ನೇ ಬಿಟ್ಟಿರಲು ನನಗೆ ಸಾಧ್ಯವಿಲ್ಲ" ಎಂದಳು.

ಮೊಗವೆತ್ತಿ ನೀಲಾಂಬರ ಸ್ವಲ್ಪ ಮುಗುಳುನಕ್ಕ.

ವಿರಾಜಳು ಶ್ರೀ ಜಗನ್ನಾಥಪುರಿಯ ಮಾರ್ಗದಿಂದ ಹಿಂದಿರುಗಿ ಬರುತ್ತ ಲಿದ್ದಳು. ಅವಳು ತನ್ನ ಅಂತಿಮ ಶಯ್ಯೆಯನ್ನರಸುತ್ತ ಅದೇ ಹಾದಿಯಿಂದ ಹೋಗಿದ್ದಳು. ಆ ಸ್ಥಾನವೆಲ್ಲಿದೆಯೆಂಬುದೂ ಅವಳಿಗೆ ಗೊತ್ತಿರಲಿಲ್ಲ. ಅವಳು ಆ ದಾರಿಯಿಂದ ಹೋಗುವಾಗ, ಹಾಗೂ ಅದೇ ದಾರಿಯಿಂದ ಈಗ ಮರಳು ವಾಗ ಅದೆಷ್ಟು ಅಂತರ ! ಈಗ ಅವಳು ಗೃಹಾಭಿಮುಖಿಯಾಗಿ ಹೊರಟಿದ್ದಳು. ಅವಳ ಶರೀರವು ಅತ್ಯಂತ ದುರ್ಬಲವಾಗಿತ್ತು; ಅಲ್ಲದೆ, ನಡೆದು ನಡೆದು ಆಯಾಸಗೊಂಡಿದ್ದಿತು. ಆದುದರಿಂದ ಅದು ಅತ್ಯಂತ ದೈನ್ಯತೆಯಿಂದ–"ಸ್ವಲ್ಪ ವಿಶ್ರಾಂತಿಯನ್ನಾದರೂ ತೆಗೆದುಕೊ" ಎಂದು ಒಂದೇ ಸಮನೆ ವಿರಾಜಳಲ್ಲಿ ಮೊರೆಯಿಡುತ್ತಿತ್ತು. ಆದರೆ ಆಯಾಸದಿಂದ ಸೋತುಹೋದ ತನ್ನ ಶರೀರದ ಈ ಮೊರೆ ಕೇಳಿ ವಿರಾಜಳು ಕೆರಳಿ ಕೆಂಡದಂತಾದಳು. ರೋಗ, ದುಃಖ, ಬವಣೆ ಗಳೊಂದಿಗೆ ನಿರಂತರ ಹೋರಾಡಿ ಅವಳ ಶರೀರ ಜರ್ಜರಿತವಾಗಿತ್ತು. ಈಗ ಅದೇ ಶರೀರಕ್ಕಾಗಿ ವಿಶ್ರಮಿಸಬೇಕೆಂಬ ದೀನವಾಣಿಯ ಅರಿಕೆ ಕೇಳಿ ಅವಳು ಸಿಡಿಮಿಡಿಕೊಂಡಳು. ಅವಳು ಯಾವ ಕಾರಣದಿಂದಲೂ ಒಂದು ಕ್ಷಣ ಹೊತ್ತೂ ಕಳೆಯಲು ಸಿದ್ಧಳಾಗಲಿಲ್ಲ.

ಬಹು ಹಿಂದೆಯೇ ಅವಳಿಗೆ ಉಬ್ಬಸ ಬೇನೆ ಇತ್ತು. ಈಗ ಅದು ಕ್ಷಯ ರೋಗಕ್ಕೆ ತಿರುಗಿದುದು ಅವಳಿಗೆ ತಿಳಿಯದಿರಲಿಲ್ಲ. ಆದರಿಂದ ಅವಳ ಕಳವಳಕ್ಕೆ ಮೇರೆಯೇ ಉಳಿಯಲಿಲ್ಲ. ವೇಳೆಗಳೆಯುವುದರಿಂದ ತನ್ನ ಗುರಿಯನ್ನು ಮುಟ್ಟ ಲಾರೆನೆಂಬ ವಿಚಾರ ಅವಳ ಮನದಲ್ಲಿ ಸುತ್ತಾಡತೊಡಗಿತು.

ಚಿಕ್ಕಂದಿನಿಂದಲೇ ವಿರಾಜಳಿಗೆ ಒಂದು ವಿಷಯದಲ್ಲಿ ಅತ್ಯಂತ ದೃಢ ವಿಶ್ವಾಸ. ಅದೇನೆಂದರೆ ಸ್ತ್ರೀಯು ನಿಷ್ಕಳಂಕಿತಳಿದ್ದರೆ ಮಾತ್ರ ಗಂಡನ ತೊಡೆಯ ಮೇಲೆ ಒರಗಿ ಪ್ರಾಣಬಿಡಲು ಸಾಧ್ಯ ಎಂದು. ಆದುದರಿಂದ ಅವಳು ತನ್ನ ಶರೀರವನ್ನೇ ಸಲ ಸಲವೂ ಕೇಳಿ ತಿಳಿದುಕೊಳ್ಳಬಯಸುತಿ ದ್ದಳು–ತಾನು ಪವಿತ್ರಳಹುದೋ ಅಲ್ಲವೋ ಎಂದು. ತಾನು ಈ ಪರೀಕ್ಷೆಯಲ್ಲಿ ಉತ್ತೀರ್ಣಳಾದರೆ ನಿರ್ಭಯದಿಂದಲೂ ಆನಂದದಿಂದಲೂ ಪರಲೋಕದಲ್ಲಿ ಪತಿಯ ನಿರೀಕ್ಷಣೆ ಮಾಡುತ್ತ ಕುಳಿತಿರಬಹುದೆಂಬಾಸೆ ಅವಳಿಗೆ. ಆದರೆ ದಾಮೋದರ ನದಿ ದಾಟಿ ಈಚೆಯ ಬದಿ ಸೇರಿದಾಗ ಅವಳ ಕಾಲುಗಳೇ ಸೇದಿ ಹೋದಂತಾದವು; ಬಾಯಿಂದ ರಕ್ತವೂ ಬೀಳತೊಡಗಿತು. ಹೆಜ್ಜೆ ಕಿತ್ತು

ಮುಂದಿಡಲೂ ಅವಳಿಂದಾಗದೆಹೋಯಿತು. ಆದರಿಂದ ಹತಾಶಳಾಗಿ ಅವಳು ಒಂದು ಗಿಡದಡಿ ಕುಳಿತಳು. ಮುಂದೇನು ಗತಿ ಎಂಬ ಅಳುಕಿನಿಂದ ಥರಥರ ನಡುಗುತ್ತ ಮನಸ್ಸಿನಲ್ಲೇ–“ ಇಷ್ಟು ಪ್ರಯತ್ನಪಟ್ಟರೂ ನನ್ನ ಕೊನೆಯಾಸೆ ಕೈಗೂಡಲಿಲ್ಲವೆಂದ ಬಳಿಕ ನಾನೆಂಥ ಮಹಾಪರಾಧ ಮಾಡಿರಬೇಕು ? ನನ್ನ ಈ ಜನ್ಮವೂ ನಿರರ್ಥಕವಾಯಿತು; ಮುಂದಿನ ಜನ್ಮ ಸಾರ್ಥಕವಾದೀತೆಂಬ ಆಸೆಯೂ ಉಳಿಯದಂತಾಯಿತು. ಇನ್ನೇನು ಗತಿ ನನಗೆ ? ” ಎಂದು ಚಿಂತಿಸ ತೊಡಗಿದಳು.

ವಿರಾಜಳು ಪೂರ್ಣ ನಿರಾಶಳಾದಳು. ಅವಳು ಮಲಗಿದ್ದಲ್ಲಿಂದಲೇ ಕೈ ಜೋಡಿಸಿ ಗಂಡನ ಶ್ರೀ ಚರಣಗಳಲ್ಲಿ ತನ್ನ ಪ್ರಾರ್ಥನೆ ಸಲ್ಲಿಸುತ್ತಿದ್ದಳು.

ಮಾರನೆಯ ದಿನ ತಾರಕೇಶ್ವರ ಬಳಿಯಲ್ಲಿ ಎಲ್ಲಿಯೋ ಸಂತೆ ಇದ್ದಿರ ಬೇಕು. ಆದ್ದರಿಂದ ಬೆಳಗಿನಿಂದಲೇ ಆ ಮಾರ್ಗವಾಗಿ ಅನೇಕ ಬಂಡಿಗಳು ಹೋಗತೊಡಗಿದವು. “ ನಿಮ್ಮ ಬಂಡಿಯಲ್ಲಿ ನನಗೆ ದಯವಿಟ್ಟು ಸ್ವಲ್ಪ ಸ್ಥಳ ಕೊಡುವಿರಾ ? ” ಎಂದು ವಿರಾಜಳು ಸಾಹಸ ಮಾಡಿ ಒಬ್ಬ ಬಂಡಿಕಾರನನ್ನು ಕೇಳಿದಳು. ಅವಳ ಕರುಣಾಕ್ರಂದನ ಕೇಳಿ ಆ ಗಾಡಿಕಾರ ಅವಳನ್ನು ತನ್ನ ಬಂಡಿಯಲ್ಲಿ ಕೂರಿಸಿ ತಾರಕೇಶ್ವರಕ್ಕೆ ಕರೆದೊಯ್ದನು. ಅವಳು ಮನದಲ್ಲಿಯೆ– “ ತಾರಕೇಶ್ವರದಲ್ಲಿ ಯಾವುದಾದರೊಂದು ಗುಡಿಯಲ್ಲಿ ಬಿದ್ದರಾಯಿತು. ಗುಡಿಗೆ ಹೇಗೂ ಎಷ್ಟೋ ಜನ ಬಂದು ಹೋಗುತ್ತಾರೆ. ಅವರಲ್ಲಿ ಯಾರಾದ ದೊಬ್ಬರ ಮುಖಾಂತರ ಓರಗಿತ್ತಿಗೆ ತನ್ನ ಸಮಾಚಾರ ತಿಳಿಯುವಂತೆ ಪ್ರಯತ್ನಪಡುತ್ತೇನೆ ” ಎಂದು ನಿಶ್ಚಯಿಸಿಕೊಂಡಳು.

ಅನೇಕಾನೇಕ ರೋಗಗಳಿಂದ ಬಳಲುವ ಎಷ್ಟೋ ಸ್ತ್ರೀ-ಪುರುಷರು ಗುಡಿಯ ಸುತ್ತಲೂ ಅಸ್ತವ್ಯಸ್ತವಾಗಿ ಬಿದ್ದಿದ್ದರು. ಅವರ ಜೊತೆ ಸೇರಿದಾಗ ವಿರಾಜ ಳಿಗೆ ಅದೆಷ್ಟೋ ದಿನಗಳ ನಂತರ ಅಂದು ಸ್ವಲ್ಪ ನೆಮ್ಮದಿ ಎನಿಸಿತು. “ ಇವರಂತೆ ನಾನೂ ಒಬ್ಬ ರೋಗಿಷ್ಠೆ. ನಾನು ಲೌಕಿಕ ಆಸೆಗಳಿಂದ ಮುಕ್ತ ಳಾದವಳಲ್ಲ. ಇವರಂತೆ ನಾನೂ ರೋಗ ಹಾಗೂ ಆಸೆ ಎರಡಕ್ಕೂ ಒಳಗಾಗಿ ಹೀಗೆಯೇ ಬಿದ್ದಿದ್ದೇನೆ. ಇನ್ನು ಯಾರೂ ನನ್ನ ಕಡೆ ಕಂಣೆತ್ತಿ ಕೂಡ ನೋಡರು. ನನ್ನ ಬಗೆಗೆ ಯಾರ ಕುತೂಹಲವೂ ಕೆರಳುವುದಿಲ್ಲ.” ಅಂಥ ಘೋರ ಸಂಕಟದಲ್ಲಿಯೂ ಈ ಎಲ್ಲ ವಿಷಯಗಳನ್ನು ಯೋಚಿಸುವಾಗ ವಿರಾಜಳ ಮನಕ್ಕೆ ಹರುಷವಾಗುತ್ತಿತ್ತು. ಆದರೆ ಅವಳ ರೋಗ ಮಾತ್ರ ಹೆಚ್ಚಾಯಿತಲ್ಲದೆ

ಗುಣವಾಗಲಿಲ್ಲ. ಆಗ ಮಾಘ ಮಾಸದ ವಿಪರೀತ ಚಳಿ. ಅಲ್ಲದೆ ಹೊಟ್ಟೆಗೆ ಏನೂ ಇರಲಿಲ್ಲ. ಅವಳು ನಿರಾಹಾರದಿಂದ ಆರು ದಿನಗಳನ್ನು ದೂಡಿದ್ದಳು. ಆದರೆ ಇನ್ನೊಂದೇ ಒಂದು ಹಗಲು ಕೂಡ ಕಳೆಯಬಹುದೆಂಬ ಆಸೆ ಅವಳಿಗೆ ಉಳಿಯಲಿಲ್ಲ; ಅಲ್ಲದೆ ತನ್ನ ನೆಂಟರು ಯಾರೂ ಬರುವಂತೆಯೂ ತೋರಲಿಲ್ಲ. ಈಗ ಉಳಿದುದು ಸಾವು ಮಾತ್ರ. ಆದ್ದರಿಂದ ಅವಳು ಅದನ್ನು ಎದುರುಗೊಳ್ಳುವ ಸಿದ್ಧತೆ ಮಾಡತೊಡಗಿದಳು.

ಅಂದು ಮೋಡ ಕವಿದಿದ್ದರಿಂದ ಸಂಜೆಗೆ ಮುನ್ನವೇ ಕತ್ತಲು ಕವಿದಂತಾಯಿತು. ವಿರಾಜಳು ಬಹಳ ರಕ್ತಕಾರಿದ್ದರಿಂದ ಜೀರ್ಣಶೀರ್ಣವಾದ ಅವಳ ದೇಹ ಒಮ್ಮೆಲೇ ನಿಶ್ಶಕ್ತವಾಯಿತು. ಅವಳು ಮನಸ್ಸಿನಲ್ಲೇ—"ಇನ್ನು ನನ್ನ ಅವತಾರ ಮುಗಿಯಿತು" ಎಂದುಕೊಂಡಳು. ಆಗಲೇ ಗುಡಿಯ ಹಿಂಬದಿಗೆ ಹೋಗಿ ಅಲ್ಲಿಯೇ ಮುಖ ಮುಚ್ಚಿ ಬಿದ್ದುಕೊಂಡಳು. ಮಧ್ಯಾಹ್ನ ದೇವರಿಗೆ ಆರತಿಯಾದ ಬಳಿಕ ದಿನದಂತೆ ಎದ್ದು ನಮಸ್ಕಾರ ಮಾಡಲು ಇಂದು ಅವಳಿಂದ ಸಾಧ್ಯವಾಗಲಿಲ್ಲ. ಆದ್ದರಿಂದ ಮನಸ್ಸಿನಲ್ಲೇ ದೇವರನ್ನು ನಮಸ್ಕರಿಸಿದಳು.

ಇಷ್ಟು ದಿನಗಳ ವರೆಗೆ ವಿರಾಜಳು ಗಂಡನ ಅಡಿಗಳಿಗೇ ತನ್ನ ಪ್ರಾರ್ಥನೆ ಸಲ್ಲಿಸುತ್ತಲಿದ್ದಳು. ಅವಳು ಅವಿವೇಕಿಯಲ್ಲ. ಅವಳು ತನ್ನ ಕರ್ತವ್ಯಗಳನ್ನು ಮಾಡುತ್ತಿದ್ದದ್ದು ಈ ಲೋಕದಲ್ಲಿ ಮಾತ್ರವೇ ಗಂಡನೊಂದಿಗೆ ಸುಖದಿಂದ ಬಾಳಿದರೆ ಸಾಕೆಂಬ ಒಂದೇ ಉದ್ದೇಶದಿಂದ ಅಲ್ಲ. ಮುಂದಿನ ಜನ್ಮದಲ್ಲಿಯೂ ಈ ಅಧಿಕಾರ ಕಳೆದುಕೊಳ್ಳಬಾರದೆಂಬುದೇ ಅವಳ ಹೆಬ್ಬಯಕೆ. ತಿಳಿವಳಿಕೆ ಇಲ್ಲದೆ ಮಾಡಿದ ತನ್ನ ಪಾಪಗಳ ಪ್ರಾಯಶ್ಚಿತ್ತವನ್ನು ಈ ಜನ್ಮದಲ್ಲೇ ಭೋಗಿಸಿಬಿಡಬೇಕು, ಮುಂದಿನ ಜನ್ಮಕ್ಕಾಗಿ ಉಳಿಸಬಾರದೆಂಬುದೇ ಅವಳ ಆಂತರಿಕ ಇಚ್ಛೆ. ಆದರೆ ಹಗಲು ಮುಗಿಯಬಂದಾಗ ಅವಳ ಈ ವಿಚಾರಧಾರೆ ಒಮ್ಮೆಲೇ ವಿರುದ್ಧ ದಿಕ್ಕಿಗೆ ಹೊರಳಿತು. ಒಮ್ಮೆಲೇ ಅವಳಲ್ಲಿ ದಾಸ್ಯಭಾವ ಅಳಿದುಹೋಯಿತು. ಬದಲು ವಿದ್ರೋಹಭಾವ ಮೂಡಿತು. ಅಸ್ಪಷ್ಟವಾದ ಅಭಿಮಾನದ ದನಿಯೊಂದು ಅವಳ ಚಿತ್ತವೆಲ್ಲವನ್ನೂ ವ್ಯಾಪಿಸಿ ಅವರ್ಣನೀಯ ಮಾಧುರ್ಯದೊಂದಿಗೆ ಹೊರಹೊಮ್ಮಿತು. ಅವಳು ಅದರೊಂದಿಗೇ ಮಗ್ನಳಾಗಿ ಮನಸ್ಸಿನಲ್ಲಿ—"ನೀವೇಕೆ ಹಾಗೆ ಹೇಳಬೇಕು!" ಎಂದು ಸ್ವಲ್ಪ ಸೆಡವಿನಿಂದಲೇ ಪುನಃ ಪುನಃ ಹೇಳಿಕೊಳ್ಳತೊಡಗಿದಳು.

ವಿರಾಜಳ ಎಡಗೈಯ ಎಲುಬು ಮುರಿದಿತ್ತು. ಆದರೆ ಜಾರಿ ನೆಲದ ಮೇಲೆ

ಯಾವಾಗ ಬಿದ್ದಿತ್ತೆಂಬುದು ಅವಳಿಗೆ ಗೊತ್ತೇ ಇರಲಿಲ್ಲ. ಆ ಭಾಗದಲ್ಲಿ ಒಮ್ಮೆಲೆ ವೇದನೆಯಾದುದರಿಂದ ಆರ್ತಕಂಠದಿಂದ – "ಅಮ್ಮಯ್ಯಾ !" ಎಂದು ಚೀರಿದಳು. ಆ ಮಾರ್ಗದಿಂದ ಜನರು ಅತ್ತಿತ್ತ ತೆರಪಿಲ್ಲದೆ ಓಡಾಡುತ್ತಿದ್ದರು. ಶಕ್ತಿಹೀನವಾದ ಆ ಕೈಯನ್ನು ತುಳಿದ ವ್ಯಕ್ತಿ ಅದನ್ನು ತಿಳಿದು ನಾಚಿಕೊಂಡ. ಅವನು ಆ ಕೈಯನ್ನು ಕಂಡಿರಲಿಲ್ಲ. ತನ್ನ ನಿರ್ಲಕ್ಷ್ಯತನಕ್ಕಾಗಿ ಮನದಲ್ಲಿಯೇ ತುಂಬ ಕಳವಳವಾಯಿತು ಅವನಿಗೆ. ಆಗ ಅವಳ ಹತ್ತಿರ ಬಂದು ಅವನು– "ಓಹೊ ! ಯಾರವ್ಮಾ ನೀನು ? ಬೀದಿಯ ಬದಿಯಲ್ಲಿ ಹೀಗೇಕೆ ಬಿದ್ದಿರುವೆ ? ನನ್ನಿಂದ ತಪ್ಪಾಯಿತು. ಏನು, ನೋವು ಬಹಳಾಯಿತೆ ?" ಎಂದು ಕಳಕಳಿಯಿಂದ ಕೇಳಿದ.

ವಿರಾಜಳು ಮುಖದ ಮೇಲಿನ ಪರದೆಯನ್ನು ತಟ್ಟನೆ ಬದಿಗೆ ಸರಿಸಿ ಆ ವ್ಯಕ್ತಿಯನ್ನು ನೋಡಿದಳು. ಆ ಕೂಡಲೆ ಅಸ್ಫುಟ ದನಿಯೊಂದು ಅವಳ ಕಂಠದಿಂದ ಹೊರಹೊಮ್ಮಿತು. ಅವಳು ಹಾಗೆಯೆ ಮೌನವಾಗಿ ಉಳಿದಳು. ಆ ವ್ಯಕ್ತಿ ನೀಲಾಂಬರನಲ್ಲದೆ ಬೇರಾರೂ ಇರಲಿಲ್ಲ. ಅವನೂ ಒಂದು ಸಲ ಬಾಗಿ ನೋಡಿ ಅಲ್ಲಿಂದ ಹೊರಟುಹೋದ.

ಸೂರ್ಯಾಸ್ತದ ಸಮಯ. ಪಶ್ಚಿಮಾಕಾಶವು ಶುಭ್ರವಾಗಿತ್ತು. ಸೂರ್ಯನ ಹೊಂಬಣ್ಣದ ಬಿಸಿಲು ಗುಡಿಯ ಕಳಸದ ಮೇಲೆಯೂ ಗಿಡಗಳ ತುದಿಗಳ ಮೇಲೆಯೂ ಬೀಳುತ್ತಿತ್ತು. ನೀಲಾಂಬರ ಸ್ವಲ್ಪ ದೂರ ನಿಂತುಕೊಂಡು ಹರಿಮತಿಗೆ–"ನೋಡಮ್ಮ; ಅಕೋ, ಆ ಗಿಡದಡಿಯಲ್ಲಿ ಅಶಕ್ತ ರೋಗಿಯೊಬ್ಬಳು ಬಿದ್ದಿದ್ದಾಳೆ–ನೋಡದೆಯೇ ನಾನು ಅವಳನ್ನು ತುಳಿದುಬಿಟ್ಟೆ. ತಿಂಡಿ ತೀರ್ಥ ಏನಾದರೂ ಉಳಿದಿದ್ದರೆ ಕೊಡು ಅವಳಿಗೆ. ಪಾಪ, ಬಡ ಭಿಕ್ಷುಕಿ ಇರಬೇಕು" ಎಂದ.

ಆ ಹೆಂಗುಸು ತಮ್ಮನ್ನೇ ದಿಟ್ಟಿಸಿ ನೋಡುತ್ತಿದ್ದಾಳೆಂಬು ಹರಿಮತಿಗೆ ಗೊತ್ತಾಯಿತು. ಅವಳು ಮೆಲ್ಲನೆ ಆ ಹೆಂಗುಸಿನ ಬಳಿ ಹೋಗಿ ನಿಂತಳು. ಆ ಹೆಂಗುಸಿನ ಮುಖದ ಮೇಲೆ ಸೆರಗಿದ್ದುದರಿಂದ ಅವಳ ಮುಖ ಚನ್ನಾಗಿ ಕಾಣುತ್ತಿರಲಿಲ್ಲ. ಆದರೂ ಅವಳನ್ನೆಲ್ಲಿಯೋ ನೋಡಿದ್ದಂತೆ ಭಾಸವಾಯಿತು ಹರಿಮತಿಗೆ. "ಏನಮ್ಮಾ, ನಿಮ್ಮೂರಾವುದು ?" ಎಂದು ಹರಿಮತಿ ಅವಳನ್ನು ವಿಚಾರಿಸಿದಳು. "ಸಪ್ತಗ್ರಾಮ" –ಎಂದು ಆ ಹೆಂಗುಸು ನಕ್ಕುಬಿಟ್ಟಳು.

ವಿರಾಜಳಲ್ಲಿ ಎಲ್ಲಕ್ಕೂ ಮಧುರವಾದುದು ಅವಳ ಮುಗುಳುನಗೆ. ಈ

ಲೋಕದಲ್ಲಿ ಎಷ್ಟೋ ಅಪೂರ್ವ ವ್ಯಕ್ತಿಗಳಾಗಿದ್ದಾರೆ– ಕೇವಲ ಅವರ ಮುಗುಳು ನಗೆಯನ್ನೊಮ್ಮೆ ನೋಡಿದರೆ ಸಾಕು, ಅವರನ್ನೆಂದಿಗೂ ಮರೆಯುವಂತಿಲ್ಲ. ವಿರಾಜಳ ಮುಗುಳು ನಗೆ ಅಂತಹುದು. “ ಅಯ್ಯೋ , ಇವರೇ ನನ್ನ ಅತ್ತಿಗೆ ! ” ಎಂದು ಕೂಗಿ, ಸೊರಗಿ ಕಡ್ಡಿಯಾದ ಅತ್ತಿಗೆಯ ದೇಹದ ಮೇಲೆ ಒಮ್ಮೆಲೇ ಬೋರಲು ಬಿದ್ದು, ಅವಳ ಮುಖಕ್ಕೆ ಮುಖ ಹಚ್ಚಿ ಅಳತೊಡಗಿದಳು ಹರಿಮತಿ.

ಸ್ವಲ್ಪ ದೂರದಲ್ಲಿ ನಿಂತು ನೀಲಾಂಬರನು ಎಲ್ಲವನ್ನೂ ನೋಡುತ್ತಿದ್ದ. ಅತ್ತಿಗೆ ನಾದಿನಿಯರ ಮಾತುಕತೆ ಸ್ವಲ್ಪವೂ ಕೇಳಿಸುತಿದ್ದಿಲ್ಲವಾದರೂ ಅವನಿಗೆ ತಿಳಿಯದಿದ್ದ ಸಂಗತಿ ಯಾವುದೂ ಇರಲಿಲ್ಲ. ಅವನೂ ಹತ್ತಿರ ಬಂದು ನಿಂತು ಆ ಹೆಂಗುಸನ್ನು ಅಡಿಯಿಂದ ಮುಡಿಯ ವರೆಗೆ ಚನ್ನಾಗಿ ನೋಡಿದ. ಬಳಿಕ ಶಾಂತವಾಗಿ– “ ಇಲ್ಲಿ ಬೀದಿಯಲ್ಲಿ ಅಳಬೇಡ ಪುಟ್ಟೀ, ಎದ್ದೇಳು ” ಎಂದ.

ನೀಲಾಂಬರ ತಂಗಿಯನ್ನು ಬದಿಗೆ ಸರಿಸಿದ. ಆ ಮೇಲೆ ಹೆಂಡತಿಯ ಕಾಷ್ಟಸಮವಾದ ಬಡದೇಹವನ್ನು ಮಗುವನ್ನೆತ್ತಿಕೊಳ್ಳುವಂತೆ ಎತ್ತಿಕೊಂಡು ತನ್ನ ನಿವಾಸಸ್ಥಾನಕ್ಕೆ ಹೋದ.

* * * *

ವಿರಾಜಳನ್ನು ಚಿಕಿತ್ಸೆಗಾಗಿ ಆರೋಗ್ಯಕರವಾದ ಉತ್ತಮ ನಿವಾಸಸ್ಥಾನಗಳಿಗೆ ಕರೆದೊಯ್ಯಲು ಬಹು ಪ್ರಯತ್ನ ಮಾಡಿದ್ದಾಯಿತು. ಅವಳನ್ನು ಒಲಿಸುವ ಪ್ರಯತ್ನದಲ್ಲಿಯೇ ಜನ ಬೇಸತ್ತರಲ್ಲದೆ ಅವಳು ಹೊರಡಲು ಒಪ್ಪಲಿಲ್ಲ. ಮನೆಬಿಟ್ಟು ತಾನೆಲ್ಲಿಯೂ ಹೋಗಲಾರೆನೆಂದು ಸ್ಪಷ್ಟವಾಗಿ ನುಡಿದುಬಿಟ್ಟಳು.

ಹರಿಮತಿಯನ್ನು ಮರೆಗೆ ಕರೆದು–“ಇವಳು ಇನ್ನೆಷ್ಟು ದಿನ ಬದುಕಬಹುದು ಪುಟ್ಟೀ ? ಅವಳನ್ನು ಅವಳ ಪಾಡಿಗೆ ಬಿಟ್ಟುಬಿಡು. ಅವಳಿಗಾವ ಒತ್ತಾಯವನ್ನೂ ಮಾಡಬೇಡಿ ” ಎಂದ ನೀಲಾಂಬರ.

ತಾರಕೇಶ್ವರದಲ್ಲಿ ಗಂಡನ ತೊಡೆಯ ಮೇಲೆ ತಲೆಯಿಟ್ಟು ವಿರಾಜಳು ಅನುನಯಸ್ವರದಿಂದ ಮೊಟ್ಟ ಮೊದಲು–“ನನ್ನನ್ನು ಮನೆಗೆ ಕರೆದುಕೊಂಡು ಹೋಗಿ ನನ್ನ ಮಂಚದ ಮೇಲೆ ಮಲಗಿಸಿ” ಎಂದು ಕೇಳಿಕೊಂಡಳು. ತನ್ನ ಮನೆಮಠ, ಅಲ್ಲಿಯ ವಸ್ತು, ತನ್ನ ಗಂಡ, ಇವೆಲ್ಲವುಗಳ ಬಗ್ಗೆ ಅವಳಿಗೆಷ್ಟು ಮಮತೆಯೆಂಬುದನ್ನು ಅವಳ ಮನೋಭಾವನೆಯನ್ನು ಊಹಿಸಬಲ್ಲವನೇ ಅರಿತುಕೊಳ್ಳ

ಬಲ್ಲ. ಅವಳ ಸ್ಥಿತಿಯನ್ನರಿತ ಎಂಥವನಿಗೂ ಕಂಣಲ್ಲಿ ಕಂಬನಿ ಕದಡದೆ ಇರುತ್ತಿರಲಿಲ್ಲ. ಬಹುಶಃ ಇಡಿಯ ದಿನ ಅವಳು ಪ್ರಜ್ಞಾಹೀನಳಾಗಿಯೇ ಇರುತ್ತಿದ್ದಳು. ಆದರೆ ಜ್ವರದ ಬೇಗೆ ಇಳಿದಾಗ ಮಾತ್ರ ಮನೆಯ ಪ್ರತಿಯೊಂದು ವಸ್ತುವನ್ನೂ ನಿಟ್ಟಿಸಿ ನೋಡುತ್ತಿದ್ದಳು.

ನೀಲಾಂಬರ ಬಹುಶಃ ಹೆಂಡತಿಯ ಹಾಸಿಗೆ ಬಿಟ್ಟು ಎಲ್ಲಿಗೂ ಹೋಗುತ್ತಿರಲಿಲ್ಲ. ಅವನು ಕಣ್ಣಲ್ಲಿ ಕಂಬನಿದುಂಬಿಕೊಂಡು– "ಹೇ ಭಗವಂತ, ನೀನು ಈಗಾಗಲೆ ತಕ್ಕಷ್ಟು ಶಿಕ್ಷೆ ಕೊಟ್ಟಿರುವೆ. ಈಗಲಾದರೂ ಅವಳನ್ನು ಕ್ಷಮಿಸು. ಪರಲೋಕ ಯಾತ್ರೆಗೆ ಸಿದ್ಧಳಾಗಿರುವ ಅವಳಿಗೆ ಈ ಸಂಸಾರದ ಮೋಹ ಬಿಡುವಷ್ಟು ಶಕ್ತಿಯನ್ನು ಕೊಡು" ಎಂದು ಪ್ರಾರ್ಥಿಸುತ್ತಿದ್ದ.

ವಿರಾಜಳು ಒಂದು ದಿನ ಈ ಮನೆಯನ್ನು ತೊರೆದು ಹೋಗಿದ್ದಳು. ಈಗ ಅದೇ ಮನೆಗಾಗಿ ಅವಳ ತವಕವನ್ನು ನೋಡಿ ನೀಲಾಂಬರನ ಹೃದಯ ಪರಮಾಶ್ಚರ್ಯದಿಂದ ತುಂಬಿಕೊಂಡಿತು. ಅವಳು ಮರಳಿ ಬಂದು ಎರಡು ವಾರಗಳಾಗಿದ್ದವು. ನಿನ್ನೆಯಿಂದಲೆ ಅವಳಿಗೆ ಸನ್ನಿಪಾತ ಅಂಟಿಕೊಂಡಿತ್ತು. ದಿನವೆಲ್ಲವೂ ಯದ್ವಾ ತದ್ವಾ ಬಡಬಡಿಸಿ ಇದೀಗ ಸ್ವಲ್ಪ ಹೊತ್ತಿಗೆ ಮೊದಲು ನಿದ್ದೆಹೋಗಿದ್ದಳು. ಅವಳು ಕಣ್ತೆರೆದದ್ದು ಸಾಯಂಕಾಲವಾದ ಬಳಿಕವೇ. ಹರಿಮತಿ ಬಹಳ ಹೊತ್ತು ಅತ್ತು ಅತ್ತು ಅತ್ತಿಗೆಯ ಕಾಲುಬದಿ ನಿದ್ದೆಹೋಗಿದ್ದಳು. ಮೋಹಿನಿ ವಿರಾಜಳ ತಲೆಯ ಬದಿಗೆ ಕುಳಿತಿದ್ದಳು. ಅವಳನ್ನು ನೋಡಿ–"ನನ್ನ ನಾದಿನಿ ಎಲ್ಲಿ?" ಎಂದು ಕೇಳಿದಳು ವಿರಾಜ್.

ಅಕ್ಕನ ಮುಖದ ಮೇಲೆ ಬಾಗಿ ಮೋಹಿನಿ– "ಏನಕ್ಕ, ನಾನೇ ಮೋಹಿನಿ" ಎಂದಳು.

"ಪುಟ್ಟಿ ಎಲ್ಲಿ?"

ಹರಿಮತಿಯ ಕಡೆಗೆ ಬೆರಳು ಮಾಡಿ ತೋರಿಸುತ್ತ– "ನಿನ್ನ ಕಾಲುಬಳಿ ನಿದ್ದೆಹೋಗಿದ್ದಾಳೆ" ಎಂದಳು ಮೋಹಿನಿ.

"ಅವರೆಲ್ಲಿ?"

"ದೇವರ ಮನೆಯಲ್ಲಿ ಪೂಜೆ ಮಾಡುತ್ತಿದ್ದಾರೆ."

"ಹಾಗಾದರೆ ನಾನೂ ಪೂಜೆಮಾಡುತ್ತೇನೆ" ಎಂದು ವಿರಾಜಳು ಮನದಲ್ಲಿಯೆ ಜಪಮಾಡತೊಡಗಿದಳು. ಬಹಳ ಸಮಯವಾದ ಬಳಿಕ ಎಡಗೈಯಿಂದ ಹಣೆ ಮುಟ್ಟಿ ನಮಸ್ಕಾರ ಮಾಡಿದಳು. ಬಳಿಕ ಅರೆಕ್ಷಣ ನಾದಿನಿಯ ಮುಖ

ವನ್ನೇ ನೋಡಿ ಮೆಲ್ಲ ಮೆಲ್ಲನೆ– "ತಂಗೀ, ಬಹುಶಃ ನಾನು ಇಂದೇ ಹೊರಡು ತ್ತೇನೆ. ಆದರೆ ನಿನ್ನನ್ನು ಪುನಃ ಹೊಂದಬೇಕೆಂದೂ ಇಷ್ಟು ಹತ್ತಿರದಲ್ಲಿಯೆ ಇಟ್ಟುಕೊಂಡಿರಬೇಕೆಂದೂ ನನ್ನ ಹಿರಿಯಾಸೆ ತಂಗೀ" ಎಂದಳು.

ವಿರಾಜಳನ್ನು ಬೀಳ್ಕೊಳ್ಳುವ ಸಮಯ ಬಂದಿದೆಯೆಂದು ಜನರೆಲ್ಲರಿಗೂ ನಿನ್ನೆಯೇ ತಿಳಿದಿತ್ತು. ಆದ್ದರಿಂದ ಅವಳ ಬಾಯಿಂದಲೆ ಈ ಮಾತನ್ನು ಕೇಳಿ ಮೋಹಿನಿ ಕಂಬನಿ ಮಿಡಿಯುತ್ತ ಸುಮ್ಮನೆ ಕುಳಿತಳು.

ವಿರಾಜಳಿಗೆ ಈಗ ಪೂರ್ಣ ಅರಿವು ಬಂದಿತ್ತು. ಅವಳು ದನಿಯನ್ನು ಮೃದು ವಾಗಿಸಿ– "ತಂಗೀ, ಸುಂದರಿಯನ್ನು ಸ್ವಲ್ಪ ಕರೆಕಳುಹುವೆಯಾ?" ಎಂದಳು.

ಬಿಗಿದ ಕಂಠದಿಂದ ಮೋಹಿನಿ–"ಈಗ ಅವಳನ್ನು ಕರೆದು ಏನು ಮಾಡು ವುದು ಅಕ್ಕ? ಅವಳು ಇಲ್ಲಿಗೆ ಬರಲಾರಳು" ಎಂದಳು.

"ಬರುತ್ತಾಳೆ; ಖಂಡಿತ ಬಂದೇ ಬರುತಾಳೆ. ಬೇಗ ಕರೆಕಳುಹು. ಅವಳನ್ನು ಕ್ಷಮಿಸಿ ಆಶೀರ್ವದಿಸುತ್ತೇನೆ. ನನಗೆ ಯಾರ ಮೇಲೂ ಎಳ್ಳಷ್ಟೂ ಕೋಪವೂ ಇಲ್ಲ, ದ್ವೇಷವೂ ಇಲ್ಲ. ದೇವರು ನನ್ನನ್ನು ಕ್ಷಮಿಸಿ ನನ್ನ ಪತಿ ದೇವನನ್ನು ನನಗೆ ಮರಳಿ ಕೊಟ್ಟಿದ್ದಾನೆ. ನಾನೂ ಎಲ್ಲರನ್ನೂ ಕ್ಷಮಿಸಿ ಇಲ್ಲಿಂದ ಹೊರಡುತ್ತೇನೆ."

ಮೋಹಿನಿ ಅಳುತ್ತಳುತ್ತ– "ಇದೆಂತಹ ಮಾತು ಅಕ್ಕಾ! ನೀನು ಯಾವುದೇ ಅಪರಾಧವನ್ನು ಮಾಡಿರದಿದ್ದರೂ ದೇವರು ನಿನ್ನನ್ನು ಶಿಕ್ಷಿಸಿದ. ಆದರೂ ಅವನಿಗೆ ಇಷ್ಟರಿಂದಲೇ ತೃಪ್ತಿಯಿಲ್ಲ. ಅವನು ನಿನ್ನನ್ನು ಸೆಳೆದೊಯ್ಯುವ ಯತ್ನದಲ್ಲಿಯೂ ಇದ್ದಾನೆ. ನಿನ್ನ ಕೈಯೊಂದನ್ನಂತೂ ಒಯ್ದೇಬಿಟ್ಟ. ಕೊನೆಯ ಮಟ್ಟಿಗೆ ನಿನ್ನನ್ನು ಈ ಅವಸ್ಥೆಯಲ್ಲಿಯಾದರೂ ಬಿಟ್ಟುಬಿಟ್ಟರೆ...." ಎಂದಳು.

ವಿರಾಜಳು ನಗುತ್ತ–"ನನ್ನ ದುಷ್ಕೀರ್ತಿಯಂತೂ ಹಳ್ಳಿಯಲ್ಲೆಲ್ಲ ಹಬ್ಬಿದೆ. ಅಂತಹಳನ್ನು ನೀನು ಇಟ್ಟುಕೊಂಡು ಮಾಡುವುದಾದರೂ ಏನು? ನಾನು ಬದುಕಿರುವುದರಿಂದ ಯಾವ ಲಾಭವೂ ಇಲ್ಲ ತಂಗೀ" ಎಂದಳು.

ಪ್ರತಿವಾದಿಸುತ್ತ ಮೋಹಿನಿಯೆಂದಳು–"ಲಾಭವಿದ್ದೇ ಇದೆ ಅಕ್ಕ. ನಿನ್ನ ಮೇಲೆ ಹೊರಿಸಿದ ಆರೋಪಗಳು, ನಿನಗೆ ತೊಡೆದ ಕಲಂಕಗಳು, ಎಲ್ಲವೂ ಬುಡವಿಲ್ಲದವು. ಆ ಬಗ್ಗೆ ನಮಗೆ ಸಂದೇಹವೇ ಇಲ್ಲ."

"ನಿಮಗೆ ಆ ಬಗ್ಗೆ ಯೋಚನೆಯಿರಲಿಕ್ಕಿಲ್ಲ ತಂಗೀ. ಆದರೆ ನನಗೆ ಮಾತ್ರ ಇದೆ. ನನ್ನ ಮೇಲಿನ ಆರೋಪಗಳು ಬುಡವಿಲ್ಲದವಲ್ಲ. ಅವು ನಿಜವಾದವು

ಗಳೇ. ತಂಗೀ, ನನ್ನ ಅಪರಾಧ ಸಾಮಾನ್ಯವಾಗಿರಬಹುದು. ಆದರೆ ಅಂಥ ಅಪರಾಧ ಘಟಿಸಿದ ಬಳಿಕ ಹಿಂದೂ ಕುಟುಂಬದಲ್ಲಿ ನನ್ನಂಥ ಹೆಂಗುಸಿಗೆ ಎಡೆಯೇ ಇಲ್ಲ. ದೇವರು ದಯಾಹೀನನೆಂದು ನೀವು ತಿಳಿದಿದ್ದೀರಿ. ಆದರೆ.... ”

ವಿರಾಜಳು ತನ್ನ ಮಾತನ್ನು ಪೂರ್ಣಗೊಳಿಸುವ ಮೊದಲೇ ಹರಿಮತಿಯು ಧಾರೆಗಟ್ಟಿ ಹರಿಯುತ್ತಿರುವ ಕಂಬನಿಗಳಿಂದ ಕಂಠವು ಬಿಗಿದುಬರುತ್ತಿರಲು– “ಅಬ್ಬಾ–ದೇವರ ದಯೆಯನ್ನೆಂತು ಬಣ್ಣಿಸಲಿ !” ಎಂದು ಸಿಡಿದೆರಗಿದಳು.

ಹರಿಮತಿ ಎಲ್ಲ ಮಾತನ್ನೂ ಆಳುತ್ತ ಮೌನವಾಗಿ ಕೇಳುತ್ತಿದ್ದಳು. ಆದರೆ ಕೊನೆಯ ಮಾತು ಅವಳಿಗೆ ಸಹನವಾಗದ್ದರಿಂದ ಅವಳು ಹಾಗೆ ಸಿಡಿದಳು. ಅವಳು ಒತ್ತರಿಸಿ ಬರುತ್ತಿರುವ ದುಃಖದಿಂದ–“ ಇಲ್ಲ ಇಲ್ಲ, ದೇವರಿಗೆ ಸ್ವಲ್ಪವೂ ದಯೆಯಿಲ್ಲ; ನ್ಯಾಯಾನ್ಯಾಯ ವಿಚಾರಬುದ್ಧಿಯೂ ಇಲ್ಲ. ನಿಜವಾದ ಅಪರಾಧಿಗಳಿಗೆ ಯಾವ ಶಿಕ್ಷೆಯೂ ಆಗಲಿಲ್ಲ. ಶಿಕ್ಷೆಯಾದದ್ದು ನಿರಪರಾಧಿಗಳಾದ ನಮಗೆ; ಅದೂ ಕೂಡ ಕಠಿಣ ಶಿಕ್ಷೆ ! ” ಎಂದಳು.

ಅವಳು ಒಂದೇಸಮನಾಗಿ ಆಳುತ್ತಿದ್ದುದನ್ನು ನೋಡಿ ವಿರಾಜಳು ಮುಗುಳು ನಕ್ಕಳು. ಅದೆಷ್ಟು ಮಧುರವಾದ ಸ್ನೇಹಪೂರ್ಣವಾದ ನಗೆ ಅದು! ವಿರಾಜಳು ಕೃತ್ರಿಮ ಕೋಪದಿಂದ –“ ಸುಮ್ಮನಿರೆ ಹುಚ್ಚಿ, ಬೊಬ್ಬೆಹೊಡೆಯಬೇಡ ” ಎಂದಳು.

ಹರಿಮತಿಯು ಆಗ ಚಟ್ಟನೆದ್ದು ಅತ್ತಿಗೆಯ ಕತ್ತನ್ನು ತಬ್ಬಿಕೊಂಡು ಏರುದನಿಯಿಂದ–“ ನಮ್ಮನ್ನು ಬಿಟ್ಟು ಹೋಗಬೇಡ ಅತ್ತಿಗೆ! ನಿನ್ನ ವಿಯೋಗವನ್ನು ನಾವು ಯಾರೂ ಸಹಿಸಲಾರೆವು. ಔಷಧೋಪಚಾರ ಪಡೆದು ಯಾವುದಾದರೊಂದು ಒಳ್ಳೆಯ ಆರೋಗ್ಯ ಧಾಮಕ್ಕೆ ಹೋಗಿ ಸುಖವಾಗಿರು ಅತ್ತಿಗೆ! ನಿನ್ನ ಕಾಲಿಗೆ ಬೀಳುತ್ತೇನೆ, ಹೇಗಾದರೂ ಇನ್ನೂ ನಾಲ್ಕು ದಿನ ಬದುಕು” ಎಂದು ಕೂಗತೊಡಗಿದಳು.

ಅವಳ ಚೀರಾಟ ಕೇಳಿ ನೀಲಾಂಬರ ಪೂಜೆ ನಿಲ್ಲಿಸಿ ಭಯದಿಂದ ನಡುಗುತ್ತ ಮೆಲ್ಲಗೆ ಮರೆಗೆ ಬಂದು ನಿಂತುಕೊಂಡ. ಅವಳು ಬಡಬಡಿಸುತ್ತ– “ ಹೇಗಾದರೂ ಇನ್ನೆರಡು ದಿನ ಜೀವ ಹಿಡಿದುಕೊಂಡಿರು ಅತ್ತಿಗೆ ” ಎಂದು ಬೇಡಿಕೊಳ್ಳತೊಡಗಿದಳು. ವಿರಾಜಳ ಕಣ್ಣುಗಳಿಂದ ಕಂಬನಿಗಳೆರಡು ಜಾರಿದವು. ಮೋಹಿನಿಯು ಸಾವಧಾನದಿಂದ ಅಕ್ಕನ ಕಂಬನಿ ಒರಸಿ ಹರಿಮತಿಯನ್ನು ತನ್ನೆಡೆಗೆ ಸೆಳೆದುಕೊಂಡಳು. ವಿರಾಜಳು ಒಮ್ಮೆಗೇ ತಂಗಿಯ ಮಡಿಲಲ್ಲಿ

ಮುಖ ಹುದುಗಿಸಿ, ಎಲ್ಲರನ್ನೂ ಅಳುವಂತೆ ಮಾಡಿ ತಾನೂ ಅಳತೊಡಗಿದಳು. ಬಹಳಷ್ಟು ಹೊತ್ತು ಒಂದೇ ಸಮನಾಗಿ ಅತ್ತ ಬಳಿಕ ಅವಳು ಇಳಿದನಿಯಿಂದ– "ಅಳಬೇಡಮ್ಮಾ ಪುಟ್ಟೀ, ನನ್ನ ಒಂದು ಮಾತು ಕೇಳು" ಎಂದಳು.

ನೀಲಾಂಬರ ಮರೆಯಲ್ಲಿ ನಿಂತು ಕೇಳತೊಡಗಿದ. ವಿರಾಜಳು ಪ್ರಜ್ಞೆಯಿಂದ ಮಾತನಾಡುತ್ತಿರುವುದನ್ನು ಕಂಡು ಅವಳ ಅವಸಾನ ಸಮಿಾಪಿಸಿತೆಂದು ಅವನು ತಿಳಿದುಕೊಂಡನು.

ವಿರಾಜಳು ಹೇಳತೊಡಗಿದಳು–"ಪುಟ್ಟೀ, ಪೂರ್ಣವಾಗಿ ತಿಳಿದುಕೊಳ್ಳದೆ ದೇವರನ್ನು ಶಪಿಸಬೇಡಮ್ಮ! ಪ್ರತಿಯೊಬ್ಬರ ವಿಷಯವನ್ನೂ ಭಗವಂತನು ಅತಿ ಸೂಕ್ಷ್ಮವಾಗಿ ಯೋಚಿಸುತ್ತಾನೆ. ನನ್ನ ಈ ಪರಿಸ್ಥಿತಿಯಲ್ಲಿ ನನಗೆಂತಹ ದಯೆ ತೋರಿದ್ದಾನೆಂಬುದನ್ನು ನಾನಲ್ಲದೆ ಬೇರೆ ಯಾರೂ ಅರಿಯರು. ನನಗೀಗ ಸಾವೇ ಜೀವನವಿದ್ದ ಹಾಗೆ. ನಾನು ನಿಮ್ಮನ್ನಗಲಿದ ಬಳಿಕ ಎಲ್ಲವೂ ನಿಮಗೆ ತಿಳಿದುಬರುವುದು. ದೇವರು ನನ್ನ ಒಂದು ಕಣ್ಣನ್ನೂ ಕೈಯನ್ನೂ ಕಸಿದು ಕೊಂಡಿದ್ದಾನೆಂದು ನೀವು ದೂರುತ್ತಿದ್ದೀರಿ. ಆದರೆ ಇಂದಿಲ್ಲ ನಾಳೆಯಾದರೂ ಇವು ಹೋಗುವ ವಸ್ತುಗಳೇ. ಆದರೆ ಇಷ್ಟೇ ಅಲ್ಪ ಶಿಕ್ಷೆ ಕೊಟ್ಟು ಅವನು ನನ್ನನ್ನು ನಿಮಗೆ ಒಪ್ಪಿಸಿದ್ದಾನೆ. ಇದನ್ನು ನೀವು ಮರೆಯಕೂಡದು ತಂಗಿ!"

"ಅವನು ಒಪ್ಪಿಸಿದ್ದು ಮಣ್ಣು" ಎಂದು ಮೂದಲಿಸಿ ಹರಿಮತಿ ಅಳ ತೊಡಗಿದಳು.

ಭಗವಂತನ ದಯೆಯಲ್ಲಾಗಲಿ ಸೂಕ್ಷ್ಮ ದೃಷ್ಟಿಯಲ್ಲಾಗಲಿ ಹರಿಮತಿಗೆ ಸ್ವಲ್ಪವೂ ನಂಬುಗೆಯಾಗಲಿಲ್ಲ. ಬದಲಾಗಿ, ಭಗವಂತನು ಆರಂಭದಿಂದಲೂ ಅನ್ಯಾಯ, ಅತ್ಯಾಚಾರಗಳನ್ನೇ ಮಾಡಿದ್ದಾನೆಂದು ಅವಳಿಗೆನಿಸಿತು. ಸ್ವಲ್ಪ ಸಮಯ ತಡೆದು ವಿರಾಜಳು–"ಪುಟ್ಟೀ, ನಿನ್ನಣ್ಣ ಎಲ್ಲಿದ್ದಾರೆಯೆ? ಅವರನ್ನು ಸ್ವಲ್ಪ ಕರೆ. ನೋಡಿ ಬಹಳ ಹೊತ್ತಾಯಿತು" ಎಂದಳು.

ನೀಲಾಂಬರ ಹತ್ತಿರವೇ, ಗೋಡೆಗೆ ಮರೆಯಾಗಿ ನಿಂತಿದ್ದ. ಅವನು ಬಂದ ಕೂಡಲೆ ಮೋಹಿನಿ ಹಾಸಿಗೆ ಬಿಟ್ಟು ದೂರ ಹೋಗಿ ನಿಂತಳು. ನೀಲಾಂಬರ ವಿರಾಜಳ ತಲೆಯ ಬದಿಗೆ ಕುಳಿತ. ಹೆಂಡತಿಯ ಕೈಯನ್ನು ಅತಿ ಜೋಕೆಯಿಂದ ಹಿಡಿದು ನಾಡಿ ಪರೀಕ್ಷಿಸತೊಡಗಿದ. ನಿಜವಾಗಿಯೂ ವಿರಾಜಳ ನಾಡಿ ಬಲಗುಂದಿತ್ತು. ಜ್ವರದ ಬೇಗೆಯಿಂದ ಹೀಗೆ ಬಡಬಡಿಸುತ್ತಿದ್ದಾಳೆಂದೂ ಬೇಗೆ ಕಡಮೆಯಾದಂತೆ ಅವಳ ಅವಸಾನವೂ ಸಮಿಾಪಿಸುವುದೆಂದೂ ನೀಲಾಂ-

ಬರ ಮರೆಗೆ ನಿಂತಾಗಲೆ ಊಹಿಸಿದ್ದ. ನಾಡಿಯನ್ನು ಪರೀಕ್ಷಿಸಿದಾಗ ತನ್ನ ಊಹೆ ಸರಿಯೆಂದೆನಿಸಿತು ಅವನಿಗೆ.

"ನೀವೂ ಒಳ್ಳೆಯ ನಾಡಿಪರೀಕ್ಷಕರು!" ಎಂದು ವಿರಾಜಳು ಗೇಲಿ ಮಾಡಿ ನಗತೊಡಗಿದಳು.

ಇದೆಂತಹ ಮರ್ಮಾಂತಿಕ ಪರಿಹಾಸ! ನಾಡಿ ನೋಡಿದೊಡನೆಯೆ ನೀಲಾಂಬರ ಹತಾಶನಾಗಿ ಅವನ ಮುಖ ಕಪ್ಪಿಟ್ಟಿತು. ಅವಳ ಚೇಷ್ಟೆಯಿಂದ ಅವನ ಹೃದಯಕ್ಕೆ ನೋವಾಗಿ ಮುಖ ಕಪ್ಪಿಟ್ಟಿತೆಂದು ಅಲ್ಲಿ ನಿಂತ ಜನ ಭಾವಿಸಿದರು. ಗಂಡನ ಮುಖ ವಿವರ್ಣವಾದುದನ್ನು ಬಹುಶಃ ವಿರಾಜಳೂ ನೋಡಿರಬಹುದು. ಅವಳು ಪಶ್ಚಾತ್ತಾಪ ಪ್ರಕಟಿಸುತ್ತ ತಟ್ಟನೆ–"ಅಲ್ಲ, ಹಾಗಲ್ಲ ನನ್ನ ಅರ್ಥ. ಹೇಳಿ, ಈಗ ಹೇಗಿವೆ ನನಗೆ? ಇನ್ನೂ ಎಷ್ಟು ಹೊತ್ತು ಜೀವಿಸಿರಬಲ್ಲೆ ನಾನು?" ಎಂದಳು.

ಬಳಿಕ ಅವಳು ಅತ್ಯಂತ ಪ್ರಯಾಸದಿಂದ ತನ್ನ ತಲೆಯನ್ನು ಗಂಡನ ತೊಡೆಯ ಮೇಲಿರಿಸುತ್ತ–"ನನ್ನನ್ನು ಕ್ಷಮಿಸಿದಿರೊ ಇಲ್ಲವೊ ಎಂಬುದನ್ನು ಎಲ್ಲರ ಸಮಕ್ಷಮ ಹೇಳಿಬಿಡಿ" ಎಂದಳು. ನೀಲಾಂಬರನು ಬಿಗಿದ ಕಂಠದಿಂದ "ಕ್ಷಮಿಸಿದ್ದೇನೆ" ಎಂದು, ಕಣ್ಣನ್ನು ಒತ್ತಿಕೊಂಡ.

ವಿರಾಜಳು ಅರೆ ಕ್ಷಣ ಕಣ್ಣು ಮುಚ್ಚಿ, ಬಳಿಕ ಮೃದು ದನಿಯಿಂದ–"ಇಷ್ಟು ದಿನಗಳ ವರೆಗೆ ನಾನು ಈ ಕುಟುಂಬದ ಯಜಮಾನಿಯಾಗಿದ್ದೆ. ಈ ವರೆಗೆ ನಾನೆಷ್ಟೋ ತಪ್ಪುಗಳನ್ನು ಮಾಡಿದ್ದೇನೆ. ನಿಮ್ಮೊಂದಿಗೆ ಅನೇಕ ಸಲ ಅನ್ಯಾಯವಾಗಿ ನಡೆದುಕೊಂಡಿರಬಹುದು. ಆದುದರಿಂದ ತಂಗೀ, ನನ್ನ ಮಾತನ್ನಿಷ್ಟು ಕೇಳು. ನನ್ನ ಮುದ್ದು ನಾದಿನಿ, ನೀನೂ ಕೇಳು. ಇಂದು ನಾನು ಹೊರಟು ಹೋಗುತ್ತಿದ್ದೇನೆ. ನನ್ನೆಲ್ಲ ತಪ್ಪು ತಡೆಗಳನ್ನೂ ಅನ್ಯಾಯ ಉಪದ್ರವಗಳನ್ನೂ ನುಂಗಿ ನನ್ನನ್ನು ಬೀಳ್ಕೊಡಿರಿ" ಎಂದು ಕೇಳಿಕೊಂಡಳು.

ವಿರಾಜಳು ಕೈಯನ್ನು ಮುಂದೆ ಮಾಡಿ ಗಂಡನ ಚರಣಗಳನ್ನು ಹುಡುಕತೊಡಗಿದಳು. ನೀಲಾಂಬರನು ತನ್ನ ಕಾಲನ್ನು ಹೊರದೆಗೆದು ದಿಂಬಿನ ಮೇಲೆ ಇಟ್ಟನು. ಅವಳು ಗಂಡನ ಪಾದಧೂಳಿಯನ್ನು ತಲೆಗೆ ಸವರಿಕೊಳ್ಳುತ್ತ–"ಎಷ್ಟೋ ದಿನಗಳಿಂದ ನಾನು ಅನೇಕ ದುಃಖ ದುಮ್ಮಾನಗಳನ್ನು ಸಹಿಸಿದೆ. ಅವೆಲ್ಲವೂ ಇಂದು ಸಾರ್ಥಕವಾದವು. ಇನ್ನು ನನಗೆ ಯಾವ ಚಿಂತೆಯೂ ಇಲ್ಲ. ನನ್ನ ಈ ದೇಹ ಪವಿತ್ರವಾಯಿತು. ನಾನಿನ್ನು ಹೊರಟೆ. ಅದಕ್ಕಾಗಿ ಈಗಲೇ

ಸಿದ್ಧಳಾಗಿ ಬಿಟ್ಟಿದ್ದೇನೆ" ಎಂದು ಮುಗ್ಗುಲಾದಳು. ಆ ಮೇಲೆ ಗಂಡನ ತೊಡೆಯಲ್ಲಿ ಮುಖವಿಡಿಸಿ–"ನನ್ನನ್ನು ಹೀಗೇ ಇರಗೊಡಿ. ನನ್ನನ್ನು ಬಿಟ್ಟು ಎಲ್ಲಿಗೂ ಹೋಗಬೇಡಿ" ಎಂದು ಪ್ರಾರ್ಥಿಸಿಕೊಂಡಳು.

ವಿರಾಜಳು ಸುಮ್ಮನಾದಳು. ಹೆಚ್ಚಿಗೆ ಮಾತನಾಡುವಷ್ಟು ಶಕ್ತಿಯೂ ಅವಳಿಗಿರಲಿಲ್ಲ. ತುಂಬಾ ನಿತ್ರಾಣ ಎನಿಸುತ್ತಿತ್ತು ಅವಳಿಗೆ.

ಜನರೆಲ್ಲರೂ ಸಪ್ಪೆ ಮುಖ ಮಾಡಿಕೊಂಡು ಅಲ್ಲಿಯೇ ಕುಳಿತರು. ಮಧ್ಯರಾತ್ರಿಯ ಬಳಿಕ ವಿರಾಜಳು ಯದ್ವಾ ತದ್ವಾ ಬಡಬಡಿಸತೊಡಗಿದಳು. ತಾನು ನದಿಯಲ್ಲಿ ಹಾರಿದ ಸಂಗತಿ, ಆಸ್ಪತ್ರೆಗೆ ಸೇರಿದ ವಿಷಯ, ಉದ್ದೇಶವಿಲ್ಲದೆ ಅತ್ತಿತ್ತ ಅಲೆದ ವೃತ್ತಾಂತ, ಎಲ್ಲವನ್ನೂ ಹೇಳಿದಳು. ಆದರೆ ಈ ಎಲ್ಲ ಕಥೆಯಲ್ಲಿ ಮೊದಲಿನಿಂದ ಕೊನೆಯ ವರೆಗೆ ಒಂದೇ ಒಂದು ಮಾತು ಎದ್ದು ಕಾಣುತ್ತಿತ್ತು–ಕ್ಷಣ ಹೊತ್ತಿನ ತಪ್ಪಿನಿಂದ ಆ ಸತೀಸಾಧ್ವಿಯ ಅತ್ಯಂತ ಕಠೋರವಾದ ಏಕಾಗ್ರವಾದ ಪತಿಪ್ರೇಮ ಅವಳ ಹೃದಯವನ್ನು ಒಂದೇ ಸಮನಾಗಿ ಸುಡುತ್ತಿತ್ತು ಎಂಬುದು.

ವಿರಾಜಳು ಮನೆಗೆ ಮರಳಿ ಬಂದ ಬಳಿಕ ಕೆಲ ದಿನಗಳಿಂದ ನೀಲಾಂಬರನು ಅವಳ ಹತ್ತಿರವೇ ಕುಳಿತು ಊಟ ಮಾಡಬೇಕಾಗಿ ಬಂದಿತು. ಅಂದು ವಿರಾಜಳು ಕೆಲ ಸಲ ಓರಗಿತ್ತಿಯನ್ನು ಕೂಗಿ, ಕೆಲ ಸಲ ಹರಿಮತಿಯನ್ನು ಕೂಗಿ ಏನೇನೋ ಬಡಬಡಿಸತೊಡಗಿದಳು.

ಬೆಳಗು ಬೆಳಗಾಗುತ್ತಲೇ ಅವಳ ಬಡಬಡಿಕೆ ನಿಂತಂತಾಗಿ, ಶ್ವಾಸೋಚ್ಛ್ವಾಸ ಜೋರಾಗತೊಡಗಿತು. ಅವಳು ಪುನಃ ಕಣ್ದೆರೆಯಲೇ ಇಲ್ಲ; ಮಾತನ್ನೂ ಆಡಲಿಲ್ಲ. ಗಂಡನ ತೊಡೆಯ ಮೇಲೆ ತಲೆಯಿಟ್ಟು ಸೂರ್ಯೋದಯದ ಸಮಯಕ್ಕೆ ಅವಳ ಜೀವನಲೀಲೆ ಸಮಾಪ್ತವಾಯಿತು.

ಓರ್ವ ದುಃಖಿನಿಯ ದುಃಖವು ಹೀಗೆ ಕೊನೆಗಂಡಿತು.




---

# ಕೆಲವು ಸಂಗ್ರಾಹ್ಯ ಪುಸ್ತಕಗಳು

| | | | |
|---|---|---|---|
| ಅರವಿಂದ ದರ್ಶನ | ಶ್ರೀ ಅರವಿಂದರು | ಉತ್ತಮ ಪ್ರತಿ | ೩—೮—೦ |
| | | ಕೆಲಿಕೊ ,, | ೪—೦—೦ |
| ಭಾರತೀಯ ರಾಜ್ಯಧರ್ಮ | ,, | | ೧—೪—೦ |
| ಮಾತೃವಾಣಿ II | ಶ್ರೀ ಮಾತಾ | | ೦—೩—೦ |
| ಸಂಸಾರಚಿತ್ರ | ಆನಂದಕಂದ | | ೨—೪—೦ |
| ಮಕ್ಕಳ ಬಸವಣ್ಣನವರು | ,, | | ೦—೮—೦ |
| ತಿರುಗಿ ಮನೆಗೆ | ಚಾರು ವಂದ್ಯೋಪಾಧ್ಯಾಯ | | ೧-೧೦—೦ |
| ನೃತ್ಯಕಾಲಿ | ,, | | ೦—೬—೦ |
| ಮಾತೃಶ್ರೀ | ಸಿ. ಎಂ ವಿ ಶರ್ಮ | | ೧—೪—೦ |
| ಗ್ರೀಕ್ ನಾಟಕ ಕಥೆಗಳು | ಡಿ. ವಿ. ಶೇಷಗಿರಿರಾವ್ | | ೨—೮—೦ |
| ಭಾರತದಿಂದ ತೊಲಗಿರಿ | ಗಾಂಧೀಜಿ | | ೧—೪—೦ |
| ಮಂಗಲ ಪ್ರಭಾತ | ,, | | ೦-೧೨—೦ |
| ನನ್ನ ಆರಂಭಜೀವನ | ,, | | ೧—೪—೦ |
| ಪರಿತ್ಯಕ್ತೆ | ಗುರುನಾಥ ಜೋಷಿ | | ೧—೪—೦ |
| ಗರತಿಯ ಹಾಡು | ಹಲಸಂಗಿ ಗೆಳೆಯರು | | ೧—೮—೦ |
| ಆರ್ಯಧರ್ಮ ಪ್ರದೀಪ | ಹೆಚ್. ಚಿದಂಬರಯ್ಯ | | ೮—೦—೦ |
| ಮಕ್ಕಳ ಮಹಾತ್ಮಾ ಗಾಂಧಿ | ಹೊಯ್ಸಳ ಮತ್ತು ಶರ್ಮ | | ೦-೧೨—೦ |
| ಎಣ್ಣೆ ತೆಗೆಯುವುದು | ಜೆ. ಟಿ ಪಟೇಲ್ | | ೦-೧೨—೦ |
| ತೊಗಲು ಹದಮಾಡುವುದು | ಸತೀಶಚಂದ್ರ ದಾಸಗುಪ್ತ | | ೦-೧೨—೦ |
| ಕ್ರಾಂತಿಪಥದಲ್ಲಿ | ಜೈಪ್ರಕಾಶ ನಾರಾಯಣ | | ೩—೮—೦ |
| ವರ್ಧಾ ಶಿಕ್ಷಣಯೋಜನೆ | ಡಾ. ಝಕೀರ್ ಹುಸೇನ್ | | ೦-೧೨—೦ |
| ಸಂಪಿಗೆ | ಕುಲಕರ್ಣಿ ಶ್ರೀನಿವಾಸ | | ೦-೧೦—೦ |
| ಸಾಹಿತ್ಯದ ಹಿನ್ನೆಲೆ | ಕೆ. ವೆಂಕಟರಾಯಾಚಾರ್ಯ | ನಾ. ಪ್ರ. | ೧—೮—೦ |
| | | ಉತ್ತಮ ಪ್ರತಿ | ೨—೦—೦ |
| ಗಾಂಧೀ ವಿಚಾರದೋಹನ | ಕೆ. ಜಿ. ಮಶ್ರೂವಾಲಾ | | ೩—೦—೦ |
| ಬಾಳಿನ ಗಿಡ | ದಿ ಎಂ ಹರಿದಾಸರಾಯರು | | ೨—೮—೦ |
| ಕೈಹಿಡಿದ ಕಾವೇರಿ | ,, | | ೨—೪—೦ |
| ಹಸಿದ ಹಂಬಲು | ,, | | ೧—೮—೦ |
| ಹುಚ್ಚರ ಮನೆ | ,, | | ೧—೮—೦ |
| ಧಾರವಾಡದ ಹುಡುಗಿ | ,, | | ೧—೮—೦ |
| ಭಾರತೀಯ ಕಥೆಗಳು | ,, | | ೧—೦—೦ |
| ಎಚ್ಚತ್ತ ಆಗ್ನೇಯ ಏಷಿಯಾ | ,, | | ೧—೮—೦ |
| ಮರುಭೂಮಿಯ ಅರಬರು | ,, | | ೧—೮—೦ |

| | | | |
|---|---|---|---|
| ಇಂದಿನ ಫಿಲಸಾಫ್ಯಾನ್ಸ್ | ದಿ. ಎಂ. ಹರಿದಾಸರಾಯರು | | ೦—೩—೦ |
| ಉಕ್ಕಿನ ಮನುಷ್ಯ | ,, | | ೨—೦—೦ |
| ಸಿರಿಗನ್ನಡ ಮಹಾಭಾರತ | ,, | | ೩—೦—೦ |
| ಸಚಿತ್ರ ಕಾಮಸೂತ್ರ | ,, | | ೧—೮—೦ |
| ಕಾವ್ಯದ ಕಾರಖಾನೆ | ಏನ್ಕೆ ಕುಲಕರ್ಣಿ | | ೧—೪—೦ |
| ಅಕ್ಕ ತಂಗಿ | ನಾರಾಯಣ ಸಂಗಮ | | ೨—೮—೦ |
| ಭಾರತೀಯ ಘಟನಾ ಸಮಿತಿ | ನಾರಾಯಣ ಶರ್ಮ | | ೧—೦—೦ |
| ಮಗಳಿಗೆ ತಂದೆಯ ಓಲೆಗಳು | ಪಂ. ನೆಹರು | ಸಾದಾ ಪ್ರತಿ | ೧—೬—೦ |
| | | ಉತ್ತಮ ,, | ೧-೧೨—೦ |
| ಸೇನಾಪತಿ ಡಾ. ಹರ್ಡೀಕರರು | ರಾ ವೆ. ಕರಿಗುದುರಿ | | ೧—೦—೦ |
| ಯುದ್ಧರಂಗದಿಂದ | ಆರ್. ಎ ರಾವ್ | | ೧—೪—೦ |
| ಬೋಧಾಮೃತ | ರಾಮಕೃಷ್ಣ ಪರಮಹಂಸ | ಸಾದಾ ಪ್ರತಿ | ೧-೧೦ -೦ |
| | | ಉತ್ತಮ ,, | ೨—೦—೦ |
| ಹಾಳುಮನೆ | ರವೀಂದ್ರನಾಥ ಠಾಕೂರರು | | ೧—೦—೦ |
| ಪುಸ್ತಕ ಪ್ರಪಂಚ | ಸ. ಸ. ಮಾಳವಾಡ | | ೧—೦—೦ |
| ಚಂದ್ರನಾಥ | ಶರಚ್ಚಂದ್ರ | | ೧—೪—೦ |
| ನವವಿಧಾನ | ,, | | ೦-೧೨—೦ |
| ಕನ್ನಡ ತಾಯಿ | ಸೌ. ಶಾಂತಾದೇವಿ ಮಾಳವಾಡ | | ೧—೪—೦ |
| ಕರ್ಮಯೋಗ | ಸ್ವಾಮಿ ವಿವೇಕಾನಂದ | | ೧-೧೨—೦ |
| ಲೋಕಮಾನ್ಯ ಟಿಳಕರು | ವಿವಿಧ ಲೇಖಕರು | ಸಾದಾ ಪ್ರತಿ | ೧-೧೨—೦ |
| | | ಕೆಲಿಕೊ ,, | ೩—೪—೦ |
| ವಾತ್ಸಾಯನ ಕಾಮಸೂತ್ರಗಳು | ಪ್ರಾಚೀನ ಸಂಸ್ಕೃತಗ್ರಂಥಾನುವಾದ | | ೬—೦—೦ |
| ನಪುಂಸಕತೆ | — | | ೦—೫—೦ |
| ಗೋದಾನ | ದಿ. ಪ್ರೇಮಚಂದ | ಸಾದಾ ಪ್ರತಿ | ೩-೧೨—೧ |
| | | ಕೆಲಿಕೊ ,, | ೫—೪—೦ |
| ಮದುವೆಯ ಪತ್ತಲ | ಬೇಂದ್ರೆ ಲಕ್ಷ್ಮಣರಾಯರು | ಸಾದಾ ಪ್ರತಿ | ೧-೧೨—೦ |
| | | ಕೆಲಿಕೊ ,, | ೩—೮—೦ |
| ಮಲ್ಲಿಗೆ ದಂಡೆ | ಕಾಪಸೆ ರೇವಪ್ಪ | | ೨—೦—೦ |
| ಹೊಬಿಸಿಲು | ಸೌ. ಶಾಮಲಾದೇವಿ | | ೧—೦—೦ |
| ಹೊಂಬಿಸಿಲು | ,, | | ೧—೮—೦ |
| ಕಳೆದ ಪುಟಗಳು | ವಿನೀತ ರಾಮಚಂದ್ರರಾವ್ | | ೧—೪—೦ |
| ಮಾನೌಮಿ ಚೌಪದ | ಎಸ್. ಅನಂತರಂಗಾಚಾರ್ಯ | | ೦—೩—೦ |

## ಸಾಹಿತ್ಯ ಭಂಡಾರ, ಹುಬ್ಬಳ್ಳಿ